# ಸಾಮಾಜಿಕ ಬದಲಾವಣೆಯಲ್ಲಿ ಕೊರಗರು

## (ಉಡುಪಿ ಹಾಗೂ ದಕ್ಷಿಣ ಕನ್ನಡ ಜಿಲ್ಲೆಯನ್ನು ಪರಿಗಣಿಸಿ)

---

ಪಿಎಚ್.ಡಿ. ಪದವಿಗಾಗಿ ಸಮಾಜಶಾಸ್ತ್ರ ವಿಷಯದಲ್ಲಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿರುವ ಸಂಶೋಧನಾ
ಮಹಾಪ್ರಬಂಧ

ಸಂಶೋಧಕರು
ರಾಘವೇಂದ್ರ ಎಲ್.

ಮಾರ್ಗದರ್ಶಕರು
ಡಾ. ಗಂಗಾಧರ ದೈವಜ್ಞ
ಪ್ರಾಧ್ಯಾಪಕರು





ಬುಡಕಟ್ಟು ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೬

# ಸಾಮಾಜಿಕ ಬದಲಾವಣೆಯಲ್ಲಿ ಕೊರಗರು

## (ಉಡುಪಿ ಹಾಗೂ ದಕ್ಷಿಣ ಕನ್ನಡ ಜಿಲ್ಲೆಯನ್ನು ಪರಿಗಣಿಸಿ)

ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಮಾಜಶಾಸ್ತ್ರ ವಿಷಯದಲ್ಲಿ ಸಾದರಪಡಿಸುತ್ತಿರುವ ಮಹಾಪ್ರಬಂಧ



ಸಂಶೋಧಕರು
**ರಾಘವೇಂದ್ರ ಎಲ್.**

ಮಾರ್ಗದರ್ಶಕರು
**ಡಾ. ಗಂಗಾಧರ ದೈವಜ್ಞ**
ಪ್ರಾಧ್ಯಾಪಕರು



ಬುಡಕಟ್ಟು ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೭



# ಮಾರ್ಗದರ್ಶಕರ ದೃಢೀಕರಣ ಪತ್ರ

**ರಾಘವೇಂದ್ರ ಎಲ್.** ಅವರು ಸಮಾಜಶಾಸ್ತ್ರ ವಿಷಯದಲ್ಲಿ ಪಿಎಚ್. ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **"ಸಾಮಾಜಿಕ ಬದಲಾವಣೆಯಲ್ಲಿ ಕೊರಗರು"** (ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಯನ್ನು ಪರಿಗಣಿಸಿ) ಎಂಬ ವಿಷಯದ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ್ದಾರೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ :

ಸ್ಥಳ : ವಿದ್ಯಾರಣ್ಯ

**(ಡಾ. ಗಂಗಾಧರ ದೈವಜ್ಞ)**
ಪ್ರಾಧ್ಯಾಪಕರು ಮತ್ತು ಮಾರ್ಗದರ್ಶಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ ೫೮೩ ೨೭೬**

## ಸಂಶೋಧಕರ ಘೋಷಣಾ ಪತ್ರ

**"ಸಾಮಾಜಿಕ ಬದಲಾವಣೆಯಲ್ಲಿ ಕೊರಗರು"** (ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಯನ್ನು ಪರಿಗಣಿಸಿ) ಎಂಬ ಸಮಾಜಶಾಸ್ತ್ರ ವಿಷಯದಲ್ಲಿ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗದ ಪ್ರಾಧ್ಯಾಪಕರಾದ **ಡಾ. ಗಂಗಾಧರ ದೈವಜ್ಞ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : 03-02-2017
ಸ್ಥಳ : ವಿದ್ಯಾರಣ್ಯ

**(ರಾಘವೇಂದ್ರ ಎಲ್.)**
ಸಂಶೋಧನಾ ವಿದ್ಯಾರ್ಥಿ
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

## ಪರಿವಿಡಿ

## ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ

೧.೧. ಪೀಠಿಕೆ

೧.೨. ಅಧ್ಯಯನದ ಉದ್ದೇಶ

೧.೩. ಅಧ್ಯಯನದ ವ್ಯಾಪ್ತಿ

೧.೪. ಅಧ್ಯಯನದ ವಿಧಾನ

೧೫. ಅಧ್ಯಯನದ ಸ್ವರೂಪ

೧.೬. ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಸಮೀಕ್ಷೆ

**ಪೀಠಿಕೆ**

ಜಗತ್ತಿನ ಜೀವಸಂಕುಲಗಳಲ್ಲೆಲ್ಲ ಅತ್ಯುನ್ನತ ಸ್ಥಾನ ಮಾನವನು. ಇತರೆ ಕೋಟ್ಯಾಂತರ ಜೀವರಾಶಿಗಳಿಗಿಲ್ಲದ ಗುಣ ಸ್ವಭಾವ-ಬುದ್ಧಿವಂತಿಕೆಗಳಿಂದಲೇ ಈ ಸ್ಥಾನವನ್ನು ಮಾನವ ಪಡೆದಿದ್ದಾನೆ. ಸಂಘಜೀವಿ ಎಂದೆಲ್ಲ ಕರೆಯಲ್ಪಟ್ಟಿರುವ ಮಾನವ ತನ್ನ ಭೌತಿಕ ಮತ್ತು ಸಾಮಾಜಿಕ ಜ್ಞಾನವನ್ನು ವಿಕಸಿಸುತ್ತಲೇ ಬಂದಿದ್ದಾನೆ. ಆ ಮೂಲಕ ತನ್ನದೇ ಆದ ಸಮಾಜವನ್ನು, ಲೋಕವನ್ನು ಸೃಷ್ಟಿಸಿಕೊಂಡಿದ್ದಾನೆ. ಆ ಮೂಲಕ ಜ್ಞಾನವನ್ನು ಹುಟ್ಟುಹಾಕಿ ರೂಢಿಸಿಕೊಂಡು ಬಂದಿರುವುದೇ ಸಂಸ್ಕೃತಿ, ಅಂದರೆ ವ್ಯವಸ್ಥಿತವಾಗಿರುವ ಜನರ ಗುಂಪು ಸಮಾಜವಾದರೆ, ಆ ಸಮಾಜದ ಜನರು ಬದುಕುವ, ರೂಢಿಸಿಕೊಂಡಿರುವ ರೀತಿಯೇ ಸಂಸ್ಕೃತಿ. ಜಗತ್ತಿನ ಯಾವ ಮೂಲೆಯಲ್ಲಿ ಮಾನವ ಜೀವಿಸಿದರೂ ಅಲ್ಲಿ ತನ್ನದೇ ಆದ ಸಂಸ್ಕೃತಿಯನ್ನು ಹೊಂದಿರುವುದನ್ನು ಕಾಣಬಹುದು. ಅದು ಪ್ರತ್ಯಕ್ಷ ಅಥವಾ ಪರೋಕ್ಷ ರೂಪದಲ್ಲಿರಬಹುದು. ಕಾಲ ಬದಲಾದಂತೆ ಸಕಲ ಜೀವರಾಶಿಗಳಲ್ಲೇ ವಿಶಿಷ್ಟ ಗುಣವನ್ನು ಹೊಂದಿದ ಮಾನವ ಸಂಖ್ಯೆಯಲ್ಲಿ, ಬುದ್ಧಿಮತ್ತೆಯಲ್ಲಿ, ಬೆಳವಣಿಗೆಯಲ್ಲಿ ಇತರೆ ಜೀವರಾಶಿಗಳಿಗಿಂತ ಹಿಡಿಯಲಾರದಷ್ಟು ಮೇಲೇರಿದ. ಈ ರೀತಿಯ ಬೆಳವಣಿಗೆಯೇ ಮಾನವರಲ್ಲಿಯೇ ಮೇಲು-ಕೀಳು, ಉತ್ತಮ-ಅಧಮ, ನಾಗರಿಕ-ಅನಾಗರಿಕ ಎಂಬೆಲ್ಲ ಭೇದ-ಭಾವಗಳಿಗೆ ನಾಂದಿಯಾಯಿತು. ಭೌಗೋಳಿಕವಾದ ಸ್ವರೂಪಗಳು, ಪರಿಸರಗಳು ಆಯಾ ಪ್ರದೇಶದ ಮಾನವರಲ್ಲಿ ಭಿನ್ನತೆಗೆ ಕಾರಣವಾದರೂ ಮೇಲು-ಕೀಳು ಎಂಬುದನ್ನೇ ಮುಖ್ಯವಾಗಿಟ್ಟುಕೊಂಡು ತಾರತಮ್ಯಗಳುಂಟಾಗಿರುವುದು ಇತಿಹಾಸದಿಂದ ತಿಳಿದುಬರುತ್ತದೆ.

ಭೌಗೋಳಿಕತೆ, ವಾತಾವರಣ ಇತ್ಯಾದಿಗಳು ಆಯಾ ಪ್ರದೇಶದ ಜನರ ಭೌತಿಕ, ಧಾರ್ಮಿಕ, ಸಾಮಾಜಿಕ ಮತ್ತು ಆರ್ಥಿಕ ಬೆಳವಣಿಗೆಗೆ ಕಾರಣವಾದರೆ ಅದನ್ನೇ ಮೇಲು-ಕೀಳೆಂದು ತಪ್ಪಾಗಿ ಅರ್ಥೈಸಲಾಯಿತು. ಈ ಹಿನ್ನೆಲೆಯಲ್ಲಿಯೇ ನಾಗರಿಕ-ಅನಾಗರಿಕ ಎಂಬ ಹಣೆಪಟ್ಟೆಯನ್ನು ಉದ್ದೇಶಪೂರ್ವಕವಾಗಿಯೇ ಕಟ್ಟಲಾಯಿತು. "ನಿರಂತರ ಪರಿವರ್ತನಶೀಲನಾದ ಮಾನವ ಸಂಸ್ಕೃತಿಯ ಒಳಮರ್ಮವನ್ನರಿಯಬೇಕಾಗುತ್ತದೆ. ಸಹಸ್ರಾರು ವರ್ಷಗಳಿಂದ ನಗರ ಸಂಸ್ಕೃತಿಯ ಪ್ರಭಾವಕ್ಕೊಳಗಾಗದೆ ಗುಡ್ಡಗಾಡು, ದ್ವೀಪ, ಹಿಮಪ್ರದೇಶಗಳೇ ಮೊದಲಾದ ವಿವಿಧ ಪ್ರದೇಶಗಳಲ್ಲಿ ನೆಲೆಸಿ, ತಮ್ಮದೇ ಆದ ಉಪಭಾಷೆ, ಮೂಲ ಪುರುಷ, ಆದಿದೈವ ಹಾಗೂ ಮುಖಂಡರನ್ನು ಹೊಂದಿರುವ ರೂಢಿ, ನಂಬಿಕೆ, ಸಂಪ್ರದಾಯಗಳನ್ನು, ಹಾಡು, ಕಥೆ, ಗಾದೆ, ಮನೋರಂಜಕ ಕಲೆಗಳನ್ನು, ವೈದ್ಯ, ಮಾಟ-ಮಂತ್ರ ಮುಂತಾದ ವಿಶೇಷ ಜ್ಞಾನಗಳನ್ನು, ತಮ್ಮದೇ ಆದ ವಿಧಿನಿಷೇಧಗಳನ್ನು, ನೈಸರ್ಗಿಕ ಕಾಯಿದೆ ಕಟ್ಟಳೆಗಳನ್ನು, ಸುಸಂಘಟಿತ ಸಾಮಾಜಿಕ ವ್ಯವಸ್ಥೆಗಳನ್ನು ಹೊಂದಿರುವ ಅನಕ್ಷರಸ್ಥ ಸಂಸ್ಕೃತಿ ಸಂಪನ್ನ ಜನಾಂಗಗಳೇ ಬುಡಕಟ್ಟು ಜನಾಂಗಗಳು"[೧] ಎಂದು ಬುಡಕಟ್ಟು ಸಮುದಾಯಗಳನ್ನು ಎನ್.ಆರ್. ನಾಯಕ ಅವರು ಸರಳವಾಗಿ ವ್ಯಾಖ್ಯಾನಿಸಿದ್ದಾರೆ. ಭಾರತದಲ್ಲಿ ಈ ರೀತಿಯ ಗುಣಲಕ್ಷಣಗಳನ್ನು ಹೊಂದಿರುವ ಸಮುದಾಯಗಳು ನೂರಾರು. ಆ ನೂರಾರು ಬುಡಕಟ್ಟುಗಳಲ್ಲಿ ಕರ್ನಾಟಕದ ಕೊರಗ ಬುಡಕಟ್ಟು ಒಂದು.

ಕನ್ನಡ ಭಾಷೆಯ ಬುಡಕಟ್ಟು ಪದಕ್ಕೆ ಇಂಗ್ಲಿಷ್‌ನಲ್ಲಿ `TRIBE' (ಟ್ರೈಬ್) ಎಂದು ಕರೆಯಲಾಗುತ್ತದೆ. TRIBE ಪದ ಲ್ಯಾಟಿನ್ ಭಾಷೆಯ 'TRIBUS' ಎಂಬ ಪದದಿಂದ ಬಂದಿದೆ. "ಒಂದು ಮೂಲದಿಂದ ಬಂದ ಒಬ್ಬ ಮುಖ್ಯಸ್ಥನ ಆಡಳಿತಕ್ಕೆ ಒಳಪಟ್ಟು ಪ್ರಾದಿಮ ಹಂತಕ್ಕೆ ಸೇರಿದ ಜನಗಳ ಗುಂಪು" ಎಂಬ ಸರಳ ಅರ್ಥವನ್ನು ಬುಡಕಟ್ಟು ಪದಕ್ಕೆ ನೀಡಲಾಗಿದೆ. Tribes group of peoples is a primitive or barbarous stage of development acknowledging the authority of a chief and usually regarding themselves as having a common anuster[2].

ಸಾಮಾನ್ಯವಾಗಿ ಬಹುತೇಕ ಬುಡಕಟ್ಟುಗಳು ಕ್ರಿಯಾತ್ಮಕವಾಗಿ ಸ್ವತಂತ್ರವಾಗಿರುತ್ತವೆ. ಆರ್ಥಿಕವಾಗಿ ತಲುಪಲು ಬಹುತೇಕ ಬುಡಕಟ್ಟುಗಳಿಗೆ ಸಾಧ್ಯವಾಗಿಲ್ಲ. ಅವರ ಆರ್ಥಿಕತೆಯ ವ್ಯಾಪ್ತಿ ಕಾಲಕ್ಕೆ ಸರಿಯಾಗಿ ಆಹಾರ ಮತ್ತು ತಮಗೆ ಬೇಕಾಗಿರುವ ವಸತಿಗೆ ಸೀಮಿತ. ಯಾವುದೇ ರೀತಿಯ ಆಡಳಿತ, ಜಮೀನು ವಿಸ್ತರಣೆ, ಹಣ ಕೂಡಿಡುವ ಪ್ರವೃತ್ತಿ ಅವರಿಗೆ

ಬೇಕಿಲ್ಲ. ಇವೆಲ್ಲವೂ ಅವರನ್ನು ಒಂದು ಪ್ರತ್ಯೇಕ ಭೌಗೋಳಿಕವಾಗಿ ಮತ್ತು ಬೌದ್ಧಿಕವಾಗಿಯೂ 'ನಾಗರಿಕ'ರೆಂದು ಕರೆಯಲ್ಪಡುವುದರಿಂದ ಪ್ರತ್ಯೇಕಿಸುತ್ತದೆ. ಅವರ ಸೀಮಿತ ಆರ್ಥಿಕತೆಗೆ ಸ್ವಾತಂತ್ರ್ಯಕ್ಕೆ ಇಂದು ಧಕ್ಕೆಯಾಗುತ್ತಿದೆ. ಕಾಲ ಬದಲಾದಂತೆ ಅವರೂ ಬದಲಾವಣೆಯ ಹಾದಿ ತುಳಿಯಬೇಕಾಗಿದೆ. ನಾಗರಿಕ ಸಂಸ್ಕೃತಿ ಎಂದು ಕರೆಯಲ್ಪಡುವ ಸಂಸ್ಕೃತಿಯ ಯಾವುದೇ ಪ್ರಭಾವವನ್ನು ಬುಡಕಟ್ಟುಗಳ ಸಂಸ್ಕೃತಿಯಲ್ಲಿ ಕಾಣಲಾಗುತ್ತಿಲ್ಲ. ಆದರೆ ಪರಿವರ್ತನೆಯ ಹಾದಿಯಲ್ಲಿ ಈ ಮಾತು ಮೌಲ್ಯ ಕಳೆದುಕೊಳ್ಳುತ್ತಿದೆ. ಇದಕ್ಕೆ ಅತ್ಯುತ್ತಮ ಉದಾಹರಣೆಯೆಂದರೆ ನಮ್ಮ ರಾಜ್ಯದಲ್ಲಿರುವ ಮೂಲ ಬುಡಕಟ್ಟು ಎಂದು ಪರಿಣಿತರಾಗಿರುವ ಕೊರಗರು.

'ಪರಿವರ್ತನೆ ಜಗದ ನಿಯಮ' ಎಂಬ ಮಾತಿನಂತೆ ಕಾಲ ಬದಲಾದಂತೆ ಎಲ್ಲ ರೀತಿಯಲ್ಲೂ ಬದಲಾವಣೆಗಳನ್ನು ಕಾಣುತ್ತಿದ್ದೇವೆ. ಇದಕ್ಕೆ ಯಾವುದೇ ಬುಡಕಟ್ಟು ಹೊರತಾಗಿಲ್ಲ. ಈ ರೀತಿಯ ಪರಿವರ್ತನೆಯ ಬಗೆಯನ್ನು ನಿರ್ಮಲಕುಮಾರ್ ಬೋಸ್ ಹೀಗೆ ವಿಶ್ಲೇಷಿಸಿದ್ದಾರೆ. ``One might indeed say that tribes can be regarded as fully absorbed in the Hindu fold if Brahmin Prirsts perform Brahminical cermonies for them during the three critical events of Birth, Marriage and Death. If the later are till celabrated by tribal riturals, then the communities are still true to their own faith in spite of the fact in the outer fringes of their culture they participated in some of the ceremonies of their Hindu neighbours"[3] ಇವರ ಪ್ರಕಾರ ಬುಡಕಟ್ಟು ಜನರು ತಮ್ಮ ಹುಟ್ಟು, ಮದುವೆ ಮತ್ತು ಸಾವು ಈ ಮೂರು ಸಂದರ್ಭಗಳಲ್ಲಿ ಬ್ರಾಹ್ಮಣ ಪೌರೋಹಿತ್ಯಕ್ಕೆ ಅವಕಾಶ ಕೊಡುವುದಿಲ್ಲವೋ ಅಲ್ಲಿಯವರೆಗೆ ತನ್ನ ಮೂಲ ಸ್ವರೂಪದಲ್ಲಿಯೇ ಉಳಿದಿರುತ್ತದೆ.

ಭಾರತ ನೂರಾರು ಬುಡಕಟ್ಟು ಸಮುದಾಯಗಳನ್ನು ಒಳಗೊಂಡಿರುವ ದೇಶ. ಭೌಗೋಳಿಕವಾಗಿ ವಿಶಿಷ್ಟವಾಗಿರುವ, ಪ್ರಾಚೀನ ಕಾಲದಿಂದಲೂ ಭರತಖಂಡ ಎಂಬ ಹೆಸರನ್ನು ಪಡೆದಿರುವ ಭಾರತ ವೈವಿಧ್ಯಮಯ ಸಂಸ್ಕೃತಿ, ಭಾಷೆಗಳ ತವರು ನೆಲ. ಅದರಂತೆ ದೇಶದ ಉದ್ದಗಲಕ್ಕೂ ನೂರಾರು ಭಿನ್ನ ಭಿನ್ನ ಬುಡಕಟ್ಟು ಸಮುದಾಯಗಳು ನೆಲೆಸಿದ್ದಾರೆ. ಬದಲಾದ ಕಾಲಕ್ಕನುಗುಣವಾಗಿ ದೇಶದ ಒಟ್ಟು ಸಂಸ್ಕೃತಿಯನ್ನು ನಾಡಿನ ಸಂಸ್ಕೃತಿ ಮತ್ತು ಕಾಡಿನ ಸಂಸ್ಕೃತಿ ಎಂಬುದಾಗಿ ಭಿನ್ನ ರೀತಿಯಲ್ಲಿ ಬೇರ್ಪಡಿಸಿ

ಶ್ರೇಣೀಕರಣಕ್ಕೆ ಒಳಪಡಿಸಲಾಗಿದೆ. ಭಿನ್ನತೆಯನ್ನು ಗುರುತಿಸಿ ಅವುಗಳ ಮಧ್ಯೆ ಅಜಗಜಾಂತರವನ್ನು ಕಾಯ್ದುಕೊಂಡು ಬಂದಿರುವುದನ್ನು ನಾವು ಗಮನಿಸಬಹುದಾಗಿದೆ. ಈ ಹಿನ್ನೆಲೆಯಲ್ಲಿ ಕರ್ನಾಟಕದ ಕರಾವಳಿ ಪ್ರದೇಶದ ಕೊರಗ ಬುಡಕಟ್ಟು ಸಮುದಾಯದ ಬದಲಾವಣೆಯನ್ನು ಕುರಿತು ಅಧ್ಯಯನ ಮಾಡಲಾಗಿದೆ.

**ಭಾರತದ ಬುಡಕಟ್ಟುಗಳು**

ಜಗತ್ತಿನೆಲ್ಲೆಡೆಯೂ ಇರುವಂತೆಯೇ ನಮ್ಮ ದೇಶ ಭಾರತದಲ್ಲಿಯೂ ನೂರಾರು ಬುಡಕಟ್ಟುಗಳಿರುವುದನ್ನು ಕಾಣುತ್ತೇವೆ. ಸಾವಿರಾರು ವರ್ಷಗಳ ಹಿಂದೆಯೇ ಭಾರತದಲ್ಲಿ ಬುಡಕಟ್ಟು ಜನಸಮುದಾಯಗಳು ತಮ್ಮದೇ ಸಂಸ್ಕೃತಿಯಲ್ಲಿ ಬದುಕುತ್ತಿದ್ದುದನ್ನು ಇತಿಹಾಸಗಳು ತಿಳಿಸುತ್ತವೆ. ಆದರೆ ಬುಡಕಟ್ಟುಗಳ ಇರುವಿಕೆಯನ್ನು, ಸಮೃದ್ಧ ಸಂಸ್ಕೃತಿಯಿರುವುದನ್ನು ಜನಸಾಮಾನ್ಯರೆಲ್ಲರೂ ತಿಳಿಯಲು ಪಾಶ್ಚಾತ್ಯ ವಿದ್ವಾಂಸರ ಆಗಮನವಾಗಬೇಕಾಯಿತು. ಈ ಕುರಿತಂತೆ ಭಾರತೀಯ ವಿದ್ವಾಂಸರು ಅಧ್ಯಯನ ಮಾಡಿದ್ದಕ್ಕಿಂತ ಹೆಚ್ಚಾಗಿ, ಪರಿಣಾಮಕಾರಿಯಾಗಿ, ಸೈದ್ಧಾಂತಿಕವಾಗಿ ಪಾಶ್ಚಾತ್ಯ ವಿದ್ವಾಂಸರೇ ಅಧ್ಯಯನ ಮಾಡಿರುವುದು ಕಂಡುಬರುತ್ತದೆ. ಪಾಶ್ಚಾತ್ಯ ವಿದ್ವಾಂಸರ ಉದ್ದೇಶಗಳ ಬಗ್ಗೆ ಭಿನ್ನಾಭಿಪ್ರಾಯಗಳು ಏನೇ ಇದ್ದರೂ ಕ್ರಮಬದ್ಧವಾಗಿ, ಪರಿಶ್ರಮಪೂರ್ಣ ಅಧ್ಯಯನ ಮಾಡಿರುವುದನ್ನು ನಾವು ಒಪ್ಪಿಕೊಳ್ಳಲೇಬೇಕು. "ಕರ್ನಾಟಕ ರಾಜ್ಯದಲ್ಲೇ ಆಗಲಿ, ಅದನ್ನು ಒಳಗೊಂಡು ಇಡೀ ಭಾರತದಲ್ಲಿಯೇ ಆಗಲಿ, ಜನಾಂಗಗಳ ಅಧ್ಯಯನ ಆರಂಭವಾದುದು ಇತ್ತೀಚೆಗೆ ಪಾಶ್ಚಾತ್ಯ ಮಿಶನರಿಗಳು ತಮ್ಮ ಮತಾಂತರ ಕಾರ್ಯಕ್ರಮದ ಒಂದು ಅಂಗವಾಗಿ ಭಾರತದ ವಿವಿಧ ಜನಾಂಗಗಳ ಮಧ್ಯೆ ನಿಂತು ಕೆಲಸ ಮಾಡಿದ್ದುಂಟು. ಇನ್ನು ಕೆಲವರು ಕೈಗಾರಿಕೀಕರಣದ ಆನಂತರ ಯುರೋಪ್ ಎದುರಿಸಿದ ಸಾಂಸ್ಕೃತಿಕ ಬಿಕ್ಕಟ್ಟಿಗೆ ಪರಿಹಾರವೆಂಬಂತೆ ಕೈಗಾರಿಕೀಕರಣಗೊಳ್ಳದ ಭಾರತವನ್ನು ಅಭ್ಯಾಸ ಮಾಡಿದ್ದುಂಟು. ಇಲ್ಲಿಯ ಜನಾಂಗ ವೈವಿಧ್ಯತೆ, ಆಧ್ಯಾತ್ಮಿಕ ಒಲವು, ಸಾಂಸ್ಕೃತಿಕ ಮುಗ್ಧತೆ ಯುರೋಪಿಯನ್ನರಿಗೆ ತೀವ್ರವಾಗಿ ಹಿಡಿಸಿದ್ದಿದೆ"[೪] ಎಂದು ಪುರುಷೋತ್ತಮ ಬಿಳಿಮಲೆ ಅವರು ವಿದೇಶಿ ವಿದ್ವಾಂಸರ ಆಗಮನದ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

ಭಾರತದ ಎಲ್ಲಾ ರಾಜ್ಯಗಳಲ್ಲೂ ಬುಡಕಟ್ಟು ಜನರಿದ್ದರೂ ಅತೀ ಹೆಚ್ಚು ಬುಡಕಟ್ಟು ಜನರು ಮಧ್ಯಪ್ರದೇಶ, ಒರಿಸ್ಸಾ ಮತ್ತು ಅಸ್ಸಾಂ ರಾಜ್ಯಗಳಲ್ಲಿ ಕಂಡುಬರುತ್ತಾರೆ. ಭೌಗೋಳಿಕ, ಸಾಂಸ್ಕೃತಿಕ ಆಧಾರಗಳ ಮೇಲೆ ಭಾರತದ ಬುಡಕಟ್ಟುಗಳನ್ನು ಮುಖ್ಯವಾಗಿ ಮೂರು ವಲಯಗಳಲ್ಲಿ ವಿಂಗಡಿಸಲಾಗಿದೆ.

೧. ತೋಡ, ಸೋಲಿಗ, ಚೆಂಚು, ಕೋಟಾ, ಇರುಳಿಗ, ಉರಸಿ, ಜೇನುಕುರುಬ, ಕಾಡುಕುರುಬ, ಕಾಡುಗೊಲ್ಲ, ಅಡಿಯಾನ್ ಮುಂತಾದ ದಕ್ಷಿಣ ಭಾರತದ ಬುಡಕಟ್ಟುಗಳು ಸೇರುವ ದಕ್ಷಿಣ ವಲಯ.

೨. ಸಂತಾಲ್, ಭಿಲ್, ಖೋಂಡ, ಹೋ, ಮುಂಡಾ, ಒರೆಯಾನ್, ಬೈಗಾ, ಅಗೇರಿಯಾ, ನವೋರ, ಭೂಮಿಯಾ, ಬಿರಾಹರ್, ಖರಿಯಾ, ಕೋಲ್ ಮುಂತಾದ ಬುಡಕಟ್ಟುಗಳಿರುವ ಮಧ್ಯಪ್ರದೇಶ, ಒರಿಸ್ಸಾ, ರಾಜಸ್ಥಾನ, ಬಿಹಾರ ಸೇರಿದಂತೆ ಮಧ್ಯ ವಲಯ.

೩. ನಾಗಾ, ಥಾಂಗೆ, ಯಾಚಮಿ, ತೊಕೋಮಿ, ಅಖಾಸ್, ಫ್ಲಾಸ್, ಮಿಕಿರ್ ಅಬೋರ್, ಮಿಷ್ಮಿನ್, ಕುಕಿಸ್ ಇವೇ ಮುಂತಾದ ಬುಡಕಟ್ಟು ಜನರು ಕಂಡುಬರುವ ನಾಗಾಲ್ಯಾಂಡ್, ಮಣಿಪುರ, ತ್ರಿಪುರ ರಾಜ್ಯಗಳು ಸೇರಿದ ಈಶಾನ್ಯ ವಲಯ ಇವೇ ಮೂರು ವಲಯಗಳು.”

೨೦೧೧ರ ಜನಗಣತಿಯ ಪ್ರಕಾರ ಭಾರತದ ಬುಡಕಟ್ಟು ಜನಸಂಖ್ಯೆ ೧೦,೪೨,೮೧,೦೩೪[೬] ಇದೆ. ಭಾರತದಲ್ಲಿ ೧೯೫೦ರಿಂದ ಇದುವರೆಗೆ ಒಂದು ಅಂದಾಜಿನಂತೆ ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿ ಅನುಚ್ಛೇದ ೩೪೨(೧) ಹಾಗೂ (೨)ರ ಪ್ರಕಾರ ಸೇರಿರುವ ಬುಡಕಟ್ಟುಗಳ ಸಂಖ್ಯೆ ೬೩೬.

ವರ್ಷದಿಂದ ವರ್ಷಕ್ಕೆ ಅನೇಕ ಜನಸಮುದಾಯಗಳು ತಮ್ಮನ್ನು ಪರಿಶಿಷ್ಟ ಪಂಗಡಕ್ಕೆ ಸೇರಿಸಬೇಕೆಂದು ಒತ್ತಾಯಿಸುತ್ತಿರುವುದನ್ನೂ ನಾವು ಗಮನಿಸಬಹುದು. ಯಾವುದೇ ಸಮಾಜ, ಸಂಸ್ಕೃತಿ ಚಲನಶೀಲ ಗುಣವನ್ನು ಹೊಂದಿರುತ್ತದೆ. ಕಾಲ ಬದಲಾದಂತೆ ಕುಟುಂಬಗಳಲ್ಲಿ, ಸಮಾಜದಲ್ಲಿ ಬದಲಾವಣೆಯಾಗುತ್ತಿರುವುದು ಸಹಜ. ಈ ಹಿನ್ನೆಲೆಯಲ್ಲಿ ಭಾರತದ ಸಂವಿಧಾನದ ಪ್ರಕಾರ ಅನೇಕ ಬುಡಕಟ್ಟು ಜನರು ತಮ್ಮ ಮೂಲದಲ್ಲಿದ್ದ ರೀತಿ-ರಿವಾಜು, ಸಂಪ್ರದಾಯಗಳನ್ನು ಕೈಬಿಡುವ ಸಾಧ್ಯತೆ ಹೆಚ್ಚಿರುತ್ತದೆ. ಈ ಹಿನ್ನೆಲೆಯಲ್ಲಿಯೂ ಇತರೆ ಜನಸಮುದಾಯ ಅಥವಾ ಪರಿಶಿಷ್ಟ ಜಾತಿಗೆ ಸೇರಿದ, ಹಿಂದುಳಿದ ವರ್ಗಕ್ಕೆ ಸೇರಿದ ಜನಸಮುದಾಯ ತಮ್ಮನ್ನು ಬುಡಕಟ್ಟು ಜನರ ಪಟ್ಟಿಗೆ ಸೇರಿಸಿ ಎಂಬ ಕೂಗು ಕೇಳಿಬರುತ್ತಿರುವುದನ್ನು ಗಮನಿಸಬಹುದಾಗಿದೆ.

**ಕರ್ನಾಟಕದ ಬುಡಕಟ್ಟುಗಳು**

ಕರ್ನಾಟಕ ಭಾರತ ದೇಶದ ಎಂಟನೇ ದೊಡ್ಡ ರಾಜ್ಯವಾಗಿದೆ. ಇದರ ವಿಸ್ತೀರ್ಣ ಸುಮಾರು ೧೯೧.೭೯೧ ಚದರ ಕಿ.ಮೀ. ೨೦೧೧ರ ಜನಗಣತಿ ಪ್ರಕಾರ ರಾಜ್ಯದ ಒಟ್ಟು

ಜನಸಂಖ್ಯೆಯಲ್ಲಿ ಬುಡಕಟ್ಟು ಜನರ ಸಂಖ್ಯೆ ೪೨,೪೮,೯೮೭. ಪುರುಷರ ಸಂಖ್ಯೆ ೨೧,೩೪,೭೫೪ ಇದ್ದರೆ, ಮಹಿಳೆಯರ ಸಂಖ್ಯೆ ಸುಮಾರು ೨೧,೧೪,೨೩೩ ಇದೆ.[೬]

ಕರ್ನಾಟಕದ ಪರಿಶಿಷ್ಟ ಪಂಗಡಗಳ ಹೆಸರು ಇಂತಿದೆ.

೧. ಆದಿಯನ್

೨. ಬರ್ದಾ

೩. ಬವಚಾ, ಬಮ್ಚಾ

೪. ಭಿಲ್, ಭಿಲ್ ಗರಾಸಿಯಾ, ಧೋಲಿ ಭಿಲ್, ಡುಂಗ್ರಿ ಭಿಲ್, ಡುಂಗ್ರಿ ಗರಾಸಿಯಾ, ಮೇವಾಸಿ ಭಿಲ್, ರಾವಲ್ ಭಿಲ್, ತಡವಿ ಭಿಲ್, ಭಗಾಲಿಯಾ, ಭಿಲಾಲ, ಪವರಾ, ವಾಸವ, ವಾಸಲೆ.

೫. ಚೆಂಚು, ಚೆಂಚವಾರ್

೬. ಚೋಧರಾ

೭. ದುಬಲಾ, ತಳವಿಯ, ಹಲಪತಿ

೮. ಗಮಿತ, ಗಾಮ್ತಾ, ಗವಿತ್, ಮಾವ್ಚಿ, ಪಡ್ವಿ, ವಾಳವಿ

೯. ಗೊಂಡ, ನಾಯಿಕ್ ಪೋಡ, ರಾಜಗೊಂಡ

೧೦. ಗೌಡಲು

೧೧. ಹಕ್ಕಿಪಿಕ್ಕಿ, ಹರಿಣಶಿಕಾರಿ

೧೨. ಹಸಲರು

೧೩. ಇರುಳರು

೧೪. ಇರುಳಿಗ

೧೫. ಜೇನು ಕುರುಬ

೧೬. ಕಾಡು ಕುರುಬ

೧೭. ಕಮ್ಮಾರ(ದಕ್ಷಿಣ ಕನ್ನಡ ಮತ್ತು ಚಾಮರಾಜನಗರ ಜಿಲ್ಲೆ)

೧೮. ಕನಿಯಾನ, ಕನ್‌ಯಾನ್ (ಚಾಮರಾಜನಗರ ಜಿಲ್ಲೆ)

೧೯. ಕಥೋಡಿ, ಕತಕಾರಿ, ಢೋರ, ಢೋರ ಕತಕಾರಿ, ಸೋನ ಕಥೋಡಿ, ಸೋನ ಕತಕಾರಿ.

೨೦. ಕಟ್ಟುನಾಯಕನ್

೨೧. ಕೊಕನ, ಕೊಕ್‌ನಿ, ಕುಕ್‌ನಾ

೨೨. ಕೋಳಿ ಢೋರ, ಟೋಕ್ರೆ ಕೋಳಿ, ಕೊಳಚಾ, ಕೋಳಘಾ

೨೩. ಕೊಂಡ ಕಾಪುಸ

೨೪. ಕೊರಗ

೨೫. ಕೋಟ

೨೬. ಕೋಯ, ಭೀನೆ ಕೋಯಾ, ರಾಜಕೋಯಾ

೨೭. ಕುಡಿಯಾ, ಮಲೆಕುಡಿಯ

೨೮. ಕುರುಬ (ಕೊಡಗು ಜಿಲ್ಲೆ)

೨೯. ಕುರುಮನ್ಸ

೩೦. ಮಹಾ ಮಲಸಾರ

೩೧. ಮಲ್ಲೈಕುಡಿ

೩೨. ಮಲಸಾರ

೩೩. ಮಲೆಯಕಂಡಿ

೩೪. ಮಲೇರು

೩೫. ಮರಾಠಾ (ಕೊಡಗು ಜಿಲ್ಲೆ)

೩೬. ಮರಾಠಿ (ದಕ್ಷಿಣ ಕನ್ನಡ, ಉಡುಪಿ ಜಿಲ್ಲೆ)

೩೭. ಮೇದಾ, ಮೇದಾರಿ, ಗೌರಿಗ, ಬುರುಡ

೩೮. ನಾಯಿಕ್‌ದಾ, ನಾಯಕಾ, ಚೋಲಿವಾಲ, ಕಪಾಡಿಯಾ ನಾಯಕಾ, ಮೋಟಾ ನಾಯಕಾ, ನಾನಾ ನಾಯಕಾ, ನಾಯಿಕ, ನಾಯಕ್, ಬೇಡ, ಬೇಡರ, ವಾಲ್ಮೀಕಿ

೩೯. ಪಲ್ಲಿಯಾನ್

೪೦. ಪನಿಯಾನ

೪೧. ಪರಧಿ, ಅಡವಿಚಿಂಚರ್, ಫಾನ್ಸೆ ಪರಧಿ(ಪಾರ್ಧಿ)

೪೨. ಪಟೇಲಿಯ

೪೩. ರತಾವಾ

೪೪. ಸೋಲಿಗ

೪೫. ಸೋಲಿಗರು

೪೬. ತೋಡ

೪೭. ವರಲಿ

೪೮. ವಿಟೋಲಿಯ, ಕೋಟವಾಲಿಯ, ಬರೋಡಿಯ

೪೯. ಯೆರವ

೫೦. ಸಿದ್ಧಿ (ಉತ್ತರ ಕನ್ನಡ ಜಿಲ್ಲೆ)[೮]

ಹೀಗೆ ಸುಮಾರು ಐವತ್ತು ಬುಡಕಟ್ಟುಗಳು ಕರ್ನಾಟಕ ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ಕಂಡುಬರುತ್ತಾರೆ. ಸಂವಿಧಾನದ ೩೪೨ನೇ ಅನುಚ್ಛೇದದಲ್ಲಿ ಬುಡಕಟ್ಟುಗಳ ಕುರಿತು ವಿವರಣೆ ನೀಡಲಾಗಿದೆ. ಇದರ ಪ್ರಕಾರ ಬುಡಕಟ್ಟುಗಳು, ಬುಡಕಟ್ಟು ಸಮುದಾಯಗಳು, ಅವುಗಳ ಭಾಗ ಅಥವಾ ಗುಂಪುಗಳನ್ನು ರಾಷ್ಟ್ರಪತಿಗಳು ಪರಿಶಿಷ್ಟ ಪಂಗಡಗಳ ಅನುಚ್ಛೇದದಡಿ ಸೇರಿಸಲು ಅವಕಾಶವಿರುತ್ತದೆ. ಈ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯದಲ್ಲಿ ಆರಂಭದಲ್ಲಿ ಗುರುತಿಸಲಾಗಿದ್ದ ೨೧ ಬುಡಕಟ್ಟುಗಳ ಪಟ್ಟಿಗೆ ಸೇರಿಸಲಾಗಿ ಈಗ ಸುಮಾರು ೫೦ ಬುಡಕಟ್ಟುಗಳಿವೆ ಎಂದು ಸರ್ಕಾರದ ಅಂಕಿಅಂಶಗಳು ತಿಳಿಸುತ್ತವೆ.

ಕರ್ನಾಟಕದ ಬಹುತೇಕ ಬುಡಕಟ್ಟು ಜನರು ಆರ್ಥಿಕವಾಗಿ ಹಿಂದುಳಿದಿದ್ದಾರೆ, ಆದರೆ ಸಾಂಸ್ಕೃತಿಕವಾಗಿ ಶ್ರೀಮಂತರೇ ಸರಿ. ಪ್ರಾಚೀನ ಕಾಲದಿಂದಲೂ ಬುಡಕಟ್ಟು ಜನರು ಸಮೃದ್ಧ ಕಾಡನ್ನು ತಮ್ಮದೇ ಮನೆಯನ್ನಾಗಿಸಿಕೊಂಡು, ನೆಲೆಯನ್ನಾಗಿಸಿಕೊಂಡು ಬಾಳಿ ಬದುಕಿದವರು. ಆಂಗ್ಲರ ಆಗಮನ ಮತ್ತು ಕೈಗಾರಿಕೀಕರಣದಿಂದಾಗಿ ಅರಣ್ಯ ಸಂಪನ್ಮೂಲಗಳೆಲ್ಲ ಲೂಟಿಯಾದವು. ಉತ್ಕೃಷ್ಟ ಗುಣಮಟ್ಟದ ಔಷಧಿಯ ಗುಣಗಳನ್ನು

ಹೊಂದಿರುವ ಅಸಂಖ್ಯಾತ ಗಿಡಮರಗಳು, ಆಂಗ್ಲರ – ದೇಶಿ ಆಡಳಿತಗಾರರ ಮನೆಗಳಿಗೆ ಐಷಾರಾಮಿ ಪೀಠೋಪಕರಣಗಳಿಗೆ ಆಹುತಿಯಾದವು. ಸಾವಿರಾರು ವರ್ಷಗಳಿಂದ ಅಂತಹ ಗಿಡಮರಗಳ ನೆರಳಲ್ಲಿ ಜೀವನ ಮಾಡಿದ್ದಂತಹ ಬುಡಕಟ್ಟುಗಳ ನೆಲೆ ನೆಲಗಳನ್ನೆಲ್ಲಾ ಬರಿದು ಮಾಡಲಾಯಿತು. ಜಗತ್ತಿನ ಅತೀ ಸೂಕ್ಷ್ಮ ಪ್ರದೇಶಗಳಲ್ಲಿ ಒಂದಾದ ಪಶ್ಚಿಮ ಘಟ್ಟ ಪ್ರದೇಶಗಳ ಕಾಡುಗಳನ್ನು ನಾಶ ಮಾಡಿ ಕಾಫಿ, ಟೀ, ರಬ್ಬರ್ ಎಸ್ಟೇಟ್‌ಗಳನ್ನಾಗಿ ಪರಿವರ್ತಿಸಿದರು. ಈ ರೀತಿಯ ಅಕ್ರಮ, ಅರಣ್ಯಗಳ ಇಂದಿಗೂ ಎಗ್ಗಿಲ್ಲದೇ ನಡೆಯುತ್ತಿದೆ. ನಮ್ಮನ್ನಾಳುವ ವರ್ಗ ಎಂಜಲು ಕಾಸು ಪಡೆದು ಕಣ್ಮುಚ್ಚಿ ಕುಳಿತಿರುವುದು ವಿಷಾದನೀಯ ಸಂಗತಿ.

**ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಬುಡಕಟ್ಟುಗಳು**

ಕರ್ನಾಟಕ ರಾಜ್ಯ ಪರಿಶಿಷ್ಟ ಪಂಗಡಗಳ ಕಲ್ಯಾಣ ನಿರ್ದೇಶನಾಲಯದ ಪ್ರಕಾರ ಉಡುಪಿ ಜಿಲ್ಲೆಯನ್ನು ಒಳಗೊಂಡ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಒಟ್ಟು ನಾಲ್ಕು ಬುಡಕಟ್ಟುಗಳಿವೆ. ಅವುಗಳೆಂದರೆ ಕಮ್ಮಾರ, ಕೊರಗ, ಮಲೆಕುಡಿಯ ಮತ್ತು ಮರಾಠಿ(ಮರಾಟಿ). ರಾಜ್ಯದಲ್ಲಿ ಕೊರಗ ಮತ್ತು ಕಾಡುಕುರುಬ ಬುಡಕಟ್ಟುಗಳನ್ನು ಪ್ರಾಚೀನ ಬುಡಕಟ್ಟು(Primitive Tribes)ಗಳು ಎಂದು ನಿರ್ಣಯಿಸಲಾಗಿದೆ.

ಅಮೃತ ಸೋಮೇಶ್ವರ ಅವರು ಕೊರಗರ ಮೂಲದ ಬಗೆಗಿನ ತಮ್ಮ ಅಭಿಪ್ರಾಯವನ್ನು ಪುರುಷೋತ್ತಮ ಬಿಳಿಮಲೆ ಅವರು ಉಲ್ಲೇಖಿಸಿದ್ದಾರೆ. “ದಕ್ಷಿಣ ಕನ್ನಡದ ಕೊರಗ ಎಂಬ ಪಂಗಡವು ತುಂಬ ಕುತೂಹಲಕಾರಿ ವಿಚಾರಗಳನ್ನೊಳಗೊಂಡ ಒಂದು ಜನಸಮುದಾಯ. ಹೆಚ್ಚಿನವರು ಈಗ ತುಳು ಭಾಷೆಯನ್ನು ಮಾತಾಡುತ್ತಿರುವವರಾದರೂ ಅವರದೇ ಆದ ಭಾಷೆ ಇದೆ. ಈ ಕೊರಗ ಭಾಷೆ ದ್ರಾವಿಡ ಭಾಷಾ ಪರಿವಾರಕ್ಕೆ, ಅದರಲ್ಲೂ ಉತ್ತರ ದ್ರಾವಿಡಕ್ಕೆ ಸೇರುವುದಾಗಿದೆ ಆ ಭಾಷೆಯನ್ನು ಅಧ್ಯಯನ ಮಾಡಿದ ಭಾಷಾತಜ್ಞರು ಅಭಿಪ್ರಾಯ ಪಡುತ್ತಾರೆ”(ಪು.೨೬, ೧೯೯೩).

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಅಲ್ಪಸಂಖ್ಯಾತ ಮತ್ತೊಂದು ಬುಡಕಟ್ಟು ಸಮುದಾಯವೇ ಮಲೆಕುಡಿಯ. ಇವರು ಕೂಡ ಆರ್ಥಿಕವಾಗಿ ಹಿಂದುಳಿದಿದ್ದಾರೆ. ಪ್ರಾಚೀನ ಕಾಲದಿಂದಲೂ ಕರಾವಳಿ ಮತ್ತು ಮಲೆನಾಡಿನ ಕಾಡು-ಬೆಟ್ಟಗಳಲ್ಲಿ ಗುಡಿಸಲುಗಳನ್ನು ನಿರ್ಮಿಸಿಕೊಂಡು ಜೀವನ ಮಾಡುತ್ತಾ ಬಂದಿದ್ದಾರೆ. ಕಾಡಿನ ಉಪಉತ್ಪನ್ನಗಳನ್ನು ಸಂಗ್ರಹಿಸುತ್ತ, ಬುಟ್ಟಿ, ಕುಕ್ಕೆ, ಗೆರಸೆ ಇನ್ನಿತರ ಕರಕುಶಲ ಗೃಹೋಪಯೋಗಿ ಪರಿಕರಗಳನ್ನು

ವಿವಿಧ ಬಳ್ಳಿಗಳಿಂದ ತಯಾರಿಸಿ ಮಾರಾಟ ಮಾಡಿ ಜೀವನ ಮಾಡುತ್ತಾ ಬಂದಿದ್ದಾರೆ ಮಲೆಕುಡಿಯರು.

ಕೊರಗ ಮತ್ತು ಮಲೆಕುಡಿಯ ಬುಡಕಟ್ಟು ಸಮುದಾಯಗಳಿಗೆ ಹೋಲಿಸಿದರೆ ಮರಾಠಿ (ಮರಾಟಿ) ಬುಡಕಟ್ಟು ಸಮುದಾಯ ಅಭಿವೃದ್ಧಿಯ ಪಥದಲ್ಲಿರುವ ಇನ್ನೊಂದು ಬುಡಕಟ್ಟು ಸಮುದಾಯವಾಗಿದೆ. ಅವಿಭಜಿತ ದಕ್ಷಿಣ ಕನ್ನಡ ಮತ್ತು ಕೇರಳ ರಾಜ್ಯದ ಕಾಸರಗೋಡು, ಹೊಸದುರ್ಗ ತಾಲೂಕುಗಳಲ್ಲಿ ಮತ್ತು ಆಂಶಿಕವಾಗಿ ಕೊಡಗು(ಮರಾಠ) ಚಿಕ್ಕಮಗಳೂರು, ಶಿವಮೊಗ್ಗ ಜಿಲ್ಲೆಗಳಲ್ಲಿಯೂ ಮರಾಠಿ ಬುಡಕಟ್ಟು ಜನರು ಇದ್ದಾರೆ.

**ಅಧ್ಯಯನದ ಉದ್ದೇಶ**

ಯಾವುದೇ ಒಂದು ಬುಡಕಟ್ಟಿನ ಸಾಂಸ್ಕೃತಿಕ ಅಧ್ಯಯನ ಅಥವಾ ಸಾಮಾಜಿಕ ಅಧ್ಯಯನದ ಮೂಲ ಉದ್ದೇಶವೇ ಆ ಬುಡಕಟ್ಟಿನ ಸಂಸ್ಕೃತಿಯ ಮೂಲ ಸ್ವರೂಪವನ್ನು ತಿಳಿಯುವುದೇ ಆಗಿದೆ. ಸಮಾಜದಲ್ಲಿ ಆ ಬುಡಕಟ್ಟಿನ ಸ್ಥಾನಮಾನಗಳ ಜೊತೆಗೆ ಇತರೆ ಸಮುದಾಯಗಳೊಂದಿಗೆ ಬಾಂಧವ್ಯ ಅಥವಾ ಕೊಡುಕೊಳ್ಳುವಿಕೆ, ಆ ಮೂಲಕ ಅಭಿವೃದ್ಧಿ ಹೊಂದಿರುವ ಬಗೆಗೆ ವಿಮರ್ಶಿಸುವುದೇ ಆಗಿದೆ. ಪ್ರತಿಯೊಂದು ಬುಡಕಟ್ಟು ಸಮುದಾಯವೂ ತನ್ನದೇ ಆದ ಅಸ್ಮಿತೆಯನ್ನು ಉಳಿಸಿಕೊಂಡು ಬಂದಿರುವುದನ್ನು ಕಾಣಬಹುದು. ಶಿಕ್ಷಣ, ಉದ್ಯೋಗ, ಬಡತನ, ಅಸ್ಪೃಶ್ಯತೆ ಹೀಗೆ ಇವೆಲ್ಲವೂ ಇರಬಹುದು. ಆದರೆ ಅದಕ್ಕಿಂತಲೂ ಮೌಲ್ಯಯುತವಾದ ಸಂಸ್ಕೃತಿ, ಮಾನವೀಯತೆ, ಪರೋಪಕಾರ ಗುಣಗಳೆಲ್ಲವೂ ಬಹುತೇಕ ಬುಡಕಟ್ಟು ಸಮುದಾಯಗಳಲ್ಲಿರುವುದನ್ನು ಎಲ್ಲ ಅಧ್ಯಯನಗಳೂ ಜಗಜ್ಜಾಹೀರುಗೊಳಿಸಿವೆ. ಈ ರೀತಿಯ ಗುಣ-ಸ್ವಭಾವ, ಸಂಸ್ಕೃತಿಗಳಿದ್ದರೆ ಸಾಕೇ ಎಂಬ ಪ್ರಶ್ನೆ ಉದ್ಭವಿಸುವುದು ಸಹಜ. ಹೌದು ಅದರಿಂದಲೇ ಜೀವನ ಸಾಗದು. ನಿತ್ಯ ನಿರಂತರ ತುತ್ತು ಅನ್ನಕ್ಕೂ ಪರದಾಡಬೇಕಾದಂಥ ಸ್ಥಿತಿಗತಿಗಳಿರುವುದು ನಿಜ. ಆದರೆ ನಾಗರಿಕರೆನಿಸಿಕೊಂಡಿರುವ ಇತರೆ 'ಮುಂದುವರಿದ' ಸಮುದಾಯಗಳಲ್ಲಿ ಮೇಲಿನ ಗುಣಸ್ವಭಾವಗಳು ಅತ್ಯಲ್ಪವಾಗುತ್ತಿರುವುದನ್ನು ಅಧ್ಯಯನಗಳು ದೃಢಪಡಿಸಿವೆ.

ಪ್ರಸ್ತುತ 'ಸಾಮಾಜಿಕ ಬದಲಾವಣೆಯಲ್ಲಿ ಕೊರಗರು' ಎಂಬ ಶೀರ್ಷಿಕೆಯಡಿಯ ಅಧ್ಯಯನದಲ್ಲಿ ಕೊರಗ ಬುಡಕಟ್ಟು ಸಮುದಾಯಕ್ಕೆ ಸಂಬಂಧಿಸಿದಂತೆ ಪ್ರಮುಖ ಉದ್ದೇಶಗಳು ಈ ರೀತಿಯಾಗಿವೆ. 'ಪರಿವರ್ತನೆ ಜಗದ ನಿಯಮ' ಎಂಬಂತೆ ಬದಲಾದ ಕಾಲಕ್ಕನುಗುಣವಾಗಿ ಕೊರಗ ಬುಡಕಟ್ಟು ಜನರಲ್ಲಿ ಆದ ಬದಲಾವಣೆಯನ್ನು ಗುರುತಿಸುವುದೇ ಅಧ್ಯಯನದ ಮೂಲ ಉದ್ದೇಶ.

ಕೊರಗರ ಆಚರಣೆಗಳಲ್ಲಿ, ಸಂಪ್ರದಾಯಗಳಲ್ಲಿ, ರೀತಿ-ರಿವಾಜುಗಳಲ್ಲಿ ಆದ ಬದಲಾವಣೆಯನ್ನು ದಾಖಲಿಸುವುದು ಪ್ರಸ್ತುತ ಅಧ್ಯಯನದ ಪ್ರಮುಖ ಉದ್ದೇಶ.

ಪ್ರಾಚೀನ ಕಾಲದಿಂದಲೂ ಕಾಡು-ಮೇಡುಗಳಲ್ಲಿ ಜೀವನ ನಡೆಸುತ್ತಾ ಬಂದಿರುವ ಕೊರಗರು ವಿವಿಧ ಬಳ್ಳಿಗಳನ್ನು ಉಪಯೋಗಿಸಿಕೊಂಡು ಕಲಾತ್ಮಕವಾದ ಪರಿಕರಗಳನ್ನು ಹೆಣೆದು ಮಾರಾಟ ಮಾಡಿ ಜೀವನ ನಡೆಸುತ್ತಾ ಬಂದಿದ್ದಾರೆ. ಆದರೆ ಅಭಿವೃದ್ಧಿಯ ನೆಪದಲ್ಲಿ ಆಡಳಿತಗಾರರು, ಸರ್ಕಾರಗಳು ಕಾಡುಗಳನ್ನೇ ನಾಶ ಮಾಡುತ್ತಿರುವ ಈ ಸಂದರ್ಭದಲ್ಲಿ ಕೊರಗರ ಮೂಲವೃತ್ತಿ ಯಾವ ಹಂತದಲ್ಲಿದೆ? ಮೂಲವೃತ್ತಿಗೆ ಸಂಬಂಧಿಸಿದಂತೆ ಕೊರಗರು ಎದುರಿಸುತ್ತಿರುವ ಸವಾಲುಗಳೇನು ಎಂಬುದನ್ನು ತಿಳಿಯುವುದು ಈ ಅಧ್ಯಯನದ ಉದ್ದೇಶವಾಗಿದೆ.

ಆದಿಮ ಬುಡಕಟ್ಟು ಸಮುದಾಯವಾದ ಕೊರಗರ ಡೋಲುವಾದನ, ಕೊಳಲು ವಾದನ ಅವರ ಅನನ್ಯತೆಯ ಸಂಕೇತಗಳಾಗಿವೆ. ಪ್ರಸ್ತುತ ಸಂದರ್ಭದಲ್ಲಿ ಪಾಶ್ಚಾತ್ಯ ಸಂಸ್ಕೃತಿ, ಸಂಗೀತಗಳ ಅಬ್ಬರದಲ್ಲಿ ಮೂಲ ದೇಸಿ ಸಂಸ್ಕೃತಿಯ ಡೋಲುವಾದನ, ಕೊಳಲುವಾದನ ಮತ್ತು ಕೊರಗರ ನೃತ್ಯಗಳಂಥ ಕಲೆಗಳಲ್ಲಿ ಆಗಿರುವ ಬದಲಾವಣೆಗಳನ್ನು ಗುರುತಿಸುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

ಭಾರತೀಯ ಅನಿಷ್ಟ ಪದ್ಧತಿಯೆಂದು ಕರೆಯಲ್ಪಡುವ ಜಾತಿ, ಶ್ರೇಣೀಕರಣ ವ್ಯವಸ್ಥೆಯಲ್ಲಿ ಕೊರಗರು ಅಸ್ಪೃಶ್ಯರಾಗಿ ಕಂಡುಬರುತ್ತಾರೆ. ದಿನದಿಂದ ದಿನಕ್ಕೆ ಎಲ್ಲಾ ರೀತಿಯಲ್ಲೂ ಸ್ಥಿತ್ಯಂತರಕ್ಕೆ ಒಳಪಡುತ್ತಿರುವ ಸಮಾಜದಲ್ಲಿ, ಸಂಪ್ರದಾಯಗಳಲ್ಲಿ, ಸಾಮಾಜಿಕ ಸ್ಥಾನಮಾನಗಳಲ್ಲಿ ಕೊರಗರು ಯಾವ ಸ್ಥಿತಿಯಲ್ಲಿದ್ದಾರೆ ಎಂಬುದನ್ನು ಗುರುತಿಸಲು ಉದ್ದೇಶಿಸಲಾಗಿದೆ.

ಈ ಮೊದಲು ಪ್ರಸ್ತಾಪಿಸಿದ ಪ್ರಮುಖ ಉದ್ದೇಶಗಳ ಜೊತೆಗೆ ಕೊರಗರ ಇಂದಿನ ಶೈಕ್ಷಣಿಕ, ಆರ್ಥಿಕ ಸ್ಥಿತಿಗತಿಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಪರಾಮರ್ಶಿಸಲಾಗಿದೆ. ಸರ್ಕಾರದ ಯೋಜನೆಗಳು, ಸವಲತ್ತುಗಳು ಯಾವ ರೀತಿಯಲ್ಲಿ ಕೊರಗರಿಗೆ ತಲುಪುತ್ತಿವೆ. ಅದರ ಸದುಪಯೋಗ ಯಾವ ರೀತಿಯಲ್ಲಿದೆ ಎಂಬುದನ್ನು ಪ್ರಸ್ತುತ ಅಧ್ಯಯನದಲ್ಲಿ ತಿಳಿಯಲಾಗಿದೆ.

ಒಟ್ಟಾರೆಯಾಗಿ ಅವಿಭಜಿತ ದಕ್ಷಿಣ ಕನ್ನಡ(ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆ) ಜಿಲ್ಲೆಯಲ್ಲಿರುವ ಆದಿಮ ಬುಡಕಟ್ಟು ಸಮುದಾಯ(Primitive Tribes)ವಾದ ಕೊರಗರಲ್ಲಿ ಆದ ಸಾಮಾಜಿಕ ಬದಲಾವಣೆಯನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ.

## ಅಧ್ಯಯನದ ವ್ಯಾಪ್ತಿ

ಕರ್ನಾಟಕದ ಕರಾವಳಿ ಪ್ರದೇಶದ ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಯನ್ನು ಪ್ರಸ್ತುತ ಅಧ್ಯಯನದ ವ್ಯಾಪ್ತಿಯನ್ನಾಗಿಸಿಕೊಳ್ಳಲಾಗಿದೆ.

ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳೆರಡೂ ಕರಾವಳಿ ಮತ್ತು ಮಲೆನಾಡು ಪ್ರದೇಶಗಳನ್ನು ಒಳಗೊಂಡಿದೆ. 'ತುಳುನಾಡು' ಎಂದೇ ಪ್ರತ್ಯೇಕ ಭಾಷಿಕ ಹೆಸರನ್ನು ಪಡೆದ ಈ ಜಿಲ್ಲೆಗಳ ಎಲ್ಲ ತಾಲೂಕುಗಳಲ್ಲಿ ಕೊರಗರು ಕಂಡುಬರುತ್ತಾರೆ. ಒಂದು ಅಂದಾಜಿನ ಪ್ರಕಾರ ಎರಡು ಜಿಲ್ಲೆಗಳಲ್ಲಿ ಅತೀ ಕಡಿಮೆ ಜನಸಂಖ್ಯೆಯನ್ನು ಹೊಂದಿರುವ ಸಮುದಾಯ ಕೊರಗರದ್ದು. ಸುಳ್ಯ, ಪುತ್ತೂರು, ಬಂಟ್ವಾಳ, ಬೆಳ್ತಂಗಡಿ ಮತ್ತು ಮಂಗಳೂರು ಎಂಬ ಆರು ತಾಲೂಕುಗಳನ್ನು ದಕ್ಷಿಣ ಕನ್ನಡ ಜಿಲ್ಲೆ ಹೊಂದಿದೆ. ಈ ಆರು ತಾಲೂಕುಗಳಲ್ಲಿ ಮಂಗಳೂರು, ಬಂಟ್ವಾಳ ಮತ್ತು ಬೆಳ್ತಂಗಡಿ ತಾಲೂಕುಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಕೊರಗರು ವಾಸಿಸುತ್ತಿದ್ದಾರೆ. ಕಾರ್ಕಳ, ಉಡುಪಿ ಮತ್ತು ಕುಂದಾಪುರ ತಾಲೂಕುಗಳನ್ನೊಳಗೊಂಡ ಉಡುಪಿ ಜಿಲ್ಲೆಯಲ್ಲಿ ಮೂರು ತಾಲೂಕುಗಳಲ್ಲಿ ಕೊರಗರು ಕಂಡುಬರುತ್ತಾರೆ. ಜನಸಂಖ್ಯಾ ಪ್ರಮಾಣವನ್ನು ಗಮನಿಸಿದರೆ ಕೊರಗರ ಜನಸಂಖ್ಯಾ ಪ್ರಮಾಣ ಋಣಾತ್ಮಕವಾಗಿದೆ ಎಂಬುದನ್ನು ಸರ್ಕಾರದ ಅಂಕಿಅಂಶಗಳು ತಿಳಿಸುತ್ತವೆ. ಈ ಎರಡು ಜಿಲ್ಲೆಗಳನ್ನು ಹೊರತುಪಡಿಸಿ ಕೇರಳ ರಾಜ್ಯದ ಕಾಸರಗೋಡು, ಕರ್ನಾಟಕದ ಕೊಡಗು, ಚಿಕ್ಕಮಗಳೂರು ಮತ್ತು ಶಿವಮೊಗ್ಗ ಜಿಲ್ಲೆಗಳಲ್ಲಿ ವಲಸೆ ಹೋದ ಕೊರಗರು ವಾಸಿಸುತ್ತಿದ್ದಾರೆ.

## ಅಧ್ಯಯನದ ವಿಧಾನ

ಸಾಮಾಜಿಕ ಬದಲಾವಣೆಯಲ್ಲಿ ಕೊರಗರು ಎಂಬ ಪ್ರಸ್ತುತ ಅಧ್ಯಯನವು ಕ್ಷೇತ್ರಕಾರ್ಯಾಧಾರಿತ ಅಧ್ಯಯನವಾಗಿದೆ. ಇದುವರೆಗೆ ಕೆಲವೊಂದು ಪೂರ್ಣಪ್ರಮಾಣದ ಅಧ್ಯಯನಗಳು ನಡೆದರೂ ಇತ್ತೀಚಿನ ಬದಲಾವಣೆಯನ್ನು ಕಾಣಲು ಸಾಧ್ಯವಾಗಿಲ್ಲ. ಕರ್ನಾಟಕದ ಸಾಂಪ್ರದಾಯಿಕ ಬುಡಕಟ್ಟುಗಳಲ್ಲಿ ಒಂದಾದ ಕೊರಗರ ಸಂಪ್ರದಾಯ, ಆಚರಣೆಗಳಿಗೆ ಸಂಬಂಧಿಸಿದಂತೆ ಸಂಶೋಧನಾತ್ಮಕ ಅಧ್ಯಯನಗಳು ಮತ್ತು ಅಲ್ಲಲ್ಲಿ ಬಿಡಿ ಬಿಡಿ ಲೇಖನಗಳು ಪ್ರಕಟವಾಗಿವೆ. ಅವುಗಳನ್ನೆಲ್ಲಾ ಅವಲೋಕಿಸಲಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಯಾದ್ಯಂತ ಕ್ಷೇತ್ರಕಾರ್ಯಗಳನ್ನು ಕೈಗೊಂಡು ಕೊರಗರಲ್ಲಿ ಆದ ಸಾಮಾಜಿಕ ಬದಲಾವಣೆಯ ಮಾಹಿತಿಗಳನ್ನು ಪಡೆಯಲಾಗಿದೆ.

ಈ ಮೊದಲು ಪ್ರಸ್ತಾಪಿಸಿದಂತೆ ಆನುಷಂಗಿಕ ಮಾಹಿತಿಗಳನ್ನು ಬಳಸಿಕೊಂಡು ಪ್ರಸ್ತುತ ಮಹಾಪ್ರಬಂಧವನ್ನು ಸಿದ್ಧಪಡಿಸಲಾಗಿದೆ. ಪಾರಂಪರಿಕವಾಗಿ ಕೊರಗರು ಈ ಅವಿಭಜಿತ ಜಿಲ್ಲೆಯಲ್ಲಿ ಎಲ್ಲೆಲ್ಲಿ ವಾಸಿಸುತ್ತಿದ್ದಾರೋ ಆ ಕ್ಷೇತ್ರಗಳಿಗೆ ಭೇಟಿ ಕೊಟ್ಟು ಕಾರ್ಯಕಲಾಪಗಳನ್ನು ಕೂಲಂಕಷವಾಗಿ ಅವಲೋಕಿಸಿ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಈ ಹಿನ್ನೆಲೆಯಲ್ಲಿ ಅಂಕಿಅಂಶಗಳಿಗೆ ಸಂಬಂಧಿಸಿದಂತೆ ಜಿಲ್ಲಾ ಗೆಝೆಟಿಯರ್, ಜನಗಣತಿ ವರದಿ, ಜಿಲ್ಲಾ ಸಾಂಖ್ಯಿಕ ಇಲಾಖೆಯಲ್ಲಿ ಲಭ್ಯವಿರುವ ಮಾಹಿತಿಗಳನ್ನು ಪಡೆದುಕೊಂಡು ಮಹಾಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

**ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ**

೧೯೦೯ರಲ್ಲಿ ಸರ್ಕಾರಿ ಮುದ್ರಣಾಲಯ ಮದ್ರಾಸ್‌ನಿಂದ ಪ್ರಕಟವಾದ ಕೃತಿ Caste and Tribes of Southern India Vol-III, ಥರ್ಸ್ಟನ್ ಎಡ್ಗರ್ ಮತ್ತು ಕೆ. ರಂಗಾಚಾರಿ ಅವರು ರಚಿಸಿದ ಪ್ರಸ್ತುತ ಕೃತಿಯಲ್ಲಿ ಕೊರಗರನ್ನು ಪರಿಚಯಿಸಲಾಗಿದೆ. ಜೊತೆಗೆ ಅಜಲು ಪದ್ಧತಿ ಒಳಪಂಗಡ, ಹಬ್ಬಾಚರಣೆ, ನೃತ್ಯ ಮತ್ತು ಕೊರಗರ ಮೂಲ ಇತಿಹಾಸಕ್ಕೆ ಸಂಬಂಧಿಸಿದಂತೆ ಅನೇಕ ಸಂಕ್ಷಿಪ್ತ ಮಾಹಿತಿಗಳನ್ನು ನೀಡಲಾಗಿದೆ.

The Koragas Languages ಎಂಬ ಕೃತಿಯನ್ನು ಡಿ.ಎನ್.ಎಸ್. ಭಟ್ ಅವರು ೧೯೭೧ರಲ್ಲಿ ಬರೆದಿದ್ದು Deccan College PG and Research Institution, Poona ದಿಂದ ಪ್ರಕಟವಾಗಿದೆ. ಸುಮಾರು ಏಳು ಅಧ್ಯಯನಗಳನ್ನು ಒಳಗೊಂಡ ಈ ಕೃತಿಯಲ್ಲಿ ಒಂಟಿ ಕೊರಗ, ಸೊಪ್ಪು ಕೊರಗ, ಮುಂಡು ಕೊರಗರ ಕೊರಗ ಭಾಷೆಯ ವೈಶಿಷ್ಟ್ಯಗಳನ್ನು ವಿಶ್ಲೇಷಿಸಲಾಗಿದೆ. ಕೊರಗ ಭಾಷೆಯ ಮುಖೋಚ್ಚಾರಿಕ ಧ್ವನಿಶಾಸ್ತ್ರ(Phonology), ನಾಮಪದ, ಸರ್ವನಾಮ, ಕ್ರಿಯಾಪದ, ಬಳಕೆ ಹೀಗೆ ಕೊರಗ ಭಾಷೆಯನ್ನು ವಿಶ್ಲೇಷಣೆ ಮಾಡಲಾಗಿದೆ.

ರಾಮಕೃಷ್ಣ ಟಿ. ಶೆಟ್ಟಿ ಅವರು ಪೂನಾ ವಿಶ್ವವಿದ್ಯಾಲಯಕ್ಕೆ 'Koroga Grammer' ಎಂಬ ವಿಷಯದ ಮಹಾಪ್ರಬಂಧವನ್ನು ೧೯೭೮ರಲ್ಲಿ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ್ದಾರೆ. ಈ ಮಹಾಪ್ರಬಂಧದಲ್ಲಿ ಐದು ಪ್ರಾದೇಶಿಕ ಕೊರಗರ ಭಾಷೆಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಪ್ರಾದೇಶಿಕ ಭಾಷಾ ಭಿನ್ನತೆ, ಕೊರಗ ಭಾಷೆಯ ವಿಶೇಷತೆಗಳನ್ನು ರಾಮಕೃಷ್ಣ ಡಿ. ಶೆಟ್ಟಿ ಅವರು ಅಧ್ಯಯನಕ್ಕೆ ಒಳಪಡಿಸಿದ್ದಾರೆ.

'ಕರಾವಳಿ ಜಾನಪದ' ಡಾ. ಪುರುಷೋತ್ತಮ ಬಿಳಿಮಲೆ ಅವರ ಸಂಶೋಧನಾತ್ಮಕ ಕೃತಿ ೧೯೯೦ರಲ್ಲಿ ಪ್ರಕಟವಾದ ಕೃತಿಯಲ್ಲಿ ಕಂಬುಲ ಆಚರಣೆಯ ಬಗೆಗಿನ ವಿಶ್ಲೇಷಣೆಯಿದೆ. ಕೊರಗರು ಭಾಗವಹಿಸುವ ಕಂಬುಲದ ಸೂಕ್ಷ್ಮ ನೋಟವನ್ನು ಪುರುಷೋತ್ತಮ ಬಿಳಿಮಲೆ ಅವರು ವಿಶ್ಲೇಷಿಸಿದ್ದಾರೆ. ಕಂಬುಲದ ಆಚರಣೆಯಲ್ಲಿ ಕೊರಗರ ಪಾತ್ರ, ಅನುಭವ, ಸ್ಥಾನಮಾನಗಳ ಬಗೆಗಿನ ಚರ್ಚೆಯನ್ನು ಈ ಕೃತಿಯಲ್ಲಿ ಕಾಣಬಹುದು.

ಡಾ. ಪುರುಷೋತ್ತಮ ಬಿಳಿಮಲೆ ಅವರು ಸಂಶೋಧನಾತ್ಮಕವಾಗಿ ಬರೆದಂಥ ಕೊರಗರ ಸಂಸ್ಕೃತಿ ಕೃತಿ ಕೊರಗರ ಬಗೆಗೆ ಉತ್ತಮ ರೀತಿಯಲ್ಲಿ ಮಾಹಿತಿಗಳನ್ನು ನೀಡುತ್ತದೆ. ೧೯೯೩ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿಯಿಂದ ಪ್ರಕಟವಾದ ಕೃತಿಯ ಪ್ರಧಾನ ಸಂಪಾದಕರು ಡಾ. ಬರಗೂರು ರಾಮಚಂದ್ರಪ್ಪ. ಕೊರಗರ ಹಿನ್ನೆಲೆ, ಜೀವನ ವಿಧಾನ, ಸಾಮಾಜಿಕ ವ್ಯವಸ್ಥೆ, ಭಾಷೆ ಬಗೆಗಿನ ಮಾಹಿತಿಗಳನ್ನು ನೀಡಿದ್ದಾರೆ. ಅನುಬಂಧದಲ್ಲಿ ಕೊರಗರ ಜನಪದ ಹಾಡುಗಳನ್ನು, ಕೋಲ, ಕವಿತ, ಶಿಶುಗೀತೆ, ಛಾಯಾಚಿತ್ರಗಳನ್ನು ನೀಡಿದ್ದಾರೆ. ಒಂದು ರೀತಿಯಲ್ಲಿ ಕೊರಗರ ಸಮಗ್ರ ಮಾಹಿತಿಗಳನ್ನು ಒಳಗೊಂಡ ಕೃತಿ ಇದಾಗಿದೆ.

ದಕ್ಷಿಣ ಕನ್ನಡ ಜಿಲ್ಲೆಯ ಹರಿಜನ ಮತ್ತು ಗಿರಿಜನರ ಸಾಮಾಜಿಕ ಇತಿಹಾಸ ಎಂಬ ಕೃತಿಯನ್ನು ಕನ್ನಡ ಪುಸ್ತಕ ಪ್ರಾಧಿಕಾರ ೧೯೯೪ರಲ್ಲಿ ಪ್ರಕಟಿಸಿದೆ. ಪಿ. ಕಮಲಾಕ್ಷ ಅವರು ಈ ಕೃತಿಯ ಕರ್ತೃ. ಇದರಲ್ಲಿ ಕೊರಗರನ್ನು ಸ್ಥೂಲವಾಗಿ ಪರಿಚಯಿಸಲಾಗಿದೆ. ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಕೊರಗರ ನೆಲೆಗಳನ್ನು, ಬಳಿ ಪದ್ಧತಿಯನ್ನು, ಒಳಪಂಗಡಗಳನ್ನು ಮತ್ತು ಸಂಪ್ರದಾಯಾಚರಣೆಗಳನ್ನು ಪರಿಚಯಿಸಲಾಗಿದೆ.

ಡಾ. ಹಿ.ಚಿ. ಬೋರಲಿಂಗಯ್ಯ ಅವರು ಸಂಪಾದಿಸಿದ ಕರ್ನಾಟಕ ಜನಪದ ಕಲೆಗಳ ಕೋಶ ಗ್ರಂಥವನ್ನು ಹಂಪಿ, ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗ ೧೯೯೬ರಲ್ಲಿ ಪ್ರಕಟಿಸಿದೆ. ಈ ಗ್ರಂಥದಲ್ಲಿ ದಕ್ಷಿಣ ಕನ್ನಡದ ಮೂಲನಿವಾಸಿಗಳಾದ ಕೊರಗರ ಕುಣಿತಗಳನ್ನು ಪರಿಚಯಿಸಿದ್ದಾರೆ. ಕೊರಗ ವೇಷವನ್ನು ಪಾಡ್ದನ ಸಹಿತವಾಗಿ ವಿವರಿಸಿರುವುದನ್ನು ಕಾಣಬಹುದು. ಕುಂದಾಪುರ ಪರಿಸರದ ಕೊರಗರ ಕಲೆಯಾದ 'ಚುಣ್ಣಿ'ದ ಪರಿಚಯವೂ ಇಲ್ಲಿದೆ.

ಕರ್ನಾಟಕದ ಬುಡಕಟ್ಟುಗಳ ಎರಡು ಸಂಪುಟಗಳನ್ನು ೧೯೯೮ರಲ್ಲಿ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಪ್ರಕಟಿಸಿದೆ. ಸಂಪುಟ ೧ನ್ನು ಡಾ. ಎಚ್.ಜೆ.

ಲಕ್ಕಪ್ಪಗೌಡ ಅವರು ಸಂಪಾದಿಸಿದ್ದಾರೆ. ೧ನೇ ಸಂಪುಟದಲ್ಲಿ ಪ್ರೊ. ಎ.ವಿ. ನಾವಡ ಅವರು 'ಕೊರಗರು' ಎಂಬ ಲೇಖನ ಬರೆದಿದ್ದು ಮಾಹಿತಿಪೂರ್ಣವಾಗಿದೆ. ಕೊರಗ ಬುಡಕಟ್ಟು ಲಕ್ಷಣ, ಇತಿಹಾಸ, ಪದ ನಿಷ್ಪತ್ತಿ ಕುಟುಂಬ, ಆಚರಣೆ-ಸಂಪ್ರದಾಯ, ಭಾಷೆ ಹೀಗೆ ಕೊರಗರ ಬಗೆಗಿನ ಮಾಹಿತಿಗಳನ್ನು ಸಂಕ್ಷಿಪ್ತವಾಗಿ ನಾವಡ ಅವರು ಈ ಲೇಖನದಲ್ಲಿ ನೀಡಿದ್ದಾರೆ.

ಸಿ. ವಾಸುದೇವನ್ ಅವರ Koragas: The forgotten of the Primitive tribe of Tulunadu, History and Culture Trichor. The Ethoo ಕೃತಿ ೧೯೯೮ರಲ್ಲಿ ಪ್ರಕಟವಾಗಿದೆ. ಅದರಲ್ಲಿ ಕೊರಗರ ಉಗಮ, ಸಂಪ್ರದಾಯ, ಇತಿಹಾಸ ಜನಸಂಖ್ಯೆ, ಸಾಕ್ಷರತೆ ಹೀಗೆ ಕೊರಗರನ್ನು ಪರಿಚಯಿಸಲಾಗಿದೆ. ಆಯಾ ಬುಡಕಟ್ಟು ಕೊರಗರ ಆಚರಣೆ ಸಂಪ್ರದಾಯ ಗಳನ್ನು, ಅವರ ಆಡಳಿತ, ವೇಷಭೂಷಣ ಹೀಗೆ ಅನೇಕ ಮಾಹಿತಿಗಳನ್ನು ಈ ಕೃತಿಯಲ್ಲಿ ದಾಖಲಿಸಲಾಗಿದೆ.

ಕೊರಗರ ಅಜಲು: ಒಂದು ವಿಶ್ಲೇಷಣೆ ಎಂಬ ಕೃತಿಯನ್ನು ೨೦೦೯ರಲ್ಲಿ ಬಾಬು ಕೊರಗ ಪಾಂಗಾಳ ಅವರು ಪ್ರಕಟಿಸಿದ್ದಾರೆ. ಮೂಲತಃ ಕೊರಗ ಬುಡಕಟ್ಟಿಗೆ ಸೇರಿದ ಬಾಬು ಕೊರಗ ಪಾಂಗಾಳ ಅವರು ತಮ್ಮದೇ ದೃಷ್ಟಿಕೋನದಲ್ಲಿ ಅಜಲು ಪದ್ಧತಿಯನ್ನು ವಿಶ್ಲೇಷಣೆ ಮಾಡಿದ್ದಾರೆ. ಅಜಲು ಪದ್ಧತಿಯ ಅಮಾನವೀಯ ಆಚರಣೆಯ ಸೂಕ್ಷ್ಮ ನೋಟಗಳನ್ನು ವಿಶ್ಲೇಷಿಸಿರುವ ಪಾಂಗಾಳ ಅವರು ಅದರ ವಿರುದ್ಧದ ಹೋರಾಟಗಳ ಹಂತಗಳನ್ನು ವಿವರಿಸಿದ್ದಾರೆ. ಸಾಮಾಜಿಕವಾಗಿ ಅಜಲು ಪದ್ಧತಿಯಿಂದ ಕೊರಗರನ್ನು ಹೇಗೆ ಮೂಲೆಗುಂಪು ಮಾಡಲಾಗಿದೆ, ಅಸ್ಪೃಶ್ಯರನ್ನಾಗಿ ಹೇಗೆ ಕಾಣಲಾಗುತ್ತಿದೆ ಎಂಬುದರ ಬಗೆಗಿನ ಮಾಹಿತಿಗಳನ್ನು ಈ ಕೃತಿ ನೀಡುತ್ತದೆ.

೧೯೯೧ರಲ್ಲಿ ಜಿಲ್ಲಾ ಪರಿಷತ್ತು ಮಂಗಳೂರು ಇವರಿಂದ ಪ್ರಕಟವಾದ ಕೃತಿ 'ಕೊರಗ ಜನಾಂಗ ವಿಶ್ಲೇಷಣಾತ್ಮಕ ಅಧ್ಯಯನ' ಈ ಕೃತಿಯನ್ನು ಪ್ರಾಧ್ಯಾಪಕರಿಂದ ಅರವಿಂದ ಮಾಲಗತ್ತಿ ಮತ್ತು ಒಡೆಯರ್ ಡಿ. ಹೆಗ್ಗಡೆ ಇವರು ಬರೆದಿದ್ದಾರೆ. ಕೊರಗರ ಹಿನ್ನೆಲೆ, ಲಕ್ಷಣ, ವೇಷಭೂಷಣ, ಆಹಾರ ಪದ್ಧತಿ, ನಂಬಿಕೆ-ಸಂಪ್ರದಾಯ ಹೀಗೆ ಅನೇಕ ಮಾಹಿತಿಗಳನ್ನು ಒಳಗೊಂಡ ಮಾಹಿತಿಗಳು ಈ ಕೃತಿಯಲ್ಲಿವೆ. ಕೊರಗರ ಸಮಸ್ಯೆಗಳನ್ನು ವಿಶ್ಲೇಷಿಸಿರುವ ಈ ಕೃತಿ ಕೆಲವೊಂದು ಪರಿಹಾರೋಪಾಯಗಳನ್ನು ಸೂಚಿಸುವುದು ಗಮನಾರ್ಹ.

B. Ramakrishna Reddy, Tribal lore of South India (With Gadaba and Irula Texts) Folklore Society of South Indian Languages Kariyavattom, Thirivananthapuram, 2004ರ ಕೃತಿಯಲ್ಲಿ ದಕ್ಷಿಣ ಕನ್ನಡ ಭಾಷೆಗಳಲ್ಲಿ ಕೊರಗರ ಭಾಷೆಯ ಬಗ್ಗೆ ವಿವರಣೆಯಿದೆ. ಮುಖ್ಯವಾಗಿ ಕೊರಗ ಭಾಷೆಯಲ್ಲಿ ಕಂಡುಬರುವ ಪ್ರಾದೇಶಿಕ ಭಿನ್ನತೆ ಹಾಗೂ ಭಿನ್ನತೆಗಳಿಗೆ ಇರುವ ಕಾರಣಗಳನ್ನು ವಿವರಿಸಲಾಗಿದೆ. ಕೊರಗ ಭಾಷೆಯ ಮೇಲೆ ಸ್ಥಳೀಯ ಕನ್ನಡ ತುಳು ಭಾಷೆಗಳು ಬೀರಿರುವ ಪ್ರಭಾವಗಳನ್ನು ವಿಶ್ಲೇಷಿಸಿದ್ದಾರೆ.

M. Gurulingaiah, Tribal Culture change and Mobility Anmol Publications Pvt. Ltd., New Delhi ಎಂಬ ಕೃತಿಯಲ್ಲಿ ಕರ್ನಾಟಕದ ಬುಡಕಟ್ಟುಗಳ ಬಗ್ಗೆ ಮಾಹಿತಿಯಿದೆ. ಸಾಮಾಜಿಕ ಪರಿವರ್ತನೆ ಕುರಿತಾದ ವ್ಯಾಖ್ಯೆಗಳು, ಡಾರ್ವಿನ್‌ನ ವಿಕಾಸವಾಗಿ ಸಿದ್ಧಾಂತ, ಹರ್ಬರ್ಟ್ ಸ್ಪೆನ್ಸರ್‌ರವರ "ಸಾಮಾಜಿಕ ವಿಕಾಸವಾದ ಪಿಎ ಸೊರೋಕಿನ್ ಸ್ಪೆಂಜ್ಲರ್‌ರವರ "ಚಕ್ರೀಯ ಸಿದ್ಧಾಂತಗಳ ಬಗ್ಗೆ ವಿವರಣೆಯಿದೆ. ಅಷ್ಟೇ ಅಲ್ಲದೇ ಬುಡಕಟ್ಟುಗಳ ಸಮಾಜ ಮತ್ತು ಸಂಸ್ಕೃತಿ ಕುಟುಂಬ ಮತ್ತು ವಿವಾಹ, ಶಿಕ್ಷಣ ಮತ್ತು ಸಾಮಾಜಿಕ ಪರಿವರ್ತನೆ, ಅರ್ಥಿಕ ಸಂಘಟನೆ, ಧಾರ್ಮಿಕ ಸಂಘಟನೆ, ರಾಜಕೀಯ ಸಂಘಟನೆ ಮತ್ತು ಚಳುವಳಿ, ಸಾಮಾಜಿಕ ಚಲನೆಯ ಬಗ್ಗೆ ವಿವರಣೆಯಿದೆ.

ಹಂಪಿ ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗ ೨೦೦೦ನೇ ಇಸವಿಯಲ್ಲಿ ಪ್ರಕಟಿಸಿದ ಕರ್ನಾಟಕ ರಾಜ್ಯಕೋಶ–೪ ಜನಸಮುದಾಯ ಸಂಪುಟ(ಸಂ. ಹೆಚ್.ಡಿ.ಪ್ರಶಾಂತ)ದಲ್ಲಿ ಕೊರಗರ ಬಗೆಗೆ ಅಲ್ಪ ಪ್ರಮಾಣದ ಮಾಹಿತಿಗಳಿವೆ. ಅದನ್ನು ಪರಿಚಯಾತ್ಮಕ ಲೇಖನವೆನ್ನಬಹುದಾಗಿದೆ.

ಡಾ. ಕೆ.ಎಂ. ಮೇತ್ರಿ ಅವರ ಬುಡಕಟ್ಟು ಕುಲಕಸುಬುಗಳು ಕೃತಿಯನ್ನು ೨೦೦೨ರಲ್ಲಿ ಹಂಪಿ ಕನ್ನಡ ವಿಶ್ವವಿದ್ಯಾಲಯ, ಪ್ರಸಾರಾಂಗ ಪ್ರಕಟಿಸಿದೆ. ಕರ್ನಾಟಕದ ೪೯ ಬುಡಕಟ್ಟು ಜನರ ಪರಿಚಯದೊಂದಿಗೆ ಅವರ ಕುಲಕಸುಬುಗಳ ಮೇಲೆ ಬೆಳಕು ಚೆಲ್ಲುತ್ತದೆ ಈ ಕೃತಿ.

ಹಂಪಿ ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ಸಂಪುಟ ೪–೧, ಸಂಪುಟ ೪–೨ ಜನವರಿ–ಡಿಸೆಂಬರ್ ೨೦೦೭ ನಿಯತಕಾಲಿಕೆ ಸಂಚಿಕೆಯಲ್ಲಿ ಇಂದಿರಾ ಹೆಗ್ಗಡೆ ಅವರ ತುಳುನಾಡಿನ ಕೊರಗರು ಸಾಮಾಜಿಕ, ಆರ್ಥಿಕ ಸ್ಥಿತಿಗತಿ ಎಂಬ ಲೇಖನ ಪ್ರಕಟವಾಗಿದೆ. ಸುಮಾರು ೨೦ ಪುಟಗಳಲ್ಲಿ ಸಂಕ್ಷಿಪ್ತವಾಗಿ ಕೊರಗರ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳನ್ನು ವಿಶ್ಲೇಷಿಸಿದ್ದಾರೆ ಲೇಖಕರು.

Dr. K.M. Metry Forest Blossoms and the Concrete Jungle An Insight into Indian TrIbal Studies , prasaranga Kannada University Hampi, 2011ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಕೊರಗರ ಬಗ್ಗೆ ಮಾಹಿತಿಯಿದೆ. ಕೊರಗರಲ್ಲಿ ಕಂಡುಬರುತ್ತಿರುವ ಸಾಮಾಜಿಕ ಬದಲಾವಣೆ ಅವರು ಗುಲಾಮರು ಆದ ಬಗ್ಗೆ ಅವರ ವಿಶಿಷ್ಟ ಜನಪದ ಸಂಸ್ಕೃತಿ ಕೊರಗ ಭಾಷೆ ಕೊರಗರ ಬಹುಭಾಷೆ, ಮಾತೃಮೂಲ ಕುಟುಂಬ, ಹಿಂದೂ ದೇವರ ಆರಾಧನೆ ಅವರ ಬುಡಕಟ್ಟು ದೈವ ತನಿಯನ ಮತ್ತು ಕೊರ್ದಬ್ಬು, ಸೂರ್ಯನ ಆರಾಧನೆ, ರವಿವಾರದ ಪ್ರಾಮುಖ್ಯತೆ, ಮಾರಿಯಮ್ಮ ಪಂಜುರ್ಲಿ, ಕಲ್ಲುರ್ಟಿ ಆರಾಧನೆ, ವಾರ್ಷಿಕ ಗ್ರಾಮ ಹಬ್ಬಗಳಲ್ಲಿ ಅವರ ಪಾತ್ರ, ಅಸ್ಪೃಶ್ಯತಾ ಆಚರಣೆ, ಡೋಲುವಾದನ, ಕೊಳಲುವಾದನ ಮತ್ತು ಹಿಂದೂ ಹಬ್ಬಗಳಲ್ಲಿ ಧರಿಸುವ ವಿವಿಧ ವೇಷಗಳು, ಕೊರಗರ ವಿವಾಹ, ಜನಸಂಖ್ಯೆ, ಆರ್ಥಿಕತೆ ಶಿಕ್ಷಣದ ಬಗ್ಗೆ ವಿಶ್ಲೇಷಣೆಯಿದೆ.

ಡಾ. ಗಂಗಾಧರ ದೈವಜ್ಞ ಅವರು ಸಂಪಾದಿಸಿದ ಕೊರಗರು: ಸಮಕಾಲೀನ ಸ್ಪಂದನ ಕೃತಿಯನ್ನು ೨೦೧೨ರಲ್ಲಿ ಹಂಪಿ ಕನ್ನಡ ವಿಶ್ವವಿದ್ಯಾಲಯ ಪ್ರಸಾರಾಂಗ ಪ್ರಕಟಿಸಿದೆ. ಇದರಲ್ಲಿ ಎರಡನೇ ಬುಡಕಟ್ಟು ಸಮ್ಮೇಳನದಲ್ಲಿ (೨೦೧೦, ಏಪ್ರಿಲ್, ೧೭ ಮತ್ತು ೧೮) ಮಂಡಿತವಾದ ಲೇಖನಗಳನ್ನು ಸಂಪಾದಿಸಲಾಗಿದೆ. ಬಹುತೇಕ ಲೇಖನಗಳನ್ನು ಕೊರಗ ಸಮುದಾಯದವರೇ ಮಂಡಿಸಿರುವುದು ಈ ಗ್ರಂಥದ ವೈಶಿಷ್ಟ್ಯವಾಗಿದೆ. ಕೊರಗರ ಚರಿತ್ರೆ, ಸಂಸ್ಕೃತಿ, ಯೋಜನೆಗಳು, ಆಚರಣೆಗಳು ಮತ್ತು ನ್ಯಾಯ ಪದ್ಧತಿ ಇತ್ಯಾದಿಗಳ ಬಗೆಗಿನ ಮಾಹಿತಿಗಳನ್ನು ಈ ಕೃತಿ ಒಳಗೊಂಡಿದೆ. ಇಂದಿನ ಕಾಲಮಾನದಲ್ಲಿ ಕೊರಗರ ಮುಂದಿರುವ ಸವಾಲು, ಸಮಸ್ಯೆಗಳ ಬಗೆಗೆ ಇಲ್ಲಿನ ಲೇಖನಗಳು ಬೆಳಕು ಚೆಲ್ಲುತ್ತವೆ.

ಗುಣಪಾಲ್ ಶೆಟ್ಟಿ ಸಂಪಾದಿಸಿದ ಮೌನ ಮಾತಾದಾಗ ಕೃತಿಯನ್ನು ಸಮಗ್ರ ಗ್ರಾಮೀಣ ಆಶ್ರಮ, ಪೆರ್ನಾಲ್-ಉಡುಪಿ ಇವರು ೨೦೧೨ರಲ್ಲಿ ಪ್ರಕಟಿಸಿದ್ದಾರೆ. ಬುಡಕಟ್ಟು ಸಮ್ಮೇಳನದಲ್ಲಿ ಮಂಡಿತವಾದ ಲೇಖನಗಳನ್ನು ಇಲ್ಲಿ ನೀಡಲಾಗಿದೆ. ಕೊರಗರ ಒಟ್ಟು ಸಂಸ್ಕೃತಿಯನ್ನು, ಜೀವನ ಪದ್ಧತಿಯನ್ನು ಸ್ಥೂಲವಾಗಿ ನೀಡಲಾಗಿದೆ. ಕೊರಗರೇ ಬರೆದಿರುವ ಲೇಖನಗಳಿರುವುದು ಈ ಕೃತಿಯ ವೈಶಿಷ್ಟ್ಯ. ಅಂತೆಯೇ ಗುಣಪಾಲ್ ಶೆಟ್ಟಿ ಅವರು ಕೊರಗರ ಬಗೆಗೆ ಬರೆದಿರುವ ಲೇಖನಗಳೂ ಇಲ್ಲಿವೆ.

ಹಂಪಿ ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗ ೨೦೧೩ರಲ್ಲಿ ಪ್ರಕಟಿಸಿದ ಕರ್ನಾಟಕದ ಬುಡಕಟ್ಟು ಸಚಿತ್ರ ಕೋಶದ ಸಂಪಾದಕರು ಡಾ. ಹಿ.ಚಿ. ಬೋರಲಿಂಗಯ್ಯ ಮತ್ತು ಡಾ.

ಎ.ಎಸ್. ಪ್ರಭಾಕರ. ಈ ಕೃತಿಯಲ್ಲಿ ಛಾಯಾಚಿತ್ರಗಳ ಮೂಲಕ ಕೊರಗರನ್ನು ಪರಿಚಯಿಸಲಾಗಿದೆ. ಕೊರಗರನ್ನು ಪರಿಚಯಿಸುತ್ತಾ ಅವರ ಸಮಸ್ಯೆಗಳ ಬಗೆಗೆ ವಿಶ್ಲೇಷಿಸಲಾಗಿದೆ.

ಕರ್ನಾಟಕದ ಆದಿಮ ಬುಡಕಟ್ಟು ಕೊರಗರ ಬಗೆಗೆ ಅನೇಕ ಅಧ್ಯಯನಗಳು, ಬರಹಗಳು, ವರದಿಗಳು, ಸಂಪ್ರಬಂಧಗಳು ನಡೆದಿವೆ; ನಡೆಯುತ್ತಿವೆ. ಎಪ್ಪತ್ತರ ದಶಕದಿಂದಲೂ ಕೊರಗರ ಬಗೆಗಿನ ಪರಿಚಯಾತ್ಮಕವಾದ, ಸಂಶೋಧನಾತ್ಮಕವಾದ ಬರಹಗಳು ನಡೆದಿರುವುದನ್ನು ಗಮನಿಸಬಹುದಾಗಿದೆ. ಕುಂದಾಪುರ, ಉಡುಪಿ ಮತ್ತು ಕಾರ್ಕಳದ ಪದವಿ ಕಾಲೇಜುಗಳಲ್ಲಿ ಪದವಿ ವಿದ್ಯಾರ್ಥಿಗಳೂ ಕೂಡ ಈ ನಿಟ್ಟಿನಲ್ಲಿ ಕ್ಷೇತ್ರಕಾರ್ಯ ಮಾಡಿರುವುದು ಗಮನಾರ್ಹ. ವಿವಿಧ ಕಾಲಘಟ್ಟದಲ್ಲಿ ಕೊರಗರ ಬಗೆಗಿನ ಅಧ್ಯಯನ ಬರಹಗಳು ಇದ್ದರೂ ಜಾಗತೀಕರಣ, ಖಾಸಗೀಕರಣ ಮತ್ತು ಉದಾರೀಕರಣಗಳ ಸಂದಿಗ್ಧ ಸಂದರ್ಭದಲ್ಲಿ ಕೊರಗರಲ್ಲಿ ಉಂಟಾದ ಬದಲಾವಣೆಯನ್ನು ಗುರುತಿಸುವ ಕಾರ್ಯ ಪ್ರಸ್ತುತ ಅಧ್ಯಯನದ ಮೂಲಕ ಆಗಿದೆ ಎಂಬುದು ನನ್ನ ಭಾವನೆ. ತಂತ್ರಜ್ಞಾನದ ಯುಗವೆಂದೇ ಕರೆಯಲ್ಪಡುವ ಇಪ್ಪತ್ತೊಂದನೆಯ ಶತಮಾನದ ಈ ಸಂದರ್ಭದಲ್ಲಿ ಕೊರಗರು ಯಾವ ರೀತಿಯ ಬದಲಾವಣೆಗೆ ಒಳಗಾಗಿದ್ದಾರೆ. ಅವರ ಸಮಸ್ಯೆ–ಸವಾಲುಗಳೇನು ಎಂಬುದರ ಕುರಿತಂತೆ ಅಧ್ಯಯನ ಮಾಡಲಾಗಿದೆ.

**ಅಧ್ಯಯನ ಸ್ವರೂಪ**

ಸಾಮಾಜಿಕ ಬದಲಾವಣೆಯಲ್ಲಿ ಕೊರಗರು ಎಂಬ ಶೀರ್ಷಿಕೆಯ ಪ್ರಸ್ತುತ ಮಹಾಪ್ರಬಂಧವನ್ನು ಆರು ಅಧ್ಯಾಯಗಳನ್ನಾಗಿ ವಿಂಗಡಿಸಿಕೊಂಡು ಸಿದ್ಧಪಡಿಸಲಾಗಿದೆ. ಮೊದಲನೆ ಅಧ್ಯಾಯದಲ್ಲಿ ಪ್ರಸ್ತಾವನೆಯೊಂದಿಗೆ ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಅಧ್ಯಯನದ ವಿಧಾನವನ್ನು ನೀಡಲಾಗಿದೆ. ಕೊರಗರ ಬಗೆಗೆ ನಡೆದ ಅಧ್ಯಯನಗಳ ಸಮೀಕ್ಷೆ ಮತ್ತು ಅಧ್ಯಯನದ ಸ್ವರೂಪವನ್ನು ಮೊದಲನೇ ಅಧ್ಯಾಯದಲ್ಲಿ ನೀಡಲಾಗಿದೆ.

ಉಡುಪಿ ಹಾಗೂ ದಕ್ಷಿಣ ಕನ್ನಡ ಜಿಲ್ಲೆಯ ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ ಎಂಬ ಶೀರ್ಷಿಕೆಯ ಎರಡನೇ ಅಧ್ಯಾಯದಲ್ಲಿ ಉಡುಪಿ ಹಾಗೂ ದಕ್ಷಿಣ ಕನ್ನಡ ಜಿಲ್ಲೆಯನ್ನು ಪರಿಚಯಿಸಲಾಗಿದೆ. ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆಯನ್ನು ಸಂಕ್ಷಿಪ್ತವಾಗಿ ನೀಡಲಾಗಿದೆ. ಬುಡಕಟ್ಟು ಸಮುದಾಯವಾದ ಕೊರಗರನ್ನು ಪರಿಚಯಿಸುತ್ತಾ ಪದನಿಷ್ಪತ್ತಿ, ಭಾಷೆ ಮತ್ತು ಒಳಪಂಗಡಗಳ ಬಗೆಗಿನ ವಿವರಣೆ–ವಿಶ್ಲೇಷಣೆ ಈ ಅಧ್ಯಾಯದಲ್ಲಿದೆ.

ಅಧ್ಯಾಯ ಮೂರು ಕೊರಗರ ಸಾಮಾಜಿಕ ಸ್ಥಿತಿಗತಿ. ಈ ಅಧ್ಯಾಯದಲ್ಲಿ ಕೊರಗರ ಜೀವನಾವರ್ತನ ಮತ್ತು ವಾರ್ಷಿಕಾವರ್ತನ ಆಚರಣೆಗಳನ್ನು ವಿಶ್ಲೇಷಿಸಲಾಗಿದೆ. ಕೊರಗರ

ಆಹಾರ ಪದ್ಧತಿ, ಉಡುಗೆ ತೊಡುಗೆಗಳಲ್ಲಿ ಕಂಡುಬರುವ ಬದಲಾವಣೆಗಳನ್ನು ಅವಲೋಕಿಸಲಾಗಿದೆ. ಪ್ರಾಚೀನ ಕಾಲದಿಂದಲೂ ಕೊರಗರು ರೂಢಿಸಿಕೊಂಡು ಬಂದ ವೈದ್ಯಪದ್ಧತಿ ಮತ್ತು ತಾಂತ್ರಿಕ ಪದ್ಧತಿಗಳಲ್ಲಿ ಉಂಟಾದ ಬದಲಾವಣೆಗಳನ್ನು ಇಲ್ಲಿ ಚರ್ಚಿಸಲಾಗಿದೆ.

ಕೊರಗರು ಹಿಂದಿನಿಂದಲೂ ತಮ್ಮದೇ ಆದ ನ್ಯಾಯಪದ್ಧತಿಯನ್ನು ಅನುಸರಿಕೊಂಡು ಬರುತ್ತಿದ್ದರು. ಕಾಲ ಬದಲಾದಂತೆ ಅವರ ನ್ಯಾಯ ಪದ್ಧತಿಯಲ್ಲಿ ಉಂಟಾದ ಬದಲಾವಣೆ ಬಗ್ಗೆ ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ. ಅತೀಯಾದ ನಂಬಿಕೆಗಳನ್ನು ಹೊಂದಿರುವ ಕೊರಗರು ಇಂದಿನ ದಿನಮಾನಗಳಲ್ಲಿ ಯಾವ ಯಾವ ನಂಬಿಕೆಗಳನ್ನು ರೂಢಿಸಿಕೊಂಡಿದ್ದಾರೆ. ಯಾವ್ಯಾವ ನಂಬಿಕೆಗಳನ್ನು ಬಿಟ್ಟಿದ್ದಾರೆ ಎಂಬುದರ ಬಗೆಗೆ ಪ್ರಸ್ತುತ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಕೊರಗರ ಆರ್ಥಿಕ ಸ್ಥಿತಿಗತಿ ಎಂಬ ನಾಲ್ಕನೇ ಅಧ್ಯಾಯದಲ್ಲಿ ಕೊರಗರ ಕುಲಕಸುಬು, ಇತರೆ ಉದ್ಯೋಗ, ಕೃಷಿ ಮತ್ತು ಭೂಮಿಯ ಬಗೆಗೆ ವಿವರಿಸಲಾಗಿದೆ. ಆದಿಮ ಬುಡಕಟ್ಟುಗಳಲ್ಲಿ ಒಂದಾದ ಕೊರಗ ಬುಡಕಟ್ಟಿಗೆ ಸಂಬಂಧಿಸಿದ ಅನೇಕ ಯೋಜನೆ ಸವಲತ್ತುಗಳು ಯಾವ ರೀತಿಯಲ್ಲಿ ಕೊರಗರಲ್ಲಿ ಪರಿಣಾಮ ಬೀರಿವೆ ಎಂಬುದರ ವಿಶ್ಲೇಷಣೆಯನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

ಐದನೇ ಅಧ್ಯಾಯದಲ್ಲಿ ಕೊರಗ ಸಮುದಾಯದ ಸಮಸ್ಯೆಗಳನ್ನು ವಿವರಿಸಲಾಗಿದೆ. ದಿನದಿಂದ ದಿನಕ್ಕೆ ಬದಲಾವಣೆಯನ್ನು ಕಾಣುವ ಇಂದಿನ ಸಮಾಜದಲ್ಲಿ ಕೊರಗರ ಬದಲಾವಣೆ ಯಾವ ರೀತಿಯಲ್ಲಿದೆ ಎಂಬುದನ್ನು ಇಲ್ಲಿ ವಿವರಿಸಲಾಗಿದೆ. ನಿರುದ್ಯೋಗ, ಭಾಷೆ, ಸಂಘಟನೆ, ಆರೋಗ್ಯ, ಶಿಕ್ಷಣ, ಸರ್ಕಾರದ ಸೌಲಭ್ಯಗಳು ಹೀಗೆ ಎಲ್ಲಾ ಕ್ಷೇತ್ರಗಳಲ್ಲಿ ಕೊರಗರು ಅನುಭವಿಸುತ್ತಿರುವ, ಅವರನ್ನು ಕಾಡುತ್ತಿರುವ ಸಮಸ್ಯೆಗಳ ಬಗೆಗೆ ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

ಕೊನೆಯ ಅಧ್ಯಾಯ ಸಮಾರೋಪ. ಅಧ್ಯಯನದ ಒಟ್ಟು ಫಲಿತಗಳನ್ನು ಇಲ್ಲಿ ನೀಡಲಾಗಿದೆ. ಅನುಬಂಧದಲ್ಲಿ ಪರಾಮರ್ಶನ ಗ್ರಂಥಗಳನ್ನು, ವಕ್ತೃಮಾಹಿತಿ ವಿವರ, ಕೋಷ್ಟಕಗಳನ್ನು ಮತ್ತು ಛಾಯಾಚಿತ್ರಗಳನ್ನು ನೀಡಲಾಗಿದೆ. ಒಟ್ಟಾರೆಯಾಗಿ ಬಹುತೇಕ ಬುಡಕಟ್ಟು ಸಮುದಾಯಗಳು ಬದಲಾವಣೆಯ ಹಂತದಲ್ಲಿವೆ. ಈ ಬದಲಾವಣೆಯ ಪರ್ವದಲ್ಲಿ ಕೊರಗರನ್ನು ಪ್ರಸ್ತುತ ಅಧ್ಯಯನದ ಮೂಲಕ ಕಾಣಲಾಗಿದೆ. ಅಸ್ಪೃಶ್ಯತೆ, ಅಜಲು, ಇನ್ನಿತರ ಅನಿಷ್ಟ ಪದ್ಧತಿಗಳ ಮಧ್ಯೆ ಕೊರಗರು ಯಾವ ರೀತಿಯಲ್ಲಿ ಅಭಿವೃದ್ಧಿ ಹೊಂದುತ್ತಿದ್ದಾರೆ ಎಂಬುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

**ಅಡಿಟಿಪ್ಪಣಿಗಳು**

೧. ಡಾ. ಎಸ್.ಆರ್. ನಾಯಕ, ಕರಾವಳಿ ಸೋಗುಗಳ ಬಹುರೂಪ, ೨೦೦೩, ಪು. ೨೯

೨. ಡಾ. ಎಚ್.ಎಂ. ಮಹೇಶ್ವರಯ್ಯ, ಮಹಾರಾಷ್ಟ್ರದ ಬುಡಕಟ್ಟುಗಳು, ಪು. ೧೨೬

೩. ಎಂ. ಭೈರೇಗೌಡ, ಇರುಳಿಗರ ಜಾನಪದ ಅಧ್ಯಯನ, ೨೦೦೦, ಪು. ೪

೪. ಪುರುಷೋತ್ತಮ ಬಿಳಿಮಲೆ, ಕೊರಗರ ಸಂಸ್ಕೃತಿ, ೧೯೯೩, ಪು. ೨

೫. Internation Encyclopedia of Social Sciences Vol-16, P. 10

೬. Demographic Status of Scheduled Tribes Population of India, (ಅಂತರ್ಜಾಲ)

೭. ಅದೇ, (ಅಂತರ್ಜಾಲ)

೮. ಪರಿಶಿಷ್ಟ ಪಂಗಡಗಳ ಕಲ್ಯಾಣ ನಿರ್ದೇಶನಾಲಯ, ಬೆಂಗಳೂರು.

ಅಧ್ಯಾಯ ಎರಡು

# ಉಡುಪಿ ಹಾಗೂ ದಕ್ಷಿಣ ಕನ್ನಡ ಜಿಲ್ಲೆಯ ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ

ಅಧ್ಯಾಯ ಎರಡು

# ಉಡುಪಿ ಹಾಗೂ ದಕ್ಷಿಣ ಕನ್ನಡ ಜಿಲ್ಲೆಯ ಭೌಗೋಳಿಕ ಹಾಗೂ ಚಾರಿತ್ರಿಕ ಹಿನ್ನೆಲೆ

## ಭೌಗೋಳಿಕ ನೆಲೆ

ಕರ್ನಾಟಕ ರಾಜ್ಯದಲ್ಲಿ ಭಾಷಿಕವಾಗಿ ಗುರುತಿಸುವ ಮೂರು ಜಿಲ್ಲೆಗಳನ್ನು ಕಾಣಬಹುದು. ಉಡುಪಿ, ದಕ್ಷಿಣ ಕನ್ನಡ ಜಿಲ್ಲೆಗಳ ಭಾಷೆ ತುಳು, ಕೊಡಗು ಜಿಲ್ಲೆ ಜನರ ಭಾಷೆ ಕೊಡವ, ಕರ್ನಾಟಕದ ಕರಾವಳಿಯ ಬಹುತೇಕ ಭೂಭಾಗಗಳನ್ನು ಹೊಂದಿರುವ ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳು ಆಡಳಿತಾತ್ಮಕವಾಗಿ ಬೇರೆ ಬೇರೆಯಾದರೂ ಅನನ್ಯತೆಯ ದೃಷ್ಟಿಯಲ್ಲಿ ಇದನ್ನು ತುಳುನಾಡು ಎಂದು ಕರೆಯುವುದೇ ಸೂಕ್ತ. ಕರಾವಳಿಯ ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳ ಭೂಭಾಗವು ಪಶ್ಚಿಮ ಘಟ್ಟದ ಪೂರ್ವ ಭಾಗದಲ್ಲಿನ ಕರ್ನಾಟಕದ ಪ್ರದೇಶಗಳಿಗಿಂತ ಭಿನ್ನವಾಗಿದೆ. ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಮತ್ತು ಭೌಗೋಳಿಕವಾಗಿಯೂ ಕರಾವಳಿ ಪ್ರದೇಶ ಸಮೀಪದ ಕೇರಳ ರಾಜ್ಯವನ್ನು ಹೆಚ್ಚು ಹೋಲುತ್ತದೆ.

ಉಡುಪಿ ಮತ್ತು ದಕ್ಷಿಣ ಕನ್ನಡ ಎಂಬ ಜಿಲ್ಲಾ ಹೆಸರುಗಳು ಇತ್ತೀಚಿನವು. ಈ ಪ್ರದೇಶದಲ್ಲಿ ವಾಸಿಸುತ್ತಿದ್ದ ಜನಾಂಗದ ಆಧಾರದಲ್ಲಿ ತುರುನಾಡು, ತುಳುನಾಡು ಮತ್ತು ಪೌರಾಣಿಕ ಮೂಲದ ಪರಶುರಾಮ ಕ್ಷೇತ್ರ, ತುಳುವ, ತೌಳವ ಇತ್ಯಾದಿ ಹೆಸರುಗಳಿಂದಲೂ ಗುರುತಿಸಲಾಗುತ್ತಿತ್ತು. ಇತ್ತೀಚಿನ ಸರ್ಕಾರ ಸುಗಮ ಆಡಳಿತದ ದೃಷ್ಟಿಯಿಂದ ದಕ್ಷಿಣ

ನಕ್ಷೆ: ೧

## ಕರ್ನಾಟಕ ರಾಜ್ಯದ ಜಿಲ್ಲೆಗಳು

### ಸಮೀಕ್ಷೆಗೊಳಪಟ್ಟ ಅಧ್ಯಯನದ ಕ್ಷೇತ್ರಗಳು

ಬೀದರ
ಗುಲಬರ್ಗಾ
ಬಿಜಾಪುರ
ಯಾದಗಿರಿ
ಬಾಗಲಕೋಟೆ
ರಾಯಚೂರು
ಬೆಳಗಾವಿ
ಕೊಪ್ಪಳ
ಗದಗ
ಧಾರವಾಡ
ಬಳ್ಳಾರಿ
ಉತ್ತರ ಕನ್ನಡ
ಹಾವೇರಿ
ದಾವಣಗೆರೆ
ಚಿತ್ರದುರ್ಗ
ಶಿವಮೊಗ್ಗ
ಚಿಕ್ಕಬಳ್ಳಾಪುರ
ಉಡುಪಿ
ಚಿಕ್ಕಮಗಳೂರು
ತುಮಕೂರು
ಬೆಂಗಳೂರು ಗ್ರಾಮಾಂತರ
ಕೋಲಾರ
ಹಾಸನ
ಬೆಂಗಳೂರು ನಗರ
ದಕ್ಷಿಣಕನ್ನಡ
ಮಂಡ್ಯ
ರಾಮನಗರ
ಕೊಡಗು
ಮೈಸೂರು
ಚಾಮರಾಜನಗರ

ನಕ್ಷೆ:೨. ಉಡುಪಿ ಜಿಲ್ಲೆಯ ತಾಲ್ಲೂಕುಗಳು

ಸಮೀಕ್ಷೆಗೊಳಪಟ್ಟ ಅಧ್ಯಯನದ ಕ್ಷೇತ್ರಗಳಾಗಿವೆ



ನಕ್ಷೆ:೩. ದಕ್ಷಿಣ ಕನ್ನಡ ಜಿಲ್ಲೆಯ ತಾಲ್ಲೂಕುಗಳು

ಸಮೀಕ್ಷೆಗೊಳಪಟ್ಟ ಅಧ್ಯಯನದ ಕ್ಷೇತ್ರಗಳಾಗಿವೆ



ಕನ್ನಡ ಜಿಲ್ಲೆಯನ್ನು ಉಡುಪಿ ಮತ್ತು ದಕ್ಷಿಣ ಕನ್ನಡ ಎಂದು ಎರಡು ಜಿಲ್ಲೆಗಳನ್ನಾಗಿ ೧೯೯೭ರಲ್ಲಿ ವಿಭಜಿಸಿತು. ಉಡುಪಿ, ಕುಂದಾಪುರ ಮತ್ತು ಕಾರ್ಕಳ ತಾಲೂಕುಗಳನ್ನು ಉಡುಪಿ ಜಿಲ್ಲೆ ಒಳಗೊಂಡಿದೆ. ದಕ್ಷಿಣ ಕನ್ನಡ ಜಿಲ್ಲಾ ವ್ಯಾಪ್ತಿಯಲ್ಲಿ ಮಂಗಳೂರು, ಬಂಟ್ವಾಳ, ಬೆಳ್ತಂಗಡಿ, ಪುತ್ತೂರು ಮತ್ತು ಸುಳ್ಯ ತಾಲೂಕುಗಳು ಸೇರಿವೆ.

### ೨.೨. ಕೊರಗ ಬುಡಕಟ್ಟು

ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಯಲ್ಲಿ ಕೊರಗರನ್ನು ಪರಿಶಿಷ್ಟ ಪಂಗಡದಲ್ಲಿ ಗುರುತಿಸಲಾಗಿದೆ. ಈ ಅವಿಭಜಿತ ಜಿಲ್ಲೆಯಲ್ಲಿ ಕೊರಗರಲ್ಲದೇ ಮಲೆಕುಡಿಯ ಮತ್ತು ಮರಾಠಿಗರನ್ನು ಬುಡಕಟ್ಟು ಸಮುದಾಯದವರೆಂದು ಗುರುತಿಸಲಾಗಿದೆ. ಕೊರಗರನ್ನು Primitive Tribe(ಆದಿಮ ಬುಡಕಟ್ಟು) ಎಂದು ವಿಂಗಡಿಸಲಾಗಿದೆ. ಅಂದರೆ ಕೊರಗರು ಈ ಪ್ರದೇಶದ ಮೂಲನಿವಾಸಿಗಳು; ಇತರೆ ಜಾತಿ, ಪಂಗಡ, ಬುಡಕಟ್ಟುಗಳೆಲ್ಲ ಈ ಪ್ರದೇಶಕ್ಕೆ ವಲಸೆ ಬಂದಿದ್ದಾರೆ ಎಂಬುದು ತಜ್ಞರ ಅಭಿಮತ.

ಭಾರತೀಯ ಸಮಾಜ ತುಂಬಾ ಸಂಕೀರ್ಣತೆಯಿಂದ ಕೂಡಿದ ಸಮಾಜವೆಂದು ಜಗತ್ತಿನಲ್ಲಿಯೇ ಜನಜನಿತವಾದುದು. ಕಾರಣ ಭಾರತೀಯ ಸಮಾಜದಲ್ಲಿ ಜಾತಿ, ವರ್ಣ, ಧರ್ಮ, ವ್ಯವಸ್ಥೆ, ಸಂಪ್ರದಾಯ ಪರಂಪರೆಗಳಿಂದ ಸಂಕೀರ್ಣತೆಯನ್ನು ಪಡೆದುದಾಗಿದೆ. ಪ್ರಾದೇಶಿಕ ಭಿನ್ನತೆ ಸಹಜವೆಂಬಂತೆ ಭಾರತದಲ್ಲಿ ಜಾತಿ ವ್ಯವಸ್ಥೆ ಅತ್ಯಂತ ಕಠಿಣತಮ ವ್ಯವಸ್ಥೆಯಾಗಿ ಕಂಡುಬರುತ್ತದೆ. ಅದರಿಂದ ಸುಲಭವಾಗಿ ಹೊರಬರಲು ಕಷ್ಟಸಾಧ್ಯ. ಆಂಗ್ಲರ ಆಗಮನದಿಂದ ಭಾರತದಲ್ಲಿ ನೂರಾರು ವಿಭಿನ್ನ ಬುಡಕಟ್ಟುಗಳು ಸೇರಿದಂತೆ ಸಾವಿರಾರು ಜಾತಿಗಳಿಂದ ಕೂಡಿದ ಸಮಾಜವಿದೆಯೆಂಬುದು ಜಗತ್ತಿಗೆ ತಿಳಿಯಿತು. ಆದಿಮ ಬುಡಕಟ್ಟು ಎಂದು ಕರೆಯಲ್ಪಟ್ಟಿರುವ ಕೊರಗರು ಈ ಪ್ರದೇಶದ ಇತರೆ ಬುಡಕಟ್ಟು ಸಮುದಾಯಗಳಿಗಿಂತ ಭಿನ್ನರಾಗಿ ಕಂಡುಬರುತ್ತಾರೆ. ಪಿ. ಕಮಲಾಕ್ಷ ಅವರು ಕೊರಗರ ಬಗೆಗೆ ಈ ರೀತಿ ಅಭಿಪ್ರಾಯಪಡುತ್ತಾರೆ. ನಮ್ಮ ಜಿಲ್ಲೆಯಲ್ಲಿ(ಅವಿಭಜಿತ ದಕ್ಷಿಣ ಕನ್ನಡ) ಹರಿಜನ ವ ಗಿರಿಜನ ವರ್ಗದವರಲ್ಲಿ ಇವರಷ್ಟು ಕೀಳುಮಟ್ಟದಲ್ಲಿ ಹಾಗೂ ಅತ್ಯಂತ ಕಡುಬಡತನದಿಂದ ಅವಿದ್ಯಾವಂತರಾಗಿ ಪಶುಗಳಂತೆ ಜೀವನ ಮಾಡುವ ಪಂಗಡ ಬೇರೊಂದಿಲ್ಲ. (ಪು. ೩೦, ೧೯೯೪) ಅವಿದ್ಯಾವಂತರರು, ಕಡುಬಡವರು ಕೊರಗರು ಸರಿ! ಆದರೆ ಕೀಳುಮಟ್ಟ, ಪಶುಗಳಂತೆ ಜೀವಿಸುತ್ತಿದ್ದಾರೆ ಎಂಬುದನ್ನು ನಾವು ಗಮನಿಸಬೇಕು. ಕಾರಣ ಜಗತ್ತಿನ ಪ್ರತಿಯೊಂದು ಸಮುದಾಯಕ್ಕೂ ತನ್ನದೇ ಆದ

ಕಟ್ಟುಕಟ್ಟಳೆ, ರೀತಿ-ರಿವಾಜು, ಸಂಪ್ರದಾಯಗಳಿರುತ್ತವೆ. ಅವುಗಳನ್ನು ಮೇಲು-ಕೀಳು, ಪಶು-ಪಕ್ಷಿ ಎಂಬಂತೆ ವ್ಯಾಖ್ಯಾನಿಸುವುದರಲ್ಲಿ ಎಡವುತ್ತಿದ್ದೇವೆ ಎಂದೆನಿಸಿದರೂ ತಪ್ಪಾಗಲಾರದು.

ಭಾರತ ಅಲ್ಲದೇ ಜಗತ್ತಿನ ಬಹುತೇಕ ಬುಡಕಟ್ಟು ಸಮುದಾಯಗಳ ನೆಲೆ ದಟ್ಟಾರಣ್ಯ ಅಥವಾ ಕಾಡಿನ ಅಂಚು. ಬಹುತೇಕ ಜೀವಿಗಳ ನೆಲೆ ಕಾಡು, ಹಾಗಾಗಿ ಸಹಜವೆಂಬಂತೆ ಆಧುನಿಕ ಮಾನವ ಕೂಡ ಕಾಡುಗಳಲ್ಲೇ ವಾಸಿಸುತ್ತಾ ಬೆಳವಣಿಗೆಯ ಹಂತಕ್ಕೇರಿರುವುದು ಇತಿಹಾಸದಿಂದ ತಿಳಿಯಬಹುದಾಗಿದೆ. ಕೊರಗರು ದಕ್ಷಿಣ ಕನ್ನಡ, ಉಡುಪಿ ಮತ್ತು ಕೇರಳ ರಾಜ್ಯದ ಕಾಸರಗೋಡು ಪ್ರದೇಶಗಳ ಕಾಡುಗಳಲ್ಲಿ ಜೀವಿಸುತ್ತಾ ಬಂದಿದ್ದಾರೆ. ಈಗಲೂ ಅಳಿದುಳಿದ ಕಾಡಿನಂಚಿನಲ್ಲಿ ಮತ್ತು ಇತರೆ ಪ್ರವೇಶಗಳಲ್ಲಿ ಕೊರಗರು ವಾಸಿಸುತ್ತಿದ್ದಾರೆ. ಜಗತ್ತಿನ ಅತ್ಯಂತ ಕ್ರೂರ ಜೀವಿಯೆಂದರೆ ಮಾನವ. ತನ್ನ ಸ್ವಾರ್ಥಕ್ಕೋಸ್ಕರ ಇಡೀ ಜಗತ್ತನ್ನೇ, ಜಗತ್ತಿನ ಸಕಲ ಸಂಪತ್ತನ್ನೇ ನಾಶ ಮಾಡುತ್ತಿರುವ ಮಾನವ ತನ್ನಲ್ಲೇ ಒಂದು ಪಂಗಡವಾಗಿರುವ ಬುಡಕಟ್ಟು ಸಮುದಾಯವನ್ನು ಜೀವಿಸಲು ಬಿಡುತ್ತಿಲ್ಲ ಎಂಬುದೇ ವಿಪರ್ಯಾಸ. ಈ ಮಾತು ಯಾಕೆ ಪ್ರಸ್ತಾಪಿಸುತ್ತಿದ್ದೇನೆಂದರೆ ಸ್ವಾರ್ಥ ಮನೋಭಾವವಿಲ್ಲದೇ ಸರಳವಾಗಿ ಜೀವಿಸುವ ಬುಡಕಟ್ಟು ಸಮುದಾಯಗಳನ್ನು, ಅವುಗಳ ನೆಲೆಗಳನ್ನು ಇತರೆ ಬುದ್ಧಿವಂತರೆನಿಸಿಕೊಂಡ ಮಾನವರು ನಾಶಪಡಿಸುತ್ತಿದ್ದಾರೆ. ಮತ್ತೊಂದೆಡೆ ಅವರು(ಬುಡಕಟ್ಟುಗಳು) ಅನಾಗರಿಕರು, ಕೀಳುಮಟ್ಟದ ಜೀವನ ನಡೆಸುತ್ತಿದ್ದಾರೆ ಎಂದು ವ್ಯಾಖ್ಯಾನಿಸುತ್ತಿರುವುದು. Suivival of the fittest ಎಂಬ ಸಿದ್ಧಾಂತದಂತೆ ತನ್ನ ಬದುಕನ್ನು ಮೊದಲು ಗಮನಿಸುವ ಜೀವಿ ಇತರೆ ಜೀವಿಗಳನ್ನು ಹಿಮ್ಮೆಟ್ಟಿಸುವುದು ನಿಜವಾದರೂ ಮಾನವ ಜೀವಿ ಎಲ್ಲಾ ರೀತಿಯಲ್ಲೂ ಜಗತ್ತಿನ ವಿನಾಶದ ಅಂಚನ್ನು ತಲುಪಿರುವುದು ಖೇದಕರ ಸಂಗತಿ.

ಕೊರಗರು ಕಾಡನ್ನೇ ನಂಬಿಕೊಂಡು ಜೀವನ ನಡೆಸುತ್ತಾ ಬಂದವರು. ಕಾಡಿನಲ್ಲಿ ಯಥೇಚ್ಚವಾಗಿ ದೊರೆಯುವ ವಿವಿಧ ರೀತಿಯ ಬಳ್ಳಿಗಳಿಂದ ಬುಟ್ಟಿ ಹೆಣೆದು ಮಾರಾಟ ಮಾಡಿ ಜೀವಿಸುತ್ತಾ ಬಂದಿದ್ದಾರೆ. 'ಅಭಿವೃದ್ಧಿಯ ಮಂತ್ರ' ಮತ್ತು ಉಳ್ಳವರ ಸ್ವಾರ್ಥದಿಂದ ಕಾಡುಗಳೆಲ್ಲ ನಾಶವಾದಾಗ ಸಹಜವಾಗಿ ಕೊರಗರು ತಮ್ಮ ನೆಲೆಯಾದ ಸಮೃದ್ಧ ಕಾಡನ್ನು ಕಳೆದುಕೊಳ್ಳುವಂತಾಯಿತು. ನೂರಾರು ವರ್ಷಗಳ ಕಾಲ ಗುಲಾಮರಂತೆ ಉಳ್ಳವರ ಮನೆ, ತೋಟಗಳಲ್ಲಿ ಜೀತದಾಳುಗಳಾಗಿ ಜೀವನ ಸವೆಸಿದ್ದಾರೆ ಕೊರಗರು. ಇವರನ್ನು ಜೀತದಾಳುಗಳನ್ನಾಗಿ ದುಡಿಸಿಕೊಂಡಿದ್ದಾರೆ ಈ ಪ್ರದೇಶದ ಉಳ್ಳವರು. ಕೊರಗರ

ಅಮಾಯಕತನವನ್ನು ಬೇಕಾದ ರೀತಿಯಲ್ಲಿ ಬಳಸಿಕೊಂಡಿದ್ದಾರೆ ಧಣಿಗಳೆಂದು ಕರೆಯಲ್ಪಟ್ಟವರು. ಈ ಎಲ್ಲ ಸ್ಥಿತ್ಯಂತರಗಳಲ್ಲಿ ಕೊರಗರ ಜನಸಂಖ್ಯೆ ಕ್ಷೀಣಿಸಲ್ಪಟ್ಟಿತು. ವಾಸಸ್ಥಳಗಳೆಲ್ಲ ನಾಡುಗಳಾದವು. ಇತರೆ ಸಮುದಾಯಗಳ ಸಂಪರ್ಕವನ್ನು ಬೆಳೆಸಿದರು. ತಮ್ಮದೇ ಆದ ಭಾಷೆಯನ್ನು ಮರೆತರು.

ಕೊರಗರ ಮೂಲದ ಬಗೆಗೆ ನಿಖರವಾದ ದಾಖಲೆಗಳು ಇಲ್ಲದಿದ್ದರೂ ಐತಿಹ್ಯಗಳಿವೆ. ಸಂಗ್ರಹಿಸಿದ ಐತಿಹ್ಯಗಳ ಬಗೆಗೆ ವಿದ್ವಾಂಸರು ತಮ್ಮದೇ ವ್ಯಾಖ್ಯಾನಗಳನ್ನು ನೀಡಿದ್ದಾರೆ.

ಐತಿಹ್ಯವೊದರ ಪ್ರಕಾರ "ಪ್ರಪಂಚದಲ್ಲಿ ಭೂಮಿ ಎನ್ನುವುದೇ ಇರಲಿಲ್ಲ. ಎಲ್ಲವೂ ನೀರಿನಿಂದ ತುಂಬಿಹೋಗಿತ್ತು. ಆ ನೀರಿನಲ್ಲಿ ಗಂಡು-ಹೆಣ್ಣು ಎನ್ನುವ ಎರಡು ಜೀವಿಗಳು ಹುಟ್ಟಿದವು. ಈ ಎರಡು ಜೀವಗಳೇ ಅಣ್ಣ-ತಂಗಿ(ಪಗೆ-ಪಂಗಡಿ) ಇವರು ನೀರಿನಲ್ಲಿರುವಾಗ ನಾರಾಯಣ ದೇವರು ಮಾಯೆಯ ಸೃಷ್ಟಿಯಿಂದ ಡೋಲಿನ 'ಬಿಸಳೆ'(ಡೋಲುದ ಕರ)ಯನ್ನು ನೀರಿನಲ್ಲಿ ತೇಲಿಬಿಟ್ಟರು. ಅವರು ಅದರೊಳಗೆ ಕುಳಿತು ರಕ್ಷೆಯನ್ನು ಪಡೆದರು. ನಾರಾಯಣ ದೇವರು ಬಂದು ನಿಮಗೆ ಏನಾದರೂ ಬೇಕೆ? ಎಂದು ಕೇಳಿದನಂತೆ. ಆಗ ಅವರು ನಮಗೇನೂ ಬೇಡವೆಂದು ಹೇಳಿದ್ದರಿಂದ ಮರಳಿ ಹೋದ. ಜೀವ ತಡೆಯಲಾಗದೆ ನಾರಾಯಣ ದೇವರು ಪುನಃ ಬಂದು ಕೇಳಿದಾಗಲೂ ಅವರಿಂದ ಅದೇ ರೀತಿ ಉತ್ತರ ದೊರೆಯಿತು. ಮೂರನೆ ಬಾರಿ ಬಂದಾಗ ನಿಮಗೆ ಪ್ರಪಂಚ ಅನ್ನುವುದು ಬೇಡವೇ? ಪ್ರಪಂಚದಲ್ಲಿ ಇತರ ಜೀವಿಗಳೂ ಇರಬೇಕು ಎಂಬ ಬಯಕೆ ನಿಮಗಿಲ್ಲವೆ? ನಿಮಗೆ ಈ ನೀರಿನಲ್ಲಿ ಡೋಲಿನ ಇಷ್ಟೇ ಸ್ಥಳದಲ್ಲಿ ಇರಲು ಬೇಸರ ವಾಗುವುದಿಲ್ಲವೆ? ಹೀಗೆ ಪ್ರಶ್ನೆಗಳನ್ನು ಕೇಳಿ ಪರಸ್ಪರ ಒಬ್ಬರಿನ್ನೊಬ್ಬರಲ್ಲಿ ಆಸೆ ಹುಟ್ಟಿಸಿದ. ಆಗ ಆ ಅಣ್ಣ ತಂಗಿಯರಿಬ್ಬರೂ ಕೂಡಿದರು. ಆಗ ಭೂಮಿ ಹುಟ್ಟಿತು. ಅವರ ಆಸೆಗೆ ತಕ್ಕಂತೆ ಎಲ್ಲವೂ ನಿರ್ಮಾಣವಾಗುತ್ತಾ ಹೋಯಿತು. ಅಣ್ಣ ತಂಗಿಯರ ಸಂತಾನ ಬೆಳೆಯುತ್ತಾ ಹೋಯಿತು. ಈ ಸಂತಾನ ಬೆಳೆದಂತೆ ಮನೆತುಂಬಿ ಹೋಯಿತು. ಹೊಟ್ಟೆಪಾಡಿಗಾಗಿ ಅವರ ಮಕ್ಕಳೆಲ್ಲ ಬೇರೆ ಬೇರೆ ವೃತ್ತಿಯನ್ನು ಅವಲಂಬಿಸಿದರು. ಅದೇ ವೃತ್ತಿಗಳೇ ಮುಂದೆ ಜಾತಿಗಳಾದವು. ಅದರಲ್ಲಿ ಬ್ರಾಹ್ಮಣ, ಶೆಟ್ಟಿ, ಮೊಯ್ಲಿ, ಬಿಲ್ಲವ ಇವರೆಲ್ಲರೂ ಇದ್ದರು. ಅಕ್ಕನ ಸಂತಾನದ ಮಕ್ಕಳಾದ ಇವರು ಬೆಳೆದು ಶ್ರೀಮಂತರಾದರು ಮತ್ತು ಬುದ್ಧಿವಂತರಾದರು. ಆದರೆ ತಂಗಿಯ ಸಂತಾನದವರು ಹಾಗೆ ಆಗಲಿಲ್ಲ! ಏಕೆಂದರೆ ತಂಗಿ ಅಣ್ಣನನ್ನು ವರಿಸಿದ್ದರಿಂದ ಅವರಿಗೆ ಶಾಪವಿತ್ತು. ಆ ಕಾರಣಕ್ಕಾಗಿ

ಅವರಿಗೆ ಬೆಳೆಯಲಾಗಲಿಲ್ಲ. ತಂಗಿ ಈ ಶಾಪದಿಂದ ಮುಕ್ತಿಯನ್ನು ಪಡೆಯಬೇಕಾದರೆ ಆಕೆ ತನ್ನ ಎಲ್ಲ ಮಕ್ಕಳ ಮನೆಯಲ್ಲಿ ಎಂಜಲು ಅನ್ನವನ್ನು ತಿನ್ನಬೇಕು ಎಂದು ನಾರಾಯಣ ದೇವರು ಹೇಳಿದರಂತೆ. ಆ ಕಾರಣಕ್ಕಾಗಿ ತಂಗಿಯ ಸಂತಾನದವರು ಎಂಜಲು ಅನ್ನವನ್ನು ತಿನ್ನುತ್ತಾರೆ(ಪು.೨೭-೨೮, ೧೯೯೩).

ಈ ಐತಿಹ್ಯವನ್ನು ವಿಶ್ಲೇಷಿಸಿದ ಪುರುಷೋತ್ತಮ ಬಿಳಿಮಲೆ ಅವರು ಕೊರಗರ ಮಾನವೀಯತೆ ಗುಣವನ್ನು ಮತ್ತು ಖಾಸಗೀ ಆಸ್ತಿಯ ಪರಿಕಲ್ಪನೆಗಳಿಲ್ಲದಿರುವುದನ್ನು ವಿವರಿಸುತ್ತದೆ. ಸವರ್ಣೀಯ ಸಮಾಜವು ಕೊರಗರನ್ನು ಅತ್ಯಂತ ಕನಿಷ್ಠರೆಂದು ದೂರವಿಟ್ಟರೆ ಕೊರಗರು ಸವರ್ಣೀಯರನ್ನು ತಮ್ಮ ಅಕ್ಕನ ಮಕ್ಕಳೆಂದು ತಮ್ಮ ಮಾನವೀಯತೆಯನ್ನು ಮೆರೆದಿದ್ದಾರೆ.(ಪು. ೩೧, ೧೯೯೩) ಮುಂದುವರೆದು ವಾಸ್ತವವಾಗಿ ಕೊರಗರಲ್ಲಿ ಖಾಸಗೀ ಆಸ್ತಿಯ ಪರಿಕಲ್ಪನೆಯಿಲ್ಲ. ಇಂದಿಗೂ ಖಾಸಗೀ ಆಸ್ತಿಯನ್ನು ಹೊಂದುವುದಕ್ಕೆ ಕೊರಗರು ವಿರೋಧಿಗಳೇ ಆಗಿದ್ದಾರೆ.(ಪು.೩೧-೩೨, ೧೯೯೩) ಎಂದು ಬಿಳಿಮಲೆ ಕೊರಗರ ಮೂಲದ ಬಗೆಗಿನ ಐತಿಹ್ಯವನ್ನು ವಿಶ್ಲೇಷಿಸಿದ್ದಾರೆ.

ಇನ್ನೊಂದು ಐತಿಹ್ಯದ ಪ್ರಕಾರ ಹುಬಾಷಿಕ ಕೊರಗರ ಅರಸ, ಮಹಾ ಶೂರ, ವೀರ. ಕೊರಗ ವೀರರ ಸೈನ್ಯವನ್ನು ಅವನು ಸಿದ್ಧಪಡಿಸಿದನು. ಸ್ವತಃ ಕೊರಗನಾದ ಹುಭಾಷಿಕನು ಜೈನನಾದ ಅಂಗಾರವರ್ಮನೊಂದಿಗೆ ಹೆಣ್ಣು ಕೇಳಲು ಹೋದ. ಹುಬಾಷಿಕನನ್ನು ಯುದ್ಧದಲ್ಲಿ ಸೋಲಿಸಲು ಸಾಧ್ಯವಾಗದ ಅಂಗಾರವರ್ಮನು ಅವನನ್ನು ಸೋಲಿಸಲು ಒಂದು ಉಪಾಯ ಹೂಡಿದ. ಅಂಗಳ ತುಂಬಾ ನೆಲ್ಲಿಕಾಯಿ ಹಾಸಿದ ನೆಲ್ಲಿಕಾಯಿ ಮೇಲೆ ಚಾಪೆ ಹಾಸಿದ. ಕೊರಗ ವೀರರು ಬಂದು ಚಾಪೆಯ ಮೇಲೆ ಕುಳಿತುಕೊಳ್ಳುತ್ತಲೇ ಉರುಳಿ ಬಿದ್ದರು. ಉರುಳಿ ಬಿದ್ದವರನ್ನು ಅಂಗಾರವರ್ಮನ ಕಡೆಯವರು ತುಂಡರಿಸಿ ಚೆಲ್ಲಿದರು(ಪು. ೩೧-೩೨, ೧೯೯೩).

ಹುಬಾಷಿಕ ರಾಜನಿಗೆ ಸಂಬಂಧಿಸಿದಂತೆ ಅಲ್ಪಸ್ವಲ್ಪ ವ್ಯತ್ಯಾಸಗಳನ್ನೊಳಗೊಂಡ ನಾಲ್ಕೈದು ಐತಿಹ್ಯಗಳು ಕಂಡುಬರುತ್ತವೆ. ಈ ಐತಿಹ್ಯಗಳನ್ನು ವಿಶ್ಲೇಷಿಸಿದ ಪುರುಷೋತ್ತಮ ಬಿಳಿಮಲೆ "ಹುಬಾಷಿಕ ಚಾರಿತ್ರಿಕ ಅಸ್ತಿತ್ವದ ಬಗೆಗೆ ನಿರ್ಣಾಯಕ ಮಾತುಗಳನ್ನಾಡುವುದು ಕಷ್ಟ. ಜೊತೆಗೆ ಖಾಸಗೀ ಆಸ್ತಿಯ ಬಗೆಗೆ ನಂಬಿಕೆಯೇ ಇಲ್ಲದ ಕೊರಗರು ರಾಜ್ಯವಾಳಿದರು ಎಂಬ ಮಾತನ್ನು ಗಟ್ಟಿಗೊಳಿಸುವುದಿಲ್ಲ. ಸಾಮಾನ್ಯವಾಗಿ ಅರಸೊತ್ತಿಗೆಯ ಚಾರಿತ್ರಿಕ ಘಟ್ಟಗಳನ್ನು ಹಾದುಬಂದ ಜನಾಂಗದ ನೆನಪುಗಳು ಇಂತಹ ಐತಿಹ್ಯಗಳನ್ನು ಕಟ್ಟಿ

ನೆನಪುಗಳನ್ನು ಗಟ್ಟಿಗೊಳಿಸಿಕೊಳ್ಳುತ್ತದೆ. 'ಹುಬಸ' ಎಂಬುದಕ್ಕೆ ಕೊರಗರ ಭಾಷೆಯಲ್ಲಿ 'ದೊಡ್ಡ ರೋಗ' ಎಂಬ ಅರ್ಥವೂ ಇದೆ" ಎಂದಿದ್ದಾರೆ.

"ಕೊರಗರ ಇಂದಿನ ಯುವ ಪೀಳಿಗೆಗೆ ಹುಭಾಷಿಕ ತಮ್ಮ ನಾಯಕ, ರಾಜ ಎಂಬ ಅಭಿಪ್ರಾಯ, ಹೆಮ್ಮೆ ಇದೆ. ಚಾರಿತ್ರಿಕವಾದ ನಿಖರ ನೆಲೆಗಟ್ಟನ್ನು ಪಡೆಯದಿದ್ದರೂ ಹುಬಾಷಿಕ ನಮ್ಮ ರಾಜ ಎಂದೇ ನೆನಪಿಸಿಕೊಳ್ಳಲು ಇಚ್ಚಿಸುತ್ತಾರೆ." ಹುಭಾಷಿಕ ನಮ್ಮ ಸಮುದಾಯವನ್ನು ಒಗ್ಗೂಡಿಸಲು ಬಹಳವಾಗಿ ಶ್ರಮಿಸಿದ್ದನು. ಕಾಡಿನ ಬದುಕಿನಲ್ಲಿ ನಮ್ಮ ಬುಡಕಟ್ಟು ಜನರನ್ನೆಲ್ಲಾ ಸಂಘಟಿಸಿ, ಒಂದಷ್ಟು ಕಾಲ ಗುರಿಕಾರ, ಬುಡಕಟ್ಟು ನಾಯಕನಾಗಿ ಕಾರ್ಯನಿರ್ವಹಿಸಿದ್ದನು. ನಮ್ಮ ಸಮುದಾಯಕ್ಕೆ ಆತ್ಮಸ್ಥೈರ್ಯವನ್ನು ನೀಡಿದ್ದನು. ಸಂಸ್ಕೃತಿ ಉಳಿವಿಗಾಗಿ ಧೈರ್ಯಕ್ಕೆ ಹೆಸರಾಗಿದ್ದನು. ಇತರ ಸಮುದಾಯಗಳು ನಮ್ಮ ನೆಲೆಗಳನ್ನು ಅತಿಕ್ರಮಿಸಲು ಅವಕಾಶವನ್ನು ನೀಡುತ್ತಿರಲಿಲ್ಲ. ಅನ್ಯಾಯವನ್ನು ಸಹಿಸುತ್ತಿರಲಿಲ್ಲ. ಕೊನೆಗೆ ಈತನನ್ನು ಎದುರಿಸಲು ಸಾಧ್ಯವಾಗದೆ ವೈರಿಗಳು ಮೋಸದಿಂದ ಕೊಂದರು(ಪು.೧೭, ೨೦೧೨) ಎಂಬುದಾಗಿ ಪಾಂಗಳ ಬಾಬು ಕೊರಗ ಅವರ ಅಭಿಪ್ರಾಯ. ಆದರೆ ಈ ಎಲ್ಲ ಅಭಿಪ್ರಾಯಗಳಿಗೆ ನಿಖರ ಸಾಕ್ಷಿ-ಆಧಾರಗಳ ಕೊರತೆ ಇರುವುದನ್ನು ಗಮನಿಸಬೇಕು.

ವಾಲ್‌ಹೌಸ್‌ನ ಕೊರಗರ ಬಗ್ಗೆ ಈ ಕೆಳಗಿನ ವಿವರಣೆಗಳನ್ನು ನೀಡಿದ್ದಾನೆ.

ಭಾರತದಾದ್ಯಂತ ಅನೇಕಾನೇಕ ಗುಲಾಮ ಜಾತಿಗಳಿವೆ. ಇವುಗಳಿಗೆ ಕಾನೂನಿನ ಮಾನ್ಯತೆ ಇಲ್ಲವೇನೋ ನಿಜ. ೧೮೪೩ರ ಸರ್ಕಾರಿ ಕಾಯ್ದೆಯಂತೆ ಅವುಗಳ ಏಳಿಗೆಗಾಗಿ ಪ್ರಯತ್ನಿಸಲಾಗಿದ್ದರು ವಾಸ್ತವದಲ್ಲಿ ಅವುಗಳು ಗುಲಾಮ ಸ್ಥಿತಿಯಲ್ಲಿವೆ. ಅವುಗಳ ಹುಟ್ಟು ಮತ್ತು ಸ್ಥಾನಮಾನವನ್ನು ಹೀಗೆ ವಿವರಿಸಬಹುದು. ಬ್ರಹ್ಮನಿಂದ ಸೃಷ್ಟಿಯಾದ ನಾಲ್ಕು ವರ್ಣಗಳನಂತರ ಆರು ಅನುಲೋಮ ಜಾತಿಗಳು ಹುಟ್ಟಿಕೊಂಡವು. ಈ ಅನುಲೋಮ ಜಾತಿಗಳಿಗೆ ಸೇರಿದವರ ತಂದೆ ಬ್ರಾಹ್ಮಣ ಕ್ಷತ್ರಿಯರಾಗಿದ್ದು ತಾಯಿಯೂ ಕೆಳವರ್ಗಕ್ಕೆ ಸೇರಿದ ಮಹಿಳೆಯಾಗಿದ್ದಳು. ಇದರ ನಂತರ ಆರು ಪ್ರತಿಲೋಮ ಜಾತಿಗಳು ಬರುವವು ಈ ಪ್ರತಿಲೋಮ ಜಾತಿಗಳಿಗೆ ಸೇರಿದವರು ಬ್ರಾಹ್ಮಣ ಕ್ಷತ್ರಿಯ ತಾಯಿಯವರಿಂದಲೂ ಹುಟ್ಟಿದವರಾಗಿದ್ದಾರೆ. ಈ ಪೈಕಿ ಚಾಂಡಾಲ ವರ್ಗವು ಮೂರನೆಯದಾಗಿದೆ. ಈ ವರ್ಗಕ್ಕೆ ತಂದೆಯಂದಿರು ಶೂದ್ರರಿಂದಲೂ ಮತ್ತು ತಾಯಂದಿರು ಬ್ರಾಹ್ಮಣ ವರ್ಗದವರಿಂದಲೂ ಬಂದವರಾಗಿದ್ದಾರೆ. ಈ ಚಾಂಡಾಲರನ್ನೇ ಗುಲಾಮರು ಎನ್ನಲಾಗುವುದು ಇವರನ್ನು ಹದಿನೈದು ಉಪವರ್ಗಗಳಾಗಿ ವಿಭಜಿಸಲಾಗಿದೆ. ಅವರೊಳಗೆ ವಿವಾಹ ಸಂಬಂಧ

ಏರ್ಪಡುವುದಿಲ್ಲ. ಈ ಸಂಪ್ರದಾಯವನ್ನು ಇಂದಿಗೂ ಪಾಲಿಸಲಾಗುತ್ತಿದೆ. ಈ ಪೈಕಿಯಲ್ಲಿ ಕೊನೆಯ ಎರಡು ಉಪವರ್ಗಗಳೇ ಕಪಟ ಅಥವಾ ಕಂಬಳಿ ಹೊದೆಯುವ ಕೊರಗರು ಮತ್ತು ಸೊಪ್ಪು ಅಥವಾ ಎಲೆಗಳನ್ನೇ ವಸ್ತ್ರವಾಗಿ ತೊಡುವ ಕೊರಗರು ಎನ್ನಲಾಗುವುದು.

ವಾಲ್‌ಹೌಸ್‌ನ ಕೊರಗರ ಐತಿಹ್ಯ ಮತ್ತು ವರ್ತಮಾನದ ಬಗೆಗೆ ಈ ಕೆಳಗಿನ ವಿವರಣೆಗಳನ್ನು ಕೊಡುತ್ತಾನೆ.

"ಹುಬಾಸಿಗ ದೊರೆಯ ಒಳನಾಡಿಗಳಲ್ಲಿ ಹಲವಾರು ಗುಲಾಮರಿಗೆ ಒಳಗಾದರಷ್ಟೆ. ಅವರು ಬದುಕಿನ ಉದ್ದಕೂ ತಮ್ಮ ಧ್ವನಿಗಳ ಚಾಕರಿಯಲ್ಲೇ ದಿನಕಳೆಯಬೇಂದು ತಾಕೀತು ಮಾಡಲಾಯಿತು. ಪ್ರತಿಯೊಬ್ಬನಿಗೂ ಒಂದು ಹೊತ್ತಿನ ಊಟ ನೀಡಲಾಗುತ್ತಿತ್ತು. ಉಳಿಗದ ಅಳುಗಳ ಮಾರಾಟ ಹಾಗೂ ಪರಭಾರೆ ಸಾಮಾನ್ಯ ಸಂಗತಿಯಾಗಿತ್ತು. ಮಿಂದು ಬಂದ ಉಳಿಗದ ಆಳು ತನ್ನ ಮೈಗೆ ಎಣ್ಣೆ ಹಚ್ಚಿಕೊಳ್ಳುತ್ತಾನೆ. ಅಷ್ಟರಲ್ಲಿ ಅವನನ್ನು ಕೊಂಡುಕೊಳ್ಳುವ ದನಿಯ ಲೋಹದ ತಟ್ಟೆಯಲ್ಲಿ ನೀರು ತುಂಬಿ ಅದರೊಳಗೆ ಬಂಗಾರದ ನಾಣ್ಯವನ್ನು ಹಾಕುತ್ತಾನೆ. ಆ ನೀರನ್ನು ಆಳು ಕುಡಿದು ನಾಣ್ಯವನ್ನು ಸ್ವೀಕರಿಸುತ್ತಾನೆ. ಆ ಬಳಿಕ ಉಳಿಗದ ಆಳು ತನ್ನ ಹೊಸ ಧನಿಯ ಜಮೀನಿನಿಂದ ಸ್ವಲ್ಪ ಮಣ್ಣನ್ನು ತೆಗೆದುಕೊಂಡು ತನಗೆ ಮನೆಕಟ್ಟಲು ಪ್ರಶಸ್ತವಾದ ಜಾಗ ನೋಡಿ ಅಲ್ಲಿಗೆ ಎಸೆಯುತ್ತಾನೆ. ಆ ಭೂಮಿ, ಅಲ್ಲಿನ ಮರಮಟ್ಟಗಳೆಲ್ಲವನ್ನೂ ಈ ಉಳಿಗದ ಆಳು ಉಪಯೋಗಿಸಬಹುದು. ಉಳಿಗದ ಆಳುಗಳನ್ನು ಪ್ರತ್ಯೇಕವಾಗಿ ಮಾರಾಟ ಮಾಡುವುದುಂಟು. ಇನ್ನೂ ಕೆಲವೊಮ್ಮೆ ಒಂದು ಜಮೀನು ಪರಭಾರೆಯಾದಾಗ ಅಲ್ಲಿನ ಕೊರಗ ಗುಲಾಮನು ಸಹಜವಾಗಿ ಹೊಸ ಧನಿಯ ಆಳಾಗುತ್ತಾನೆ. ದೇವಸ್ಥಾನದ ಬಿಟ್ಟಿ ಚಾಕರಿಗಾಗಿ ಕೊರಗರನ್ನು ಒಪ್ಪಿಸುವುದೂ ಉಂಟು. ಅವನನ್ನು ದೇವಾಲಯದ ಸಮೀಪಕ್ಕೆ ಕರೆದೊಯ್ದು, ಒಪ್ಪಿಸುವ ಯಾಜಮಾನನು ಆಳಿನ ಬಾಯಿಗೆ ಸ್ವಲ್ಪ ಮಣ್ಣು ಹಾಕಿ ಆತ ಆ ಮುಂದೆ ಒಳಗಿರುವ ದೇವರ ಆಳು ಎಂಬುದಾಗಿ ಸಾರ್ವಜನಿಕವಾಗಿ ಪ್ರಕಟಿಸುತ್ತಾನೆ. ಮುಂದೆ ಅವನ ಬದುಕೆಲ್ಲವೂ ಆ ಗುಡಿಗೆ ಅರ್ಪಿತವಾಗಿರುತ್ತದೆ.

ಧನಿಯ ಜೀತದ ಆಳಾಗಿ ದುಡಿಯುವವರು ತಮ್ಮ ಮದುವೆಯ ಮೊದಲು ತಮ್ಮ ಒಡೆಯನಿಂದ ಒಪ್ಪಿಗೆ ಪಡೆದುಕೊಳ್ಳಬೇಕು. ಅದಕ್ಕೆ ಪ್ರತಿಯಾಗಿ ಒಡೆಯ ಅಕ್ಕಿ, ತೆಂಗಿನಕಾಯಿ, ಒಂದಿಷ್ಟು ಹಣ ನೀಡಬೇಕಾಗುತ್ತದೆ. ಮದುವೆಯ ಬಳಿಕವೂ ಧನಿಯ ಮನೆಗೆ ಬಂದು

ನಮಸ್ಕಾರಿಸಬೇಕು. ಆ ಧನಿಯ ನವವಿವಾಹಿತ ದಂಪತಿಗಳಿಗೆ ವೀಳ್ಯೇದೆಲೆ ನೀಡಿ ಮದುಮಗಳ ತಲೆಗೆ ಎಣ್ಣೆ ಎರೆಯುತ್ತಾನೆ. ಒಡೆಯನ ಸಾವಿಗೆ ಉಳಿಗದ ಆಳಿನ ಹಿರಿಯ ತಲೆ, ಮೀಸೆ ಬೋಳಿಸಕೊಳ್ಳಬೇಕು. ಮಾಟ ಮಂತ್ರವೇ ಮೊದಲಾದ ಆಕ್ರಮಗಳಲ್ಲಿ ತೊಡಗಿದಾಗ ಅವರನ್ನು ಶಿಕ್ಷಿಸುವ ಅಧಿಕಾರ ಒಡೆಯರಿಗಿತ್ತು." ೧೮೭೫ರಲ್ಲಿ ವಾಲ್‌ಹೌಸ್‌ನು ಆರಂಭದಲ್ಲಿಯೇ ಕೊರಗರ ಬಗೆಗೆ ಅಧ್ಯಯನ ಮಾಡಿರುವುದು ಗಮನಾರ್ಹ.

೧೮೯೪ರಲ್ಲಿ ಸ್ಟರಕನು ಸೌತ್ ಕೆನರಾ ಮ್ಯಾನುವಲ್(South Canara Manual-1894) ನಲ್ಲಿ ಕೊರಗರ ಬಗೆಗೆ ಮಾಹಿತಿ ನೀಡಿರುವುದನ್ನು ಗಮನಿಸಬಹುದಾಗಿದೆ.

**KORAGAS:**

Koraga is a forest tribe, whose chief means of subsistence, however, is basket-making. It is perhaps owing to this fact and to the similarity of name that they have been said to be allied to the Koramas, Koractias, Koravas or Yerukalas, the well known gypsy tribe of basket-makers and salt-carriers. The tribal tradition is that a king called Habashika brought an army from Anantapur to Canara and Koragar formed part of his forces. This army was at first victorious, but it was subsequently defeated and the Koragar were driven into the forests. While one form of this tradition describes the army as composed of Koragas, another speaks of it as an army of Holeyas, and it is probable that the two tribes were once closely connected though they are now distinct.

The Koragas are divided into three clans- the Ande or Ada Koragas, Vastra Koragas, and Soppu or Soppina Koragas. Formerly the first mentioned were considered so unclean that they were not permitted to spit on the public way, bitt had a pot suspended from the neck which they used as a spittoon. The Vastra clan received as clothes.

The following account is based largely on an article on the Kora5as in vol. iii. of The Madras Christian College Magazine. the shrouds of the dead (vastra), While the Soppu clan is so - called from their custom of wearing a dress of leaves. Another account gives the three sub-divisions as (1) Koppada, those who wear clothes, (2) Tippi, who wear ornaments made of the cocoanut-shell, and (3) Vanti, who wear a

peculiar kind of large earring. These three clans may eat together but not intermarry. Each clan is divided into exogamous septs called balis, and it may be noted that some of the Koraga balis, such as Haledennaya and Kumerdennaya are also found among the Man and Mundala Holcyas.

They are niiddle-sized, very dark and strongly made wLh slightly projecting jaws, high cheek bones and sloping foreheads. They cover the lower part of their body with a black cloth and the upper part with a white one, and their head-dress is a cap made of the areca-nut spathe, like that worn by the Holeyas. Their ornaments consist of brass earrings, an iron bracelet and beads of bone strung on a thread and tied round their waist. Females formerly used no clothing except a leaf apron. but they now tie a black cloth round their waist, leaving the bosom bare. They eat flesh, even that of cattle and wild animals, and always drink to excess.

They are much feared by the ordinary inhabitants of the district, who will not mention the work Koraga after night-fall, but use instead the expression 'the black-legged' They were formerly slaves remain in a servile position, though ofcourse legally free to take their labour where they please. Their condition is said to be fairly comfortable, as they receive liberal grain wages from their masters. 1n~ addition to basket—making, the Koragas are now employed as scavengers and drummers. and some collect the hides and horns of dead animals. The majority of them, however, are labourers.

The Koragas are worshippers of devils, especially of Panjurli; the festival celebrated in honour of that demon is called Tambilu. They have no priests but the head of each family conducts all ceremonies. There is no fixed age for marriage and it may - be celebrated at any time after a child is six months old. The ceremony is performed at the bridegroom's house, generally on a Sunday. The bridegroom and bride have to take a cold bath and they then seat themselves side by side on a mat with a handful of rice before them. The blessings of the sun are invoked and then an elderly man of the tribe takes up a few grains of rice and spinkles them over the heads of the couple. His example is followed by the others present, first by the men and then by the women. The bridegroom has then to present two silver pieces to the

bride and feasting and drinking conclude the ceremony. Widow marriage and polygamy are allowed and practiced. The dead are buried and never burned. On the sixteenth day after burial, a handful of earth is removed from the grave and buried in a pit and a stone is fixed over it. Some rice and toddy are placed on this stone as a last offering to the departed soul which is then asked to join its ancestors.

Social disputes are settled by their headman, who has power to call caste meetings. Serious offences are punished with loss of caste and minor transgressions by fines, the proceeds **being** spent on liquor. Though the punishment for adultery is excommunication, the offenders may be re-admitted into the caste after burning down seven small huts erected at their expense, into which the guilty persons were made to enter one after the other. This purification ceremony is also used by the Bakudas and has been described above.

ಕೊರಗ ತನಿಯನೂ ಕೊರಗರ ನಾಯಕನೆಂಬಂತೆ ಬಿಂಬಿಸಲ್ಪಡುತ್ತಾನೆ. ಕೊರಗ ತನಿಯನ ಆರಾಧನೆಯನ್ನು ಇತರೆ ಸಮುದಾಯಗಳು ಮಾಡುವುದನ್ನು ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿ ಕಾಣಬಹುದು. ಒಂದುವೇಳೆ ಕೊರಗ ತನಿಯ ಕೊರಗರ ವೀರನಾಗಿದ್ದು ವೀರ ಮರಣವನ್ನಪ್ಪಿದರೂ ಇತರೆ ಸಮುದಾಯದವರಿಗೂ ವೀರ ನಾಯಕನಾಗಿ ಕಂಡುಬಂದಿರುವುದು ಅತ್ಯಂತ ವಿಶೇಷ ಎನ್ನಬೇಕು. ಕಾರಣ ಕೊರಗರನ್ನು ಸಾಮಾಜಿಕವಾಗಿ ಅತ್ಯಂತ ದೂರೀಕರಿಸುವ ಇತರೆ ಸಮುದಾಯದವರು ಆರಾಧನೆಯಲ್ಲಿ ಕೊರಗ ತನಿಯನನ್ನು ಒಳಗು ಮಾಡಿಕೊಂಡಿರುವುದು ವಿಶೇಷ. ಈ ರೀತಿಯ ಆರಾಧನಾ ಸ್ವರೂಪ ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿ ಕೋಟಿ ಚೆನ್ನಯ ವೀರರ ಆರಾಧನೆಯಲ್ಲೂ ಕಂಡುಬರುತ್ತಿರುವುದು ಗಮನಾರ್ಹ.

ಒಟ್ಟಾರೆಯಾಗಿ ಪ್ರಕೃತಿಯ ಮಡಿಲಲ್ಲೇ ನೆಲೆನಿಂತು ಪ್ರಕೃತಿಯನ್ನೇ ನಂಬಿಕೊಂಡು, ಆರಾಧಿಸಿಕೊಂಡು ಬಂದಂಥ ಕೊರಗರು ಕಾಡಿನ ನಾಶ ಊರಿನ ಅಭಿವೃದ್ಧಿಗಳೆರಡರ ಮಧ್ಯದಲ್ಲಿ ಸಿಲುಕಿ ನಲುಗಿದ ಬುಡಕಟ್ಟು ಎಂಬುದರಲ್ಲಿ ಎರಡು ಮಾತಿಲ್ಲ.

**ಕೊರಗ ಪದನಿಷ್ಪತ್ತಿ**

'ಕೊರಗ' ಪದನಿಷ್ಪತ್ತಿ ಬಗ್ಗೆ ಅನೇಕ ವಿದ್ವಾಂಸರು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಬ್ರಿಟಿಷರ ಕಾಲದಿಂದಲೂ ಕೊರಗ ಶಬ್ದದ ನಿಷ್ಪತ್ತಿ ಬಗೆಗಿನ ಅಭಿಪ್ರಾಯ

ಗಳನ್ನು ಗಮನಿಸೋಣ. ಕ್ಯಾಂಪ್‌ಬೆಲ್(Campbell) ಕೊರಗರನ್ನು ಕೊರಸಂ ಅಥವಾ ಕೊರಗರ್ ಎಂದು ಉಲ್ಲೇಖಿಸಿದ್ದಾರೆ. ಹಾಗೆಯೇ ಬುಕನನ್ 'ಕೊರರ್' ಅಥವಾ 'ಕೊರವರ್' ಎಂದು ಕರೆದಿದ್ದಾನೆ. ತುಳು ಭಾಷೆಯ ಮೂಲ ಪದವೇ ಕೊರಗ ಎಂಬುದು ಎಲ್ಲರ ಅಭಿಮತ. ಅಯ್ಯಪ್ಪನ್ ಅವರ ಪ್ರಕಾರ ಕೊರಗ ಪದ ಕುರುವರ್ ಪದದಿಂದ ಹುಟ್ಟಿದೆ. ಕುರುವರ್ ಎಂದರೆ ಬೆಟ್ಟದಲ್ಲಿ ವಾಸಿಸುವವರು ಎಂದರ್ಥ. 'ಕೊರ' ಎಂಬ ಪದಕ್ಕೆ 'ಸೂರ್ಯ' ಎಂಬರ್ಥವಿರುವುದರಿಂದ ಸೂರ್ಯನ ಆರಾಧಕರು ಕೊರಗರು ಎಂಬುದಾಗಿ ಲಾರೆನ್ಸ್ ಡಿ. ಸೋಜ ಅವರ ಅಭಿಪ್ರಾಯ.

ಕರ್ನಾಟಕದ ಇತರೆ ಪ್ರದೇಶಗಳಲ್ಲಿರುವ ಕೊರಮ, ಕೊರಚರನ್ನು ಕೊರಗ ಸಮುದಾಯಕ್ಕೆ ಸೇರಿದವರು ಎಂಬುದು ಕೆಲವರ ವಾದ. ತುಳು ಭಾಷಾ ವೈಶಿಷ್ಟ್ಯವನ್ನು ಗಮನಿಸಿದಾಗ "ಕುರ್ವೆ+ ಅಗ=ಕುರ್ವೆಗ ಕುರ್ವೆಯವನು. ಮುಂದೆ ಅದೇ ಕುರ್ವೆಗ ಕೊರಗ ಆಗಿ ಬಳಕೆಗೊಂಡಿತು" ಎಂದು ಗುಣಪಾಲ್ ಶೆಟ್ಟಿ ಕರ್ಪೆ ಅವರು ವಿಶ್ಲೇಷಿಸುತ್ತಾರೆ. (ಪು.೧೦೯, ೨೦೧೨) ಮುಂದುವರೆದು ಶಬ್ದ ನಿಷ್ಪತ್ತಿಯು ವೃತ್ತಿಯಾಧಾರಿತವಾಗಿ ಬಂದಿದ್ದು ಮತ್ತು ಇಲ್ಲಿಯ ಅಸ್ಪೃಶ್ಯ ಸಮುದಾಯಕ್ಕೆ ಬಳಕೆಯಾಗುತ್ತಿದ್ದ ಪುರುಷ ವಾಚಕ ಆಗ ಪ್ರತ್ಯಯವು ಜೊಡಣೆಗೊಂಡು ಕೊರಗ ಎನ್ನುವ ಶಬ್ದ ಬಂದಿರಬಹುದು(ಪು. ೧೧೦, ೨೦೧೩) ಎಂದು ಶೆಟ್ಟಿ ಅವರು ತಿಳಿಸುತ್ತಾರೆ.

ತುಳು ಪ್ರದೇಶ, ಭಾಷೆ, ವೃತ್ತಿಗಳನ್ನು ಗಮನಿಸಿ ನೋಡುವುದಾದರೆ ಗುಣಪಾಲ್ ಶೆಟ್ಟಿ ಕರ್ಪೆ ಅವರ ಪದನಿಷ್ಪತ್ತಿಯಲ್ಲಿ ಸತ್ಯಾಂಶಗಳಿರುವುದನ್ನು ಗಮನಿಸಬಹುದು. ಕೊರಗರು ದಕ್ಷಿಣ ಕನ್ನಡ-ಉಡುಪಿ ಜಿಲ್ಲೆಗಳ ಮೂಲನಿವಾಸಿಗಳಾಗಿರುವುದರಲ್ಲಿ ಭಿನ್ನಾಭಿಪ್ರಾಯಗಳಿಲ್ಲ. ಆದರೆ ಭಾಷಾತಜ್ಞರ ಕೊರಗ ಭಾಷೆ ಉತ್ತರ ದ್ರಾವಿಡ ಭಾಷಾ ಪ್ರಬೇಧಕ್ಕೆ ಸೇರುತ್ತಿದೆ ಎಂಬ ಅಭಿಪ್ರಾಯ ಕೊರಗರ ಮೂಲದ ಬಗೆಗೆ ಇನ್ನಷ್ಟು ಸಂಶೋಧನೆ ಮಾಡಬೇಕೆನ್ನುವುದನ್ನು ತಿಳಿಸುತ್ತದೆ. ಒಂದು ವೇಳೆ ವಲಸಿಗರಾಗಿದ್ದರೂ ಅತ್ಯಂತ ಪುರಾತನ ಕಾಲದಲ್ಲಾಗಿರಬಹುದೆಂದು ಪುರುಷೋತ್ತಮ ಬಿಳಿಮಲೆ ಅವರ ಅಭಿಪ್ರಾಯ.

**ಭಾಷೆ**

ಜಗತ್ತಿನಲ್ಲಿ ಕೋಟ್ಯಾಂತರ ಜೀವಿಗಳಲ್ಲಿ ಮಾನವ ಜೀವಿ ಅಭಿವೃದ್ಧಿ ಹೊಂದಲು ಮತ್ತು ಇತರ ಜೀವಿಗಳಿಗಿಂತ ಭಿನ್ನವಾಗಿರಲು ಪ್ರಮುಖ ಕಾರಣ ಬುದ್ಧಿವಂತಿಕೆ ಮತ್ತು ಭಾಷೆ. ಭಾಷೆಯಿಂದಲೇ ಮನುಷ್ಯ ಈ ಹಂತಕ್ಕೆ ತಲುಪಿದ್ದಾನೆ ಎಂದರೂ ತಪ್ಪಾಗಲಾರದು.

ಕಾರಣ ಭಾಷೆಗೆ ಅಷ್ಟೊಂದು ಶಕ್ತಿಯಿದೆ. ಭಾಷೆ ಇರಲಾರದ ಮನುಷ್ಯ ಜಗತ್ತಿನಲ್ಲಿರಲಾರ. ಎಂತಹ ದಟ್ಟಾರಣ್ಯ ಪ್ರದೇಶಗಳಲ್ಲಿ ಜೀವಿಸುತ್ತಿರುವ ಮಾನವ ಗುಂಪುಗಳು ಭಾಷೆಯಿಂದಲೇ ಪ್ರತ್ಯೇಕತೆಯನ್ನು, ಅನನ್ಯತೆಯನ್ನು ಉಳಿಸಿಕೊಂಡಿವೆ. ಭಾಷಾತಜ್ಞರ ಪ್ರಕಾರ ಒಂದು ಭಾಷೆ ಪ್ರತಿ ೨೦ ಕಿ.ಮೀ.ಗೆ ಬದಲಾವಣೆಯನ್ನು ಕಾಣುತ್ತದೆ. ಅಂತೆಯೇ ಬಹುಸಂಖ್ಯಾತ ಭಾಷೆ ಅಲ್ಪಸಂಖ್ಯಾತ ಭಾಷೆಯ ಮೇಲೆ ಪ್ರಭಾವ ಬೀರುತ್ತದೆ. ಆ ಮೂಲಕ ತನ್ನ ಅಸ್ತಿತ್ವವನ್ನು ಸ್ಥಾಪಿಸುತ್ತದೆ. ತಂತ್ರಜ್ಞಾನದ ಯುಗವೆಂದು ಕರೆಯಲ್ಪಡುವ ಇಂದಿನ ದಿನಮಾನಗಳಲ್ಲೂ ತಂತ್ರಜ್ಞಾನ ಸಲಕರಣೆಗಳು ಇದ್ದರೂ ಭಾಷೆಯ ಅವಸಾನವಾಗುತ್ತಿರುವುದು ಗಮನಾರ್ಹ.

ಚಲನಶೀಲ ಗುಣವನ್ನು ಹೊಂದಿರುವ ಭಾಷೆ ಸ್ಥಗಿತತೆಯನ್ನು ಕಾಣಬಹುದು. ಹೀಗೆ ಜಗತ್ತಿನಲ್ಲಿ ಈಗಾಗಲೇ ನೂರಾರು ಭಾಷೆಗಳು ಕಣ್ಮರೆಯಾಗಿರುವುದನ್ನು ಅಂಕಿ ಅಂಶಗಳು ದೃಢಪಡಿಸುತ್ತವೆ. ಕೊರಗರು ಸಾಮಾಜಿಕ ಮುಖ್ಯವಾಹಿನಿಗೆ ಬರುವ ಸಂದರ್ಭದಲ್ಲಿ ತಮ್ಮ ಆಡುಭಾಷೆಯನ್ನು ಮರೆತು ಬಹುಸಂಖ್ಯಾತರಿಗೆ ಅರ್ಥವಾಗುವ ಕನ್ನಡ ಮತ್ತು ತುಳು ಭಾಷೆಯನ್ನು ಬಳಸಬೇಕಾದುದ್ದು ಅನಿವಾರ್ಯವಾಯಿತು. ಇದರಿಂದ ಕೊರಗ ಭಾಷೆ ಇಂದು ಅಳಿವಿನಂಚಿನಲ್ಲಿದೆ. ಯುನೆಸ್ಕೋದ ವರದಿ ಪ್ರಕಾರ ಪ್ರಪಂಚದ ಪ್ರಮುಖ ಅಳಿವಿನಂಚಿನಲ್ಲಿರುವ ಭಾಷೆಗಳಲ್ಲಿ ಕೊರಗ ಭಾಷೆಯು ಒಂದು. ಕೊರಗರು ತಮ್ಮ ಭಾಷೆಯನ್ನು ಬಳಸದಿರುವುದು ಇದಕ್ಕೆ ಮೂಲಕಾರಣ.

ಶತಮಾನಗಳಿಂದ ಕಾಡಿನ ಹೊರಗೆ ಬರಲು ಇಚ್ಚಿಸದೆ ನಾಚಿಕೆ ಸ್ವಭಾವದ ಇವರು ಕೂಪ ಮಂಡೂಕರಾಗಿ ಉಳಿದಿದ್ದರೂ ಒಂದು ಶತಮಾನದೀಚೆಗೆ ಆದ ಸಾಂಸ್ಕೃತಿಕ ಮತ್ತು ಸಾಮಾಜಿಕ ಬದಲಾವಣೆಯಿಂದಾಗಿ ಅವರು ಆಧುನಿಕತೆ ಮೆರುಗಿಗೆ ಮಾರು ಹೋಗಿದ್ದಾರೆ. ಆದರೆ ಆಧುನಿಕತೆಯ ಸೋಗಿನಲ್ಲಿ ತಮ್ಮ ಭಾಷೆ, ಸಂಸ್ಕೃತಿ ಆಚರಣೆಗಳನ್ನು ಮರೆಯದೇ ಸಾಂಪ್ರದಾಯಿಕತೆ ಮತ್ತು ಆಧುನಿಕತೆಯನ್ನು ಪರಸ್ಪರ ಹೊಂದಿಸಿಕೊಂಡು ಮುನ್ನಡೆಯಬೇಕು ಹಾಗೂ ಕೊರಗರ ಅಭಿವೃದ್ಧಿಗೆಂದು ಮೀಸಲಾಗಿರುವ ಇಲಾಖೆಗಳು ನಿಷ್ಪಕ್ಷಪಾತವಾಗಿ ಕರ್ತವ್ಯ ನಿರ್ವಹಿಸಬೇಕಾಗಿದೆ.

ಕೊರಗರು ಕೊರಗ ಮಾತೃಭಾಷೆಯನ್ನು ಹೊಂದಿದ್ದಾರೆ. ಕೊರಗ ಭಾಷೆಯಲ್ಲಿಯೂ ಪ್ರಾದೇಶಿಕ ಭಿನ್ನತೆಯಿರುವುದು ಕಂಡುಬಂದಿದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ ಕೊರಗರ ಭಾಷೆಗೂ ಉಡುಪಿ ಜಿಲ್ಲೆಯ ಕೊರಗರ ಭಾಷೆಗೂ ಭಿನ್ನತೆಯಿದೆ. ಈ ಮೊದಲು

ಪ್ರಸ್ತಾಪಿಸಿದಂತೆ ಸಹಜ ಪ್ರಕ್ರಿಯೆಯೆಂಬಂತೆ ಭಾಷೆಗಳು ಪ್ರಾದೇಶಿಕ ಭಿನ್ನತೆಯನ್ನು ಹೊಂದಿರುವುದರಿಂದಲೇ ಪ್ರತ್ಯೇಕತೆಯನ್ನು ದೃಢಪಡಿಸಲು ಸುಲಭಸಾಧ್ಯವಾಗುವುದು. ಮಂಚಕಲ್‌ನ ರಮೇಶ್ ಕೊರಗ ಅವರು ಭಿನ್ನತೆ ಬಗೆಗೆ ಈ ರೀತಿ ತಮ್ಮ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಉಡುಪಿ ನಗರದ ಸುತ್ತಮುತ್ತ ಹಾಗೂ ಕೋಟಾ, ಬ್ರಹ್ಮಾವರ ಪರಿಸರಗಳಲ್ಲಿ ವಾಸಿಸುವ ಜನರು ಮಾತನಾಡುವ ಭಾಷೆಯು ಒಂದು ವಿಧವಾದರೆ, ಕಾಪು, ಬೆಳ್ಮಣ್ಣು, ಕಾರ್ಕಳ ಸುತ್ತಮುತ್ತಲಿನ ಇನ್ನೊಂದು ವಿಧದ ಭಾಷೆ ಚಾಲ್ತಿಯಲ್ಲಿದೆ. (ಪು.೮೦, ೨೦೧೩) ಮುಂದುವರೆದು "ಮಕ್ಕಳು ಎಂಬ ಕನ್ನಡ ಪದವನ್ನು ಕುಂದಾಪುರ, ನಾಡ ಕೊರಗರು 'ಕಿಜ್ಜೆರ್' ಎಂದರೆ, ಕೊಕ್ಕರ್ಣೆ, ಬಜಗೋಳಿ ಕೊರಗರು 'ಕಿದ್ದೆರ್' ಎಂದು ಉಚ್ಚರಿಸುತ್ತಾರೆ (ಪು.೮೦, ೨೦೧೩).

"ಕೊರಗ ಭಾಷೆಯು ಉತ್ತರ ದ್ರಾವಿಡ ಭಾಷೆಗಳಾದ ಖುಡಕ್, ಮಾಲ್ತೊ ಹಾಗೂ ಬ್ರಾಹೂ ಈ ಭಾಷೆಗಳೊಂದಿಗೆ ಆಪ್ತ ಸಂಬಂಧವನ್ನು ಹೊಂದಿರುವುದಾಗಿ ಭಾಷಾ ತಜ್ಞರು ಪತ್ತೆ ಹಚ್ಚಿರುವರು"(ಪು. ೧೩೬, ೨೦೦೨) ಎಂದು ಡಾ. ಕೆ.ಎಂ. ಮೇತ್ರಿ ಅವರು ಉಲ್ಲೇಖಿಸಿದ್ದಾರೆ.

ಇತ್ತೀಚಿನ ತ್ವರಿತ ಬದಲಾವಣೆಯ ಕಾಲದಲ್ಲಿ ಅತ್ಯಲ್ಪ ಜನಸಂಖ್ಯೆಯಿರುವ ಅಲ್ಪಸಂಖ್ಯಾತ ಕೊರಗರ ಕೊರಗ ಭಾಷೆ ವಿನಾಶದ ಅಂಚನ್ನು ತಲುಪಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಕರಾವಳಿ ಪ್ರಾಂತ್ಯದ ಭಾಷೆಯಾದ ತುಳು ಕಣ್ಮರೆಯ ಹಂತದಲ್ಲಿದೆ ಎಂದರೆ ಆ ಪ್ರಾಂತ್ಯದ ಅತ್ಯಂತ ಚಿಕ್ಕ ಘಟಕವಾದ ಕೊರಗ ಭಾಷೆ ಉಳಿಯಲು ಸಾಧ್ಯವೇ? ಎಂಬ ಪ್ರಶ್ನೆ ಮೂಡುವುದು ಸಹಜ. ಕೊರಗರು ವಾಸಿಸುವ ಪ್ರದೇಶವನ್ನು ಇತರೆ ಭಾಷಿಕರು(ಕನ್ನಡ, ತುಳು, ಕೊಂಕಣಿ) ಹೆಚ್ಚಾಗಿರುವುದರಿಂದ ಕೊರಗ ಭಾಷೆ ಬೆಳೆಯಲು ಕಷ್ಟಸಾಧ್ಯ.

ಹಿರಿಯ ವಿದ್ವಾಂಸ ಮರಿಯಪ್ಪ ಭಟ್ಟರು ಹೇಳಿದಂತೆ ದಕ್ಷಿಣ ಕನ್ನಡ-ಉಡುಪಿ ಜಿಲ್ಲೆ ಅನೇಕ ಭಾಷೆಗಳ ಆಡುಂಬೊಲವಿದ್ದಂತೆ. ಕನ್ನಡ, ತುಳು, ಮಲಯಾಳಂ, ತಮಿಳು, ಬ್ಯಾರಿ, ಕೊಂಕಣಿ, ಮರಾಠಿ, ಅರೆಗನ್ನಡ(ಗೌಡಗನ್ನಡ) ಹವ್ಯಕ ಕನ್ನಡ, ತುಳು ಬ್ರಾಹ್ಮಣ ಕನ್ನಡ ಹೀಗೆ ನೂರಾರು ಭಾಷೆಗಳಿರುವ ಈ ಪ್ರದೇಶದಲ್ಲಿ ಕೊರಗ ಭಾಷೆ ಉಳಿದಿರುವುದೇ ಹೆಚ್ಚು. ಇಂದಿನ ಯುವ ಪೀಳಿಗೆಯ ಕೊರಗರಿಗೆ ಕೊರಗ ಭಾಷೆ ತಿಳಿಯದು. ಕನ್ನಡ, ತುಳು ಮತ್ತು ಇತರೆ ಭಾಷೆಗಳಾಡುತ್ತಿರುವ ಇವರು ಸಾರ್ವಜನಿಕ ಸ್ಥಳಗಳಲ್ಲಿ ತಮ್ಮ

ಮಾತೃಭಾಷೆಯಲ್ಲಿ ವ್ಯವಹರಿಸಲು ಹಿಂಜರಿಯುತ್ತಾರೆ. ಅವರಿಗೆ ಕೀಳರಿಮೆ ಪ್ರಜ್ಞೆ ಕಾಡುತ್ತದೆ. ಹಾಗಾಗಿ ತಮ್ಮ ಮಾತೃಭಾಷೆಯನ್ನೇ ಕಡೆಗಣಿಸಿಸುವ ಹಂತಕ್ಕೆ ಬರುವುದರಲ್ಲಿ ಮುತುವರ್ಜಿ ವಹಿಸುತ್ತಿದ್ದಾರೆಯೇ ವಿನಃ ತಮ್ಮ ಮಾತೃಭಾಷೆಯ ಬೆಳವಣಿಗೆಗೆ ಸಹಕರಿಸಲು ಹಿಂಜರಿಯುತ್ತಾರೆ. ಈ ಪ್ರಕ್ರಿಯೆ ಕೊರಗ ಭಾಷೆಗೆ ಸೀಮಿತವಾಗಿಲ್ಲ. ಇತರೆ ಅತ್ಯಲ್ಪ ಜನಸಂಖ್ಯೆಯಿರುವ ಭಾಷಿಕರ ಭಾಷೆಗಳಿಗೆ ಅನ್ವಯಿಸುತ್ತದೆ.

ಭಾರತೀಯ ಸಮಾಜದಲ್ಲಿ ಸಾಮಾಜಿಕ ಶ್ರೇಣೀಕರಣ ಮತ್ತು ಸಮುದಾಯಗಳ ನಡುವಿನ ಸಾಮಾಜಿಕ ನಿರ್ಬಂಧದೊಡನೆ ಅವುಗಳ ಪ್ರತ್ಯೇಕತೆಯನ್ನು ನಿರ್ವಹಿಸುವಲ್ಲಿ ಜಾತಿ ಪ್ರಮುಖ ಪಾತ್ರವಹಿಸುತ್ತದೆ. ಒಂದು ಭಾಷಿಕ ಸಮುದಾಯದ ಒಳ ಭಿನ್ನತೆಗಳಿಗೆ ಸಾಮಾಜಿಕವಾದ 'ಜಾತಿ' ವ್ಯವಸ್ಥೆಯೂ ಕಾರಣವಾಗುತ್ತದೆ. ಎಲ್ಲ ಬುಡಕಟ್ಟು ಸಮುದಾಯ ಗಳಂತೆ ಕೊರಗ ಬುಡಕಟ್ಟು ಕೂಡ ಮೂಲಭೂತವಾಗಿ ಭಿನ್ನವಾದ ನಂಬಿಕೆ, ರೀತಿ-ರಿವಾಜು, ನಡವಳಿಕೆ, ಸಂಪ್ರದಾಯ-ಜೀವನಕ್ರಮವನ್ನು ಪಾರಂಪರಿಕವಾಗಿ ರೂಢಿಸಿಕೊಂಡು ಬಂದಿದೆ. ಈ ಕಾರಣಕ್ಕಾಗಿ ಮಾತೃಭಾಷೆಯಾಗಲೀ, ಸಂಪರ್ಕ ಭಾಷೆಯಾಗಲೀ ವ್ಯತ್ಯಾಸಗಳು ಕಂಡುಬರುತ್ತವೆ. ಕೊರಗರು ವ್ಯವಹರಿಸುವ ಭಾಷೆ ತುಳು ಆಗಿದ್ದರೂ ಇತರರ ತುಳು ಭಾಷಾ ಉಚ್ಚರಣೆಗೂ ಕೊರಗರ ಉಚ್ಚರಣೆಗೂ ವ್ಯತ್ಯಾಸಗಳುಂಟು. ಈ ವ್ಯತ್ಯಾಸಗಳಿಂದಲೇ ಸ್ಥಾನಮಾನಗಳನ್ನು ಗುರುತಿಸುವ ರೀತಿ ನಮ್ಮ ಸಮಾಜದಲ್ಲಿದೆ ಅಥವಾ ವ್ಯಂಗ್ಯವಾಗಿಯೂ ಮಾತನಾಡುವ ಸಂದರ್ಭಗಳೂ ಇವೆ ಎಂಬುದನ್ನು ಸೂಕ್ಷ್ಮವಾಗಿ ಗಮನಿಸಬಹುದಾಗಿದೆ. ಈ ರೀತಿಯ ವ್ಯಂಗ್ಯ, ತಮಾಷೆಗಳಿಂದ ಒಂದು ರೀತಿಯ ಕೀಳರಿಮೆಗೆ ತಳ್ಳಲ್ಪಡುವುದು ಸಹಜ. ಕೊರಗರಲ್ಲಿ ಈ ಸಂಗತಿ ಕೆಲಸ ಮಾಡಿದೆ. ಹಾಗಾಗಿ ತಮ್ಮ ಮನೆ ಬಿಟ್ಟು ಎಲ್ಲಿಯೂ ತಮ್ಮ ಮಾತೃಭಾಷೆಯನ್ನು ಮಾತನಾಡಲಾರರು, ಮಾತನಾಡಿ ಅಪಹಾಸ್ಯಕ್ಕೀಡಾಗಲು ಯಾರೂ ಸಿದ್ಧರಿರುವುದಿಲ್ಲ.

**ಕೊರಗರ ಒಳಪಂಗಡಗಳು**

ಮೂಲದಲ್ಲಿದ್ದ ಒಂದು ಸಮುದಾಯ ಬೇರೆ ಬೇರೆ ಕಾರಣಗಳಿಗಾಗಿ ಪಂಗಡಗಳಾಗಿ ಸ್ಥಿತ್ಯಂತರ ಹೊಂದುವುದು ಸಹಜ ಪ್ರಕ್ರಿಯೆ. ಪ್ರಾದೇಶಿಕ ಭಿನ್ನತೆ, ಆಹಾರದ ಸ್ಥಿತಿಗತಿ ಮತ್ತು ಪರಿಸರದ ಕಾರಣಗಳಿಗಾಗಿ ಮೂಲದಲ್ಲಿ ಒಂದೇಯಾಗಿರುವ ಬುಡಕಟ್ಟು ಸಮುದಾಯ ಗಳು ಕ್ರಮೇಣ ಬೇರೆ ಬೇರೆಯಾಗುತ್ತವೆ. ನಂತರ ಅದು ಅವರಲ್ಲಿನ ಒಳಪಂಗಡ ಎಂಬ ಹೆಸರನ್ನು ಪಡೆದುಕೊಳ್ಳುತ್ತದೆ ಎಂಬುದು ವಿದ್ವಾಂಸರ ಅಭಿಪ್ರಾಯ. ಕೊರಗರ ವಿಷಯಕ್ಕೆ

ಬಂದಾಗಲೂ ಈ ವಾದ ಪ್ರಚಲಿತಕ್ಕೆ ಬರುತ್ತದೆ. ಮೂಲತಃ ಕೊರಗರು ಮತ್ತು ಮುಂಡಾಲರಂತಹ ಕೆಲವು ಅಸ್ಪೃಶ್ಯರು ಒಂದೇ ಜಾತಿಯಾಗಿದ್ದು ಕ್ರಮೇಣ ಭಿನ್ನ ಭಿನ್ನ ಜಾತಿಗಳಾಗಿ ಒಡೆದಿರಬೇಕು ಎಂಬುದು ವಿದ್ವಾಂಸರ ಅಭಿಪ್ರಾಯವನ್ನು ಇಂದಿರಾ ಹೆಗ್ಗಡೆಯವರು ಉಲ್ಲೇಖಿಸುತ್ತಾರೆ(ಪು.೧, ೨೦೦೭).

ಕೊರಗರ ಒಳಪಂಗಡಗಳ ಬಗ್ಗೆ ಅಧ್ಯಯನ ಮಾಡಿದ ವಿದ್ವಾಂಸರಲ್ಲಿಯೇ ಭಿನ್ನಾಭಿಪ್ರಾಯಗಳು ಕಂಡುಬರುತ್ತವೆ. ಸದಾ ಪರಿವರ್ತನೆಯನ್ನು ಕಾಣುತ್ತಿರುವ ಸಮಾಜದಲ್ಲಿ ಸಮುದಾಯಗಳಲ್ಲಿ ಇದೇ ಸರಿ ಎಂದು ತಾರ್ಕಿಕ ಅಂತ್ಯಕ್ಕೆ ಬರುವುದು ಕಷ್ಟಸಾಧ್ಯ.

ಕೊರಗರ ಬಗ್ಗೆ ಮೊಟ್ಟಮೊದಲ ಅಧ್ಯಯನ ಮಾಡಿದ ಸ್ಟರಕ್ ಮತ್ತು ವಾಲ್ ಹೌಸ್(೧೮೯೪) ಅವರ ಪ್ರಕಾರ ಕೊರಗರಲ್ಲಿ ಮೂರು ಪಂಗಡಗಳಿವೆ. ಅಂಡೆಕೊರಗರು ಅಥವಾ ಅಡಕೊರಗರು. ಎರಡನೆಯದ್ದು ವಸ್ತ್ರಕೊರಗರು, ಮೂರನೆಯದ್ದು ಸೊಪ್ಪು ಅಥವಾ ಸೊಪ್ಪಿನ ಕೊರಗರು(ಪುರುಷೋತ್ತಮ ಬಿಳಿಮಲೆ, ಪು. ೧೨, ೧೯೯೩)

ಇತ್ತೀಚಿನ ಅಧ್ಯಯನಗಳು ಕೊರಗರಲ್ಲಿ ನಾಲ್ಕು ಒಳಪಂಗಡಗಳಿರುವುದನ್ನು ದೃಢಪಡಿಸುತ್ತವೆ. ಆದರೂ ಒಳಪಂಗಡಗಳ ಪದನಿಷ್ಪತ್ತಿ ಬಗೆಗೆ ಇನ್ನೂ ಅನುಮಾನಗಳನ್ನು ವಿದ್ವಾಂಸರು, ಅಧ್ಯಯನಕಾರರು ವ್ಯಕ್ತಪಡಿಸುತ್ತಲೇ ಇದ್ದಾರೆ. ಕೊರಗರ ಅಭಿವೃದ್ಧಿಯಲ್ಲಿ ತೊಡಗಿಕೊಂಡಿರುವ ಗುಣಪಾಲ ಶೆಟ್ಟಿಯವರು ಕೊರಗರಲ್ಲಿನ ಒಳಪಂಗಡಗಳನ್ನು ಈ ರೀತಿ ಪಟ್ಟಿ ಮಾಡಿದ್ದಾರೆ.

೧. ದಕ್ಷಿಣದ ಕೊರಗರು – ಕುಂಟು ಕೊರಗರು

೨. ನಡ್ಸಾಲ್ ಕೊರಗರು – ತಪ್ಪು ಕೊರಗರು ಅಥವಾ ಒಂಟಿ ಕೊರಗರು

೩. ಮೂಡು ಕೊರಗರು – ಸೊಪ್ಪು ಕೊರಗರು

೪. ಉತ್ತರದ ಕೊರಗರು – ಬಡಗನ್ ಕೊರಗರು ಅಥವಾ ನಾಡಾ ಕೊರಗರು ಅಥವಾ ಕಪ್ಪಡ ಕೊರಗರು

ಕೇರಳ ರಾಜ್ಯದ ಕಾಸರಗೋಡು ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ, ಪುತ್ತೂರು, ಬಂಟ್ವಾಳ ಮತ್ತು ಬೆಳ್ತಂಗಡಿ ತಾಲೂಕುಗಳಲ್ಲಿ ನೆಲೆನಿಂತಿರುವ ಕೊರಗರನ್ನು ಕುಂಟುಕೊರಗರು ಎಂದು ಕರೆಯುತ್ತಾರೆ. ಇವರು ತಮ್ಮ ಮೂಲವನ್ನು ಜಮ್ಮ ಎಂಬ ಹೆಸರಿನಿಂದ ಕರೆಯುತ್ತಾರೆ ಎಂದು ಗುಣಪಾಲ ಶೆಟ್ಟಿ ಹೇಳುತ್ತಾರೆ. ಇವರಲ್ಲಿ ಮಾಣ್ಯದೆರ್, ಬಾದೆರ್,

ಕುರುಂಬೆರ್ ಮತ್ತು ಮುಂಡಾನ ಎಂಬ ನಾಲ್ಕು ಬಳಿಗಳಿರುವುದು ಕಂಡುಬಂದಿದೆ. ಸರಿಸುಮಾರು ೫೦೦ರಿಂದ ೬೦೦ ಕುಟುಂಬಗಳಿವೆ. ಈ ಕುಂಟುಕೊರಗರು ಇಂದಿಗೂ ತಮ್ಮ ಮೂಲ ಕುಲಕಸುಬುಗಳನ್ನು ನಿರ್ವಹಿಸಿಕೊಂಡು ಬರುತ್ತಿದ್ದಾರೆ. ಇವರು ಮಾತನಾಡುವ ತುಳು ಭಾಷೆ ಕೂಡ ಅಲ್ಪಸ್ವಲ್ಪ ಭಿನ್ನತೆಯಿಂದ ಕೂಡಿರುವುದು ಕಂಡುಬರುತ್ತದೆ. ಮೊದಲೆರಡು ಬಳಿಗಳ ಜನರು ಹೆಚ್ಚಾಗಿದ್ದಾರೆ ಮತ್ತು ವೈವಾಹಿಕ ಸಂಬಂಧದಲ್ಲಿ ಬೇಡಿಕೆಯಿರುವ ಬಳಿಯಾಗಿದೆ.

ಕುಂಟು ಮೂಲತಃ ತುಳು ಶಬ್ದವಾಗಿದ್ದು ಬಟ್ಟೆ ಎಂಬರ್ಥವನ್ನು ನೀಡುತ್ತದೆ. ಕೊರಗರ ಬೇರೆ ಪಂಗಡದವರಾಗಿದ್ದು, ಈ ದಕ್ಷಿಣ ಭಾಗದ ಕೊರಗರು ಬಟ್ಟೆ(ಕುಂಟು) ಧರಿಸುತ್ತಿದ್ದುದರಿಂದ ಕುಂಟು ಕೊರಗ ಎಂಬ ಹೆಸರು ಬಂದಿರಬಹುದು ಎಂಬ ಊಹೆಗೂ ಇಲ್ಲಿ ಅವಕಾಶವಿದೆ.

ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ಮತ್ತು ಉಡುಪಿ ಜಿಲ್ಲೆಯ ಕಾರ್ಕಳ, ಉಡುಪಿ ತಾಲೂಕುಗಳ ದಕ್ಷಿಣ ಭಾಗದಲ್ಲಿ ವಾಸವಾಗಿರುವ ಕೊರಗರನ್ನು ತಪ್ಪು ಕೊರಗರು, ಒಂಟಿ ಕೊರಗರು ಮತ್ತು ನಡ್ಸಾಲ್ ಕೊರಗರೆಂದು ವಿವಿಧ ಹೆಸರುಗಳಿಂದ ಕರೆಯಲಾಗುತ್ತಿದೆ. ತಪ್ಪು ಕೊರಗರನ್ನು ಇತರೆ ಪಂಗಡಗಳ ಕೊರಗರು ಒಂಟಿ ಕೊರಗರೆಂದು ಗುರುತಿಸುತ್ತಾರೆ. ಆದರೆ ಇವರು ತಮ್ಮನ್ನು ತಪ್ಪು ಕೊರಗರೆಂದೇ ಕರೆಸಿಕೊಳ್ಳುವುದರಲ್ಲಿ ಇಷ್ಟಪಡುತ್ತಾರೆ. ತಪ್ಪು ತುಳು ಭಾಷೆಯ ಶಬ್ದವಾಗಿದ್ದು ಕನ್ನಡದಲ್ಲಿ ಸೊಪ್ಪು ಎಂದು ಧ್ವನಿಸುತ್ತದೆ. ಕಾಡುಗಳಲ್ಲಿ ಸೊಪ್ಪುಗಳನ್ನು ಉಡುಗೆಯಾಗಿಸಿಕೊಂಡಿರಬಹುದಾದ ಸಾಧ್ಯತೆ ಇದ್ದಿರುವುದರಿಂದ ತಪ್ಪು ಕೊರಗ ಎಂಬ ಹೆಸರು ಬಂದಿರಬಹುದು. ಹಾಗೆಯೇ ಪುರುಷರು ಧರಿಸುವ ಕಿವಿ ಆಭರಣಕ್ಕೆ ಒಂಟಿ ಎಂಬ ಹೆಸರಿದೆ. ಈ ಕೊರಗರಲ್ಲಿ ಪುರುಷರು ಒಂಟಿ(ಚಿನ್ನದ್ದಲ್ಲ) ಧರಿಸುತ್ತಿದ್ದುದರಿಂದಾಗಿ ಈ ಹೆಸರು ಬಂದಿರಬಹುದು. ತಪ್ಪು ಕೊರಗರಲ್ಲಿ ಮುಖ್ಯವಾಗಿ ಐದು ಬಳಿಗಳು ಕಂಡುಬರುತ್ತವೆ.

೧. ಪಾಡ್ದನ್ನಾರ್/ಬಂಗೇರಣ್ಣಾರ್

೨. ತಡ್ಪೆನ್ನಾರ್/ಸಾಲ್ಯಾಯನ್ನಾರ್

೩. ಸಿರೆಗೆನ್ನಾರ್

೪. ಮುಂಕೆನ್ನಾರ್/ಸಾಲ್ಯೆಟನ್ನಾರ್/ವುಂಚರನ್ನಾರ್

೫. ಕುಂದಾರನ್ನಾರ್ ಎಂಬುದಾಗಿ. ಐದು ಬಳಿಗಳಿದ್ದರೂ ಕೆಲವರ ಅಭಿಪ್ರಾಯದಂತೆ ನಾಲ್ಕು ಬಳಿಗಳು. ಕುಂದಾರನ್ನಾರ್ ಬಳಿ ನಂತರದಲ್ಲಿ ಸೇರ್ಪಡೆಯಾದುದು.

ಈ ತಪ್ಪು ಕೊರಗರು ತಮ್ಮ ಮೂಲ ಕಸುಬನ್ನು ನೆಚ್ಚಿಕೊಂಡಿಲ್ಲ. ಮಾತೃಭಾಷೆ ಕೊರಗ ಆದರೂ ಇತ್ತೀಚಿನವರೆಲ್ಲ ತುಳು ಭಾಷೆಯಲ್ಲಿಯೇ ವ್ಯವಹರಿಸುತ್ತಾರೆ. ಕೊರಗ ತನಿಯ ಅಥವಾ ಕೊರಗಜ್ಜ ಮತ್ತು ಮಂಜ ಅಥವಾ ಮಂಜದಪ್ಪ ಇವರ ಮುಖ್ಯ ಆರಾಧನಾ ದೈವಗಳು ಎಂದು ಗುಣಪಾಲ ಶೆಟ್ಟಿ ಹೇಳುತ್ತಾರೆ.(ಪು.೧೧೫, ೨೦೧೨)

ಉಡುಪಿ ಜಿಲ್ಲೆಯ ಕಾರ್ಕಳದ ಪೂರ್ವಭಾಗ, ಉಡುಪಿಯ ಉತ್ತರ ಭಾಗ ಮತ್ತು ಕುಂದಾಪುರದ ಕೆಲವು ಪ್ರದೇಶಗಳಲ್ಲಿ ಕೊರಗರನ್ನು ಸೊಪ್ಪು ಕೊರಗರು ಅಥವಾ ಮೂಡು ಕೊರಗರು ಎಂದು ಕರೆಯಲಾಗುತ್ತದೆ. ಮೂಡುಕೊರಗರಲ್ಲಿ ಪ್ರಮುಖವಾಗಿ

೧. ಬಿಜಿತ್ತಾರ್ ೨. ಮುಂಕತ್ತಾರ್

೩. ಬಾಜೆಲ್‌ತ್ತಾರ್ ೪. ಮುಂಕತ್ತಾರ್

೫. ಬಾಜೆಲ್‌ತ್ತಾರ್ ೬. ಕರ್ನತ್ತಾರ್ ಹರ್ಕಜತ್ತಾರ್ ಮತ್ತು

೧. ಮೂಳೆತ್ತಾರೆ ಅಥವಾ ಎಳ್‌ಕಡತ್ತಾರ್

ಎಂಬ ಆರು ಬಳಿಗಳಿರುವುದನ್ನು ಗುಣಪಾಲ ಶೆಟ್ಟಿ ಅವರು ಉಲ್ಲೇಖಿಸಿದ್ದಾರೆ(ಪು. ೧೨೨, ೨೦೧೨). ಇವರಲ್ಲಿ ಕೊರಗಜ್ಜ ಮತ್ತು ನೀಚ ಎಂಬ ಎರಡು ದೈವಗಳಿದ್ದು ಪ್ರತ್ಯೇಕವಾಗಿ ಆರಾಧಿಸುವ ಪದ್ಧತಿ ಇದೆ. ಸೊಪ್ಪು ಕೊರಗರು ಪಶ್ಚಿಮಘಟ್ಟದ ಬುಡದಲ್ಲೇ (ಬದಿಯಲ್ಲೇ) ವಾಸವಾಗಿದ್ದಾರೆ. ಇವರನ್ನು ಕಾಡು ಕೊರಗರು ಎಂದೂ ಕರೆಯುತ್ತಾರೆ.

ಕರಾವಳಿ ಪ್ರದೇಶದ ಉತ್ತರ ಕನ್ನಡ ಜಿಲ್ಲೆ, ಕುಂದಾಪುರದ ಕೆಲವು ಪ್ರದೇಶಗಳಲ್ಲಿ ಮತ್ತು ಆಂಶಿಕವಾಗಿ ಶಿವಮೊಗ್ಗ ಜಿಲ್ಲೆ ಅಂಚಿನಲ್ಲಿ ಜೀವನ ಮಾಡುತ್ತಿರುವ ಕೊರಗರನ್ನು ಕಪ್ಪಡ ಕೊರಗರು ಅಥವಾ ನಾಡಾ ಕೊರಗರು ಎಂದು ಕರೆಯುತ್ತಾರೆ. ಇವರು ಕೊರಗ ಭಾಷೆಯನ್ನು ಉಳಿಸಿಕೊಂಡಿದ್ದಾರೆ. ಮೂಲತಃ ಕುಂದಾಪುರ ಪ್ರದೇಶದವರಾದ ಕಪ್ಪಡ ಕೊರಗರು ಜೀವನ ನಿಮಿತ್ತ ಉತ್ತರ ಕನ್ನಡ, ಶಿವಮೊಗ್ಗ ಜಿಲ್ಲೆಗಳಿಗೆ ವಲಸೆ ಹೋಗಿರುವ ಸಾಧ್ಯತೆಯಿದೆ.

ಇಂದಿರಾ ಹೆಗ್ಗಡೆಯವರ ಪ್ರಕಾರ ಕಪ್ಪಡ ಕೊರಗರು ಅಂದರೆ ಮಾಸಿದ ಬಟ್ಟೆ ಉಡುವವರು ಅಥವಾ ಕಪ್ಪು ಬಣ್ಣದವರು ಎಂದಾಗುತ್ತದೆ. (ಪು.೩, ೨೦೦೭) ಕಪ್ಪಡ ಕೊರಗರಲ್ಲಿ ಸುಮಾರು ಒಂಬತ್ತು ಬಳಿಗಳಿವೆ ಎಂದು ಗುಣಪಾಲ ಶೆಟ್ಟಿಯವರ ಅಭಿಪ್ರಾಯ.

| | | |
|---|---|---|
| ಕುಳಾರ್ | ಹಾತಾರ್ | ಕೋನಾರ್ |
| ಕುಟ್ಟಾರ್/ಗುಟಾರ್ | ಬಜಾರು/ಕಡ್ಬಾರ್ | ಬಿಜಿಗಾರ್/ಗುಜಗಾರ್ |
| ತಡಿಯಾರ್ | ಎಲ್ಕಿಜಿಯರ್/ಕಂಚುಗಾರ್ | |

ಹೀಗೆ ಅತೀ ಹೆಚ್ಚು ಬಳಿಗಳು ಕಪ್ಪಡೆ ಕೊರಗರಲ್ಲಿ ಕಂಡುಬರುತ್ತದೆ. ಹೈಗುಳಿ ಮತ್ತು ಅಜ್ಜನನ್ನು ಆರಾಧಿಸುತ್ತಾರೆ. ವಿಶೇಷವಾಗಿ ಕಪ್ಪಡೆ ಕೊರಗರಲ್ಲಿ ನಾಗಾರಾಧನೆ ಪ್ರಚಲಿತದಲ್ಲಿದೆ.

**ಕೊರಗರ ಮಾತೃಮೂಲ ಕುಟುಂಬ ಪದ್ಧತಿ**

ನಮ್ಮ ಆದಿಮ ಸಮಾಜ ಮಾತೃಪ್ರಧಾನವಾದುದು ಎಂಬುದನ್ನು ಅನೇಕ ಸಂಶೋಧನೆಗಳು ದೃಢಪಡಿಸಿವೆ. ಕುಟುಂಬದ ಸಂತಾನವನ್ನು ಅಭಿವೃದ್ಧಿಪಡಿಸುವ ಮೂಲ ತಾಯಿಯಾದುದ ರಿಂದಾಗಿಯೇ ತಾಯಿಗೆ ಅಗ್ರಸ್ಥಾನವನ್ನು ನೀಡಲಾಗಿತ್ತು. ಆ ಮೂಲಕವೇ ಮಾತೃಮೂಲಕ್ಕೆ ಹೆಚ್ಚು ಪ್ರಾಶಸ್ತ್ಯವಿತ್ತು. ಕಾಲಕ್ರಮೇಣ ಸ್ತ್ರೀಯನ್ನು ಎರಡನೇ ಪ್ರಜೆಯನ್ನಾಗಿಸಿತು. ಪುರುಷ ಪ್ರಧಾನ ಸಮಾಜ. ದೈಹಿಕ ಬಲಿಷ್ಠತೆಯನ್ನೇ ನೆಪ ಮಾಡಿಕೊಂಡ ಪುರುಷ ಸ್ತ್ರೀಯನ್ನು ತನ್ನ ಅವಲಂಬಿತಳನ್ನಾಗಿಸಿಕೊಂಡು ಬಂದಿರುವುದು ದುರಂತವೇ ಸರಿ. ಕರಾವಳಿ ಕರ್ನಾಟಕದಲ್ಲಿರುವ ಬಹುತೇಕ ಮೂಲನಿವಾಸಿ ಸಮುದಾಯಗಳಲ್ಲಿ ಮಾತೃಮೂಲೀಯ ಕುಟುಂಬ ಪದ್ಧತಿಯನ್ನು ಕಾಣುತ್ತೇವೆ. ಇತ್ತೀಚಿನ ದಿನಗಳಲ್ಲಿ ಮಾತೃಮೂಲೀಯ ಕುಟುಂಬ ವ್ಯವಸ್ಥೆಯಲ್ಲಿಯೂ ಅನೇಕ ರೀತಿಯ ಬದಲಾವಣೆಯಾಗಿರುವುದನ್ನು ನಾವು ಒಪ್ಪಿಕೊಳ್ಳ ಬೇಕಾಗುತ್ತದೆ. ಕರಾವಳಿ ಕರ್ನಾಟಕದ ಮೂಲನಿವಾಸಿಗಳು, ಬುಡಕಟ್ಟು ಸಮುದಾಯಗಳಾದ ಕೊರಗ, ಮಲೆಕುಡಿಯ ಮತ್ತು ಇತರೆ ಸಮುದಾಯಗಳಾದ ಬೈರ, ಪರವ, ಮನ್ಸ, ಮುಂಡಾಲ, ಸಮಗಾರ, ಮೊಗವೀರ, ಬಿಲ್ಲವ, ದೇವಾಡಿಗ, ಮಡಿವಾಳ, ಕುಲಾಲ, ಗಾಣಿಗ, ಬಂಟ, ಸಮಗಾರ, ನಾಯರ್ ಮತ್ತು ತುಳು ಜೈನರಲ್ಲಿ ಮಾತೃಮೂಲೀಯ ಕುಟುಂಬ ವ್ಯವಸ್ಥೆಗಳಿರುವುದನ್ನು ಕಾಣಬಹುದು.

ಆದಿಮ ಬುಡಕಟ್ಟು ಸಮುದಾಯದ ಕೊರಗರಲ್ಲಿ ಮಹಿಳೆಯರು ಸ್ವತಂತ್ರ ಸ್ಥಾನಮಾನಗಳನ್ನು ಹೊಂದಿದ್ದಾರೆ. ಕುಟುಂಬ ನಿರ್ವಹಣೆಯ ಜವಾಬ್ದಾರಿಯನ್ನು ಕೊರಗ

ಮಹಿಳೆಯರೇ ನಿರ್ವಹಿಸುವುದರಿಂದ ಸಹಜವಾಗಿ ಅಧಿಕಾರ ದೊರೆಯುತ್ತದೆ. ಮೂಲತಃ ಸ್ತ್ರೀ-ಪುರುಷರಾದಿಯಾಗಿ ಕೊರಗರೆಲ್ಲರೂ ಶ್ರಮಜೀವಿಗಳು; ಅತ್ಯಂತ ಕಠಿಣತಮ ಜೀವನವನ್ನು ನಡೆಸಿಕೊಂಡು ಬಂದವರು. ಕೊರಗು ಮಹಿಳೆಯರು ಕ್ರಿಯಾಶೀಲರಾಗಿದ್ದು, ಜವಾಬ್ದಾರಿಯುತ ಜೀವನ ನಡೆಸುವಲ್ಲಿ ಅತ್ಯಂತ ಮುತುವರ್ಜಿ ವಹಿಸುತ್ತಾರೆ. ಕೊರಗರಂತೆಯೇ ಕರಾವಳಿ ಕರ್ನಾಟಕದ ಬಹುತೇಕ ಸಮುದಾಯಗಳಲ್ಲಿ ಮಹಿಳೆಯರು ಬುದ್ಧಿಮತ್ತೆಯಲ್ಲಿ ನಯ, ನಾಜೂಕುಗಳಿಗೆ ಹೆಸರುವಾಸಿಯಾಗಿರುವುದನ್ನು ಇಲ್ಲಿ ಸ್ಮರಿಸಬಹುದು. ಕೊರಗಲ್ಲಿ ಮಾತೃ ಮೂಲೀಯ ಕುಟುಂಬ ವ್ಯವಸ್ಥೆ ಇಂದಿಗೂ ದೃಢವಾಗಿರುವುದರಿಂದ 'ವಿಧವೆ' ಪದಪ್ರಯೋಗ ಇಲ್ಲ. ವಿಧವೆಯರ ಪುನರ್‌ವಿವಾಹಕ್ಕೆ ಕೊರಗರಲ್ಲಿ ನಿಷೇಧವಿಲ್ಲ. ಅಧೀನತೆಗೆ ಕೊರಗರಲ್ಲಿ ಸ್ಥಳಾವಕಾಶವಿಲ್ಲ. ಎಲ್ಲರೂ ಸರಿಸಮಾನರು; ಮದುವೆಯಾಗುವ ಸಂದರ್ಭದಲ್ಲಿ ವರದಕ್ಷಿಣೆ ಕೊಡುವ ಪದ್ಧತಿಯಿಲ್ಲ. ಬದಲಾಗಿ 'ತೆರ' ಅಥವಾ 'ಸ್ತ್ರೀಧನ' ಕೊಡುವ ಸಂಪ್ರದಾಯ ವಿರುವುದನ್ನು ಗಮನಿಸಬಹುದಾಗಿದೆ.

ಕೊರಗರಲ್ಲಿ ತಾಯಿಯೊಬ್ಬಳು ಹೆಣ್ಣು-ಗಂಡು ಮಕ್ಕಳೆಲ್ಲರೂ ತನ್ನ ತಾಯಿಯ ಬಳಿಯನ್ನು ಹೊಂದಿರುತ್ತಾರೆ. ಆಸ್ತಿಯ ಹಕ್ಕು, ಉತ್ತರಾಧಿಕಾರ, ವಂಶಪಾರಂಪರ್ಯ ಮುಂತಾದವುಗಳು ಮಾತೃವಂಶೀಯತೆಯನ್ನು ನಿರ್ಧರಿಸುತ್ತವೆ. ಮಗನಿಗೆ ಅನುಭೋಗ್ಯದ ಅಧಿಕಾರವಿರುತ್ತದೆಯೇ ಹೊರತು ಪರಭಾರೆ ಮಾಡುವ ಅಧಿಕಾರ ಇರುವುದಿಲ್ಲ. ಕುಟುಂಬದ ಹಿರಿಯ ಮಹಿಳೆಗೆ ಅತ್ಯಂತ ಮಹತ್ವದ ಗೌರವಾದರಗಳು ದೊರೆಯುತ್ತವೆ. ಸಭೆ ಸಮಾರಂಭಗಳಲ್ಲಿ, ಪೂಜೆ ಪುನಸ್ಕಾರಗಳಲ್ಲಿ, ಸಂಪ್ರದಾಯ ಆಚರಣೆಗಳಲ್ಲಿ ಹಿರಿಯ ಮಹಿಳೆಗೆ ಗೌರವ-ಮನ್ನಣೆ ದೊರೆಯುತ್ತದೆ.

ಇಂದಿನ ಕೊರಗ ಕುಟುಂಬಗಳಲ್ಲಿನ ಮಾತೃಪ್ರಧಾನ ವ್ಯವಸ್ಥೆಯಲ್ಲಿ ಸಣ್ಣಪುಟ್ಟ ಬದಲಾವಣೆಗಳಾಗಿವೆ ನಿಜ. ಆದರೆ ಸಂಪೂರ್ಣವಾಗಿ ಮರೆಯಾಗಿಲ್ಲ ಎನ್ನುವುದು ಸಮಾಧಾನಕರ ಸಂಗತಿ. ದಿನೇ ದಿನೇ ಬದಲಾವಣೆಯನ್ನು ಕಾಣುತ್ತಿರುವ ಇಂದಿನ ಸಮಾಜದಲ್ಲಿ ಮಾತೃಮೂಲ ಕುಟುಂಬ ಪದ್ಧತಿಯೂ ಬದಲಾವಣೆಗೆ ಒಳಗಾಗುತ್ತಿರುವುದನ್ನು ಗಮನಿಸಬಹುದು. ಕರಾವಳಿ ಕರ್ನಾಟಕದ ಅನೇಕ ಸಮುದಾಯಗಳಲ್ಲಿನ ಮಾತೃಮೂಲ ಕುಟುಂಬ ವ್ಯವಸ್ಥೆ ಹೆಸರಿಗೆ ಮಾತ್ರವಿದ್ದು, ಆ ಕುಟುಂಬದ ಒಳಹೊಕ್ಕು ಸೂಕ್ಷ್ಮವಾಗಿ ಗಮನಿಸಿದಾಗ ವ್ಯತಿರಿಕ್ತ ಫಲಿತಾಂಶ ನೀಡುತ್ತದೆ. ಕಾರಣ ಅತ್ಯಂತ ವೇಗ ಪಡೆದಿರುವ ಬದಲಾವಣೆ, ತಂತ್ರಜ್ಞಾನ ಆರ್ಥಿಕ ಸ್ಥಿತಿಗತಿ, ಮಾಧ್ಯಮ ಮತ್ತು ಇನ್ನಿತರೆ ಕಾರಣಗಳಿಂದ

ಯುವಜನತೆ ಪರಂಪರೆಯಿಂದ ಬಂದವೆಲ್ಲವನ್ನೂ ಮೂಢನಂಬಿಕೆ ಎಂದು ದೂರೀಕರಿಸುತ್ತಿರುವುದನ್ನು ಗಮನಿಸಬೇಕು. ಈ ಹಿನ್ನೆಲೆಯಲ್ಲಿ ಕೊರಗರ ಕೆಲವು ಸಂಘಟನೆಗಳು ಮಾತೃಮೂಲೀಯ ಕುಟುಂಬ ಪದ್ಧತಿಯನ್ನು ಉಳಿಸಿಕೊಂಡು ಹೋಗುವ ನಿಟ್ಟಿನಲ್ಲಿ ಈಗಾಗಲೇ ಕಾರ್ಯೋನ್ಮುಖವಾಗಿರುವುದು ಗಮನಾರ್ಹ. ಒಟ್ಟಾರೆಯಾಗಿ ಕೊರಗ ಮಹಿಳೆಯರು ಸ್ವತಂತ್ರ ಸ್ಥಾನಮಾನ ಹೊಂದಿರುವುದನ್ನು ಗಮನಿಸಬಹುದು. ಸಮುದಾಯದ ಹುಟ್ಟುವಳಿ ಇಲ್ಲಿ ನಗಣ್ಯ. ಆದರೆ ಕುಟುಂಬದ ನಿರ್ವಹಣೆ, ಜವಾಬ್ದಾರಿಯನ್ನು ಮಹಿಳೆಯರೇ ನಿರ್ವಹಿಸುತ್ತಿರುವುದರಿಂದ ಕುಟುಂಬದೊಳಗಿನ ಆಂತರಿಕ ವ್ಯಾಪಾರ ವ್ಯವಹಾರಗಳ ಜವಾಬ್ದಾರಿ ಮಹಿಳೆಯರಿಗೆ ಬಂದಿರುವುದು ಕಂಡುಬರುತ್ತದೆ. ಇಲ್ಲಿ ಯಾವುದೇ ರೀತಿಯ ಅಧೀನತೆ, ಮೇಲುಕೀಳುಗಳ ಸಂಘರ್ಷವಿಲ್ಲ.

**ಸಮೀಕ್ಷೆಗೊಳಪಟ್ಟ ದಕ್ಷಿಣ ಕನ್ನಡ ಹಾಗೂ ಉಡುಪಿ ಜಿಲ್ಲೆಯಲ್ಲಿನ ತಾಲೂಕುವಾರು ಗ್ರಾಮಪಂಚಾಯತ್‌ಗಳಲ್ಲಿ ಕೊರಗ ಸಮುದಾಯವು ವಾಸವಾಗಿರುವ ನೆಲೆಗಳು**

**೧. ಮಂಗಳೂರು ತಾಲೂಕು**

| ಕ್ರ.ಸಂ. | ಗ್ರಾಮ ಪಂಚಾಯತ್ ಹೆಸರು | ಕುಟುಂಬಗಳು |
|---|---|---|
| ೧ | ಅಡ್ಯಾರು | ೧ |
| ೨ | ಅಬ್ಲಮೊಗರು | ೪ |
| ೩ | ಬೆಳುವಾಯಿ | ೮ |
| ೪ | ಬಜ್ಪೆ | ೧೧ |
| ೫ | ಬಾಳ | ೧ |
| ೬ | ಬಳ್ಕುಜೆ | ೨೨ |
| ೭ | ಬೋಳಿಯಾರು | ೪ |
| ೮ | ಗುರುಪುರ | ೯ |
| ೯ | ಗಂಜಿಮಠ | ೧೭ |
| ೧೦ | ಹೊಸಬೆಟ್ಟು | ೨೨ |
| ೧೧ | ಹಳೆಯಂಗಡಿ | ೩ |
| ೧೨ | ಐಕಳ | ೧೩ |
| ೧೩ | ಜೋಕಟ್ಟೆ | ೨ |

| | | |
|---|---|---|
| ೧೪ | ಕಲ್ಲಮುಡ್ಕೂರು | ೧೧ |
| ೧೫ | ಕಂದಾವರ | ೧೨ |
| ೧೬ | ಕಿಲ್ಪಾಡಿ | ೨೨ |
| ೧೭ | ಕೋಟೆಕಾರು | ೧೫ |
| ೧೮ | ಕುಪ್ಪದವು | ೧ |
| ೧೯ | ಮಂಜನಾಡಿ | ೧೦ |
| ೨೦ | ಮುನ್ನಬೆಟ್ಟು | ೫೨ |
| ೨೧ | ಮಚ್ಚೂರು | ೪ |
| ೨೨ | ಮೂಡುಪಡ್ಡೆ | ೨೮ |
| ೨೩ | ನೆಲ್ಲಕಾರು | ೭ |
| ೨೪ | ನೀರುಮಾರ್ಗ | ೧ |
| ೨೫ | ಪಾಲಡ್ಕ | ೧೧ |
| ೨೬ | ಪುತ್ತಿಗೆ | ೨ |
| ೨೭ | ಪಡುಪೆರಾರು | ೧೧ |
| ೨೮ | ಪಾವೂರು | ೧ |
| ೨೯ | ಪೆರ್ಮುದೆ | ೬ |
| ೩೦ | ಶಿರ್ತಾಡಿ | ೧ |
| ೩೧ | ಸೂರಿಂಜೆ | ೫ |
| ೩೨ | ತೆಂಕಮಿಜಾರು | ೨೬ |
| ೩೩ | ಉಳಾಯಿಬೆಟ್ಟು | ೧ |
| ೩೪ | ಎಡಪದವು | ೬ |
| ೩೫ | ಎಕ್ಕಾರು | ೨೫ |
| ೩೬ | ಚೇಳ್ಯಾರು | ೨೫ |
| ೩೭ | ಕಿನ್ಯಾ | ೧ |
| ೩೮ | ದರೆಗುಡ್ಡೆ | ೧೨ |
| ೩೯ | ಪಡುಪಣಂಬೂರು | ೨೧ |
| ೪೦ | ಕೆಮ್ರಾಲ್ | ೯ |

| | | |
|---|---|---|
| ೪೧ | ಕಿನ್ನಿಗೋಳಿ | ೩೩ |
| ೪೨ | ಕೋಣಾಜೆ | ೧ |
| ೪೩ | ಮಳವೂರು | ೨೬ |
| | ಒಟ್ಟು | ೫೦೩ |

**೨. ಬಂಟ್ವಾಳ ತಾಲೂಕು**

| ಕ್ರ.ಸಂ. | ಗ್ರಾಮ ಪಂಚಾಯತ್ ಹೆಸರು | ಕುಟುಂಬಗಳು |
|---|---|---|
| ೧ | ಅಳಿಕೆ | ೧ |
| ೨ | ಅಮ್ಟಾಡಿ | ೪ |
| ೩ | ಅನಂತಾಡಿ | ೩ |
| ೪ | ಬಡಗಕಜೆಕ್ಕಾರು | ೧ |
| ೫ | ಬಾಳೆಪುಣಿ | ೨೨ |
| ೬ | ಬಾಳ್ತಿಲ | ೨ |
| ೭ | ಚೆನ್ನೈತೋಡಿ | ೩ |
| ೮ | ಗೋಳ್ತಮಜಲು | ೩ |
| ೯ | ಇಡ್ಕಿದು | ೧ |
| ೧೦ | ಇರಾ | ೪ |
| ೧೧ | ಕನ್ಯಾನ | ೬ |
| ೧೨ | ಕರೋಪಾಡಿ | ೯ |
| ೧೩ | ಕಾವಳಮೂಡೂರು | ೧ |
| ೧೪ | ಕಾವಳಪಡೂರು | ೨ |
| ೧೫ | ಕೇಪು | ೧೧ |
| ೧೬ | ಕೊಳ್ನಾಡು | ೪ |
| ೧೭ | ಕುಕ್ಕಿಪಾಡಿ | ೯ |
| ೧೮ | ಮಂಚಿ | ೨ |
| ೧೯ | ವೂಣಿ | ೬ |
| ೨೦ | ಮೇರಮಜಲು | ೪ |
| ೨೧ | ನರಿಕೊಂಬು | ೫ |

| | | |
|---|---|---|
| ೨೨ | ನರಿಂಗಾನ | ೧೦ |
| ೨೩ | ಪಂಜಿಕಲ್ಲು | ೮ |
| ೨೪ | ಪೆರುವಾಯಿ | ೬ |
| ೨೫ | ಪಿಲಾತಬೆಟ್ಟು | ೯ |
| ೨೬ | ಪುದು | ೫ |
| ೨೭ | ಪುಣಚ | ೬ |
| ೨೮ | ರಾಯಿ | ೨ |
| ೨೯ | ಸಜಿಪಮೂಡ | ೩ |
| ೩೦ | ಸರಪಾಡಿ | ೬ |
| ೩೧ | ತುಂಬೆ | ೧ |
| ೩೨ | ಉಳಿ | ೩ |
| ೩೩ | ವೀರಕಂಭ | ೧೬ |
| ೩೪ | ವಿಟ್ಲ | ೭ |
| ೩೫ | ವಿಟ್ಲಪಡ್ನೂರು | ೩ |
| | ಒಟ್ಟು | ೧೮೮ |

೩. ಪುತ್ತೂರು

| ಕ್ರ.ಸಂ. | ಗ್ರಾಮ ಪಂಚಾಯತ್ ಹೆಸರು | ಕುಟುಂಬಗಳು |
|---|---|---|
| ೧ | ಅಲಂಕಾರು | ೧ |
| ೨ | ಅರಿಯಡ್ಕ | ೬ |
| ೩ | ಆರ್ಯಾಪು | ೬ |
| ೪ | ಬಜತ್ತೂರು | ೧೨ |
| ೫ | ಬನ್ನೂರು | ೨ |
| ೬ | ಬಲ್ನಾಡು | ೧ |
| ೭ | ಬೆಟ್ಟಂಪಾಡಿ | ೮ |
| ೮ | ಬಿಳಿನೆಲೆ | ೧೨ |
| ೯ | ಬೆಳಂದೂರು | ೨ |
| ೧೦ | ಕಡಬ | ೧ |

| | | |
|---|---|---|
| ೧೧ | ಕಬಕ | ೨ |
| ೧೨ | ಕೆದಂಬಾಡಿ | ೮ |
| ೧೩ | ಕೋಡಿಂಬಾಡಿ | ೯ |
| ೧೪ | ಉಪ್ಪಿನಂಗಡಿ | ೨ |
| ೧೫ | ಕೌಕ್ರಾಡಿ | ೧ |
| ೧೬ | ಮುಂಡೂರು | ೬ |
| ೧೭ | ನರಿಮೊಗ್ರು | ೩ |
| ೧೮ | ನೆಕ್ಕಿಲಾಡಿ | ೧ |
| ೧೯ | ನೆಟ್ಟಣಿಗೆ ಮುಡ್ನೂರು | ೧ |
| ೨೦ | ನೆಲ್ಯಾಡಿ | ೧ |
| ೨೧ | ಒಳಮೊಗ್ರು | ೫ |
| ೨೨ | ಪಾಣಾಜೆ | ೨ |
| ೨೩ | ಪೆರಾಬೆ | ೫ |
| ೨೪ | ರಾಮಕುಂಜ | ೨ |
| ೨೫ | ಸವಣೂರು | ೧ |
| | ಒಟ್ಟು | ೧೦೦ |

**೪. ಬೆಳ್ತಂಗಡಿ ತಾಲೂಕು**

| ಕ್ರ.ಸಂ. | ಗ್ರಾಮ ಪಂಚಾಯತ್ ಹೆಸರು | ಕುಟುಂಬಗಳು |
|---|---|---|
| ೧ | ಅಡಿಂಜೆ | ೭ |
| ೨ | ಅರಂಬೋಡಿ | ೨ |
| ೩ | ಬಾರ್ಯ | ೧ |
| ೪ | ಬೆಳಾಲು | ೨ |
| ೫ | ಚಾರ್ಮಾಡಿ | ೮ |
| ೬ | ಧರ್ಮಸ್ಥಳ | ೧೩ |
| ೭ | ಹೊಸಂಗಡಿ | ೧ |
| ೮ | ಇದಬೆಟ್ಟು | ೫ |

| ಕ್ರಸಂ. | ಗ್ರಾಮ ಪಂಚಾಯತ್ ಹೆಸರು | ಕುಟುಂಬಗಳು |
|---|---|---|
| ೯ | ಕಳಿಯ | ೧ |
| ೧೦ | ಕಣಿಯೂರು | ೪ |
| ೧೧ | ಕೊಕ್ಕಡ | ೧ |
| ೧೨ | ಕುವೆಟ್ಟು | ೧ |
| ೧೩ | ಮಚ್ಚಿನ | ೨ |
| ೧೪ | ಮೇಲಂತಬೆಟ್ಟು | ೧೫ |
| ೧೫ | ಮುಂಡಾಜೆ | ೨ |
| ೧೬ | ನಡ | ೧ |
| ೧೭ | ನಾರಾವಿ | ೧೧ |
| ೧೮ | ಕಲ್ಮಂಜ | ೧೬ |
| ೧೯ | ನಿಡ್ಲೆ | ೧ |
| ೨೦ | ಪಡಂಗಡಿ | ೧ |
| ೨೧ | ಶಿರ್ಲಾರು | ೫ |
| ೨೨ | ಉಜಿರೆ | ೧೨ |
| ೨೩ | ಬೆಳ್ತಂಗಡಿ | ೧ |
| | **ಒಟ್ಟು** | **೧೧೩** |

**೫. ಸುಳ್ಯ ತಾಲೂಕು**

| ಕ್ರಸಂ. | ಗ್ರಾಮ ಪಂಚಾಯತ್ ಹೆಸರು | ಕುಟುಂಬಗಳು |
|---|---|---|
| ೧ | ಅಮರಮುಡ್ನೂರು | ೧ |
| ೨ | ಬೆಳ್ಳಾರೆ | ೯ |
| ೩ | ದೇವಚಳ್ಳ | ೧ |
| ೪ | ಕೊಲ್ಲಮೊಗ್ರು | ೩ |
| ೫ | ನೆಲ್ಲೂರು ಕೆಮ್ರಾಜೆ | ೪ |
| ೬ | ಪಂಜ | ೧೩ |
| ೭ | ಸುಬ್ರಹ್ಮಣ್ಯ | ೧ |
| | **ಒಟ್ಟು** | **೩೨** |

**ಕೊರಗರ ಸಮುದಾಯದ ಜನಸಂಖ್ಯೆ**

ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು, ಬಂಟ್ವಾಳ, ಪುತ್ತೂರು, ಬೆಳ್ತಂಗಡಿ ಹಾಗೂ ಸುಳ್ಯ ತಾಲೂಕುಗಳಲ್ಲಿ ಗ್ರಾಮ ಪಂಚಾಯತ್‌ವಾರು ವಾಸಿಸುವ ಕೊರಗರ ಕೌಟುಂಬಿಕ ಸಮೀಕ್ಷೆಯಿಂದ ತಿಳಿದುಬಂದ ಜನಸಂಖ್ಯೆಯ ವಿವರ ಈ ಕೆಳಗಿನಂತಿದೆ.

**ಕೋಷ್ಟಕ ೧. ಸಮೀಕ್ಷೆಗೊಳಪಟ್ಟ ದಕ್ಷಿಣ ಕನ್ನಡ ಜಿಲ್ಲೆಯ ಕೊರಗ ಸಮುದಾಯದ ತಾಲೂಕುವಾರು ಕುಟುಂಬವಾರು, ಲಿಂಗವಾರು ಜನಸಂಖ್ಯೆ ಪ್ರಮಾಣ**

| ಕ್ರಸಂ. | ತಾಲೂಕುಗಳು | ಕುಟುಂಬಗಳು | ಜನಸಂಖ್ಯೆ | | |
|---|---|---|---|---|---|
| | | | ಗಂಡು | ಹೆಣ್ಣು | ಒಟ್ಟು |
| ೧ | ಮಂಗಳೂರು | ೫೦೩ | ೧೦೮೮ | ೧೧೧೪ | ೨೨೦೨ |
| ೨ | ಬಂಟ್ವಾಳ | ೧೮೭ | ೨೯೪ | ೨೭೮ | ೫೭೨ |
| ೩ | ಪುತ್ತೂರು | ೧೦೦ | ೨೦೬ | ೧೯೦ | ೩೯೬ |
| ೪ | ಬೆಳ್ತಂಗಡಿ | ೧೧೩ | ೧೯೫ | ೧೮೮ | ೩೮೩ |
| ೫ | ಸುಳ್ಯ | ೩೨ | ೬೧ | ೪೦ | ೧೦೧ |
| | **ಒಟ್ಟು** | **೯೩೫** | **೧೮೪೪** | **೧೮೧೦** | **೩೬೫೪** |

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನೆಲೆಸಿದ ಕೊರಗ ಸಮುದಾಯದ ಒಟ್ಟು ಕುಟುಂಬಗಳು ೯೩೫ ಇವೆ. ಒಟ್ಟು ಜನಸಂಖ್ಯೆಯು ೩೬೫೪ ಇದೆ. ಇದರಲ್ಲಿ ಪುರುಷರು ೧೮೪೪ (ಶೇ. ೫೧.೮೪) ಮಹಿಳೆಯರು ೧೮೧೦(ಶೇ. ೪೮.೧೯)ರಷ್ಟಿದ್ದಾರೆ. ತಾಲೂಕುವಾರು ನೋಡಿದಾಗ ಮಂಗಳೂರು ತಾಲೂಕಿನ ವ್ಯಾಪ್ತಿಯಲ್ಲಿ ೫೦೩ ಕೊರಗ ಕುಟುಂಬಗಳಿವೆ. ಈ ತಾಲೂಕಿನ ಒಟ್ಟು ಜನಸಂಖ್ಯೆಯು ೨೨೦೨ ಇದೆ. ಇದರಲ್ಲಿ ಲಿಂಗವಾರು ಗಮನಿಸಿದಾಗ ಪುರುಷರು (೧೦೮೮), ಮಹಿಳೆಯರು (೧೧೧೪)ರಷ್ಟಿದ್ದಾರೆ. ಜಿಲ್ಲೆಯ ಒಟ್ಟು ಜನಸಂಖ್ಯೆಗೆ ಹೋಲಿಸಿದರೆ ಈ ತಾಲೂಕಿನಲ್ಲಿ ನೆಲೆಸಿದ ಕೊರಗರ ಪ್ರಮಾಣವು ಶೇಕಡ ೫೪ರಷ್ಟಿದೆ. ಜಿಲ್ಲೆಯ ಕೊರಗರ ಒಟ್ಟು ಜನಸಂಖ್ಯೆಯಲ್ಲಿ ಅರ್ಧಕ್ಕಿಂತ ಹೆಚ್ಚಿನ ಪಾಲು ಇದೊಂದೇ ತಾಲೂಕಿನೊಳಗಿದೆ.

ಬಂಟ್ವಾಳ ತಾಲೂಕಿನ ವ್ಯಾಪ್ತಿಯಲ್ಲಿ ೧೮೭ ಕೊರಗ ಕುಟುಂಬಗಳಿವೆ. ಈ ತಾಲೂಕಿನ ಒಟ್ಟು ಜನಸಂಖ್ಯೆಯು ೫೭೨ ಇದೆ. ಇದರಲ್ಲಿ ಪುರುಷರು ೨೯೪, ಮಹಿಳೆಯರು ೨೭೮ ರಷ್ಟಿದ್ದಾರೆ. ಜಿಲ್ಲೆಯ ಒಟ್ಟು ಜನಸಂಖ್ಯೆಗೆ ಹೋಲಿಸಿದರೆ ಈ ತಾಲೂಕಿನಲ್ಲಿ

ನೆಲೆಸಿದ ಕೊರಗರ ಪ್ರಮಾಣವು ಶೇಕಡ ೨೦ರಷ್ಟಿದೆ. ಜಿಲ್ಲೆಯ ಕೊರಗರು ಅತ್ಯಂತ ಕಡಿಮೆ ಪ್ರಮಾಣದಲ್ಲಿ ಈ ತಾಲೂಕಿನಲ್ಲಿ ನೆಲೆಸಿದ್ದಾರೆ.

ಪುತ್ತೂರು ತಾಲೂಕಿನ ವ್ಯಾಪ್ತಿಯಲ್ಲಿ ೧೦೦ ಕೊರಗ ಕುಟುಂಬಗಳಿವೆ. ಈ ತಾಲೂಕಿನ ಕೊರಗರ ಒಟ್ಟು ಜನಸಂಖ್ಯೆಯು ೩೯೬ ಇದೆ. ಇದರಲ್ಲಿ ಪುರುಷರು ೨೦೬, ಮಹಿಳೆಯರು ೧೯೦ರಷ್ಟಿದ್ದಾರೆ. ಜಿಲ್ಲೆಯ ಒಟ್ಟು ಜನಸಂಖ್ಯೆಗೆ ಹೋಲಿಸಿದರೆ ಈ ತಾಲೂಕಿನಲ್ಲಿ ನೆಲೆಸಿದ ಕೊರಗರ ಪ್ರಮಾಣವು ಶೇಕಡ ೧೧ರಷ್ಟಿದೆ.

ಬೆಳ್ತಂಗಡಿ ತಾಲೂಕಿನ ವ್ಯಾಪ್ತಿಯಲ್ಲಿ ೧೧೩ ಕೊರಗ ಕುಟುಂಬಗಳಿವೆ. ಈ ತಾಲೂಕಿನ ಒಟ್ಟು ಕೊರಗರ ಜನಸಂಖ್ಯೆಯು ೩೮೩ ಇದೆ. ಇದರಲ್ಲಿ ಪುರುಷರು ೧೯೫, ಮಹಿಳೆಯರು ೧೮೮ ರಷ್ಟಿದ್ದಾರೆ. ಜಿಲ್ಲೆಯ ಒಟ್ಟು ಜನಸಂಖ್ಯೆಗೆ ಹೋಲಿಸಿದರೆ ಈ ತಾಲೂಕಿನಲ್ಲಿ ನೆಲೆಸಿದ ಕೊರಗರ ಪ್ರಮಾಣವು ಶೇಕಡ ೧೨ರಷ್ಟಿದೆ. ಅಂದರೆ ದಕ್ಷಿಣ ಕನ್ನಡ ಜಿಲ್ಲಾ ವ್ಯಾಪ್ತಿಯಲ್ಲಿ ಈ ತಾಲೂಕಿನಲ್ಲಿಯೂ ಹೆಚ್ಚಿನ ಪ್ರಮಾಣದಲ್ಲಿ ಕೊರಗರು ನೆಲೆಸಿದ್ದಾರೆ.

ಸುಳ್ಯ ತಾಲೂಕಿನ ವ್ಯಾಪ್ತಿಯಲ್ಲಿ ೩೨ ಕೊರಗ ಕುಟುಂಬಗಳಿವೆ. ಈ ತಾಲೂಕಿನ ಒಟ್ಟು ಕೊರಗರ ಜನಸಂಖ್ಯೆಯು ೧೦೧ ಇದೆ. ಇದರಲ್ಲಿ ಪುರುಷರು ೬೧, ಮಹಿಳೆಯರು ೪೦ ರಷ್ಟಿದ್ದಾರೆ. ಜಿಲ್ಲೆಯ ಒಟ್ಟು ಜನಸಂಖ್ಯೆಗೆ ಹೋಲಿಸಿದರೆ ಈ ತಾಲೂಕಿನಲ್ಲಿ ನೆಲೆಸಿದ ಕೊರಗರ ಪ್ರಮಾಣವು ಶೇಕಡ ೩ರಷ್ಟಿದೆ. ಅಂದರೆ ದಕ್ಷಿಣ ಕನ್ನಡ ಜಿಲ್ಲಾ ವ್ಯಾಪ್ತಿಯ ಸುಳ್ಯ ತಾಲೂಕಿನಲ್ಲಿ ಅತ್ಯಂತ ಕಡಿಮೆ ಪ್ರಮಾಣದಲ್ಲಿ ಕೊರಗರು ನೆಲೆಸಿದ್ದಾರೆ.

**ವೃತ್ತಚಿತ್ರ ೧. ದಕ್ಷಿಣ ಕನ್ನಡ ಜಿಲ್ಲೆಯ ಕೊರಗ ಸಮುದಾಯದ ತಾಲೂಕುವಾರು ಮತ್ತು ಲಿಂಗವಾರು ಜನಸಂಖ್ಯಾ ಪ್ರಮಾಣ**



ದಕ್ಷಿಣ ಕನ್ನಡ ಜಿಲ್ಲೆಯ ಐದು ತಾಲೂಕುಗಳಲ್ಲಿ ೧೩೩ ಗ್ರಾಮ ಪಂಚಾಯಿತಿಯಲ್ಲಿನ ಇವರ ನೆಲೆಗಳಲ್ಲಿ ಕ್ಷೇತ್ರಕಾರ್ಯವನ್ನು ಮಾಡಲಾಗಿದೆ. ಇಲ್ಲಿ ತಿಳಿಸಿರುವ ನೆಲೆ ಮತ್ತು ಕುಟುಂಬಗಳ ಸಂಖ್ಯೆಯೇ ಅಂತಿಮವೆಂದು ಭಾವಿಸಬಾರದು. ಏಕೆಂದರೆ ಕ್ಷೇತ್ರಕಾರ್ಯ ಸಂದರ್ಭದಲ್ಲಿ ಎಷ್ಟೋ ಕೊರಗ ಸಮುದಾಯದ ಕುಟುಂಬಗಳು ಜೀವನೋಪಾಯಕ್ಕಾಗಿ ವಲಸೆ ಹೋಗಿರುವುದಾಗಿ ತಿಳಿದುಬಂದಿದೆ. ಆ ರೀತಿ ವಲಸೆ ಹೋದವರನ್ನು ಗಣತಿಗೆ ತೆಗೆದುಕೊಳ್ಳಲಾಗಿಲ್ಲ. ಕ್ಷೇತ್ರಕಾರ್ಯಕ್ಕೆ ನಮೂನಾ ವಿಧಾನವನ್ನು ಅಳವಡಿಸಿಕೊಂಡು ಹೋದ ಸಂದರ್ಭದಲ್ಲಿ ದೊರೆತ ಕೊರಗ ಕುಟುಂಬಗಳನ್ನು ಮಾತ್ರ ಗಣತಿಗೆ ತೆಗೆದುಕೊಳ್ಳಲಾಗಿದೆ. 

**ಕೊರಗ ಸಮುದಾಯದ ವಯೋಗುಂಪುವಾರು ಜನಸಂಖ್ಯೆ**

ಯಾವುದೇ ಸಮುದಾಯದ ಶೈಕ್ಷಣಿಕ ಹಾಗೂ ಆರ್ಥಿಕ ಅಂಶಗಳನ್ನು ಅರಿಯಲು ಆ ಸಮುದಾಯದ ಜನರ ವಯೋಮಾನಗಳನ್ನು ತಿಳಿಯುವುದು ಅತ್ಯಾವಶ್ಯಕವಾಗಿರುತ್ತದೆ. ಕೊರಗ ಸಮುದಾಯದ ಈ ಅಂಶಗಳನ್ನು ಅರಿಯಲು ಈ ಕೆಳಗಿನಂತೆ ೫ ಭಾಗಗಳಲ್ಲಿ ವಯೋಮಾನದ ವಿಂಗಡಣೆಯನ್ನು ಮಾಡಿಕೊಳ್ಳಲಾಗಿದೆ. ಮೊದಲನೆಯದಾಗಿ ಹುಟ್ಟಿದ ಮಗುವಿನಿಂದ ಆರು ವರ್ಷದೊಳಗಿನ(೦-೬) ಮಕ್ಕಳು, ಎರಡನೆಯದಾಗಿ ಆರು ವರ್ಷದ ಮೇಲ್ಪಟ್ಟ ಹಾಗೂ ಹದಿನೇಳು ವರ್ಷದೊಳಗಿನ(೭-೧೭) ಮಕ್ಕಳು, ಮೂರನೆಯದಾಗಿ ಹದಿನೇಳು ವರ್ಷಗಳ ಮೇಲ್ಪಟ್ಟ ಹಾಗೂ ನಲ್ವತ್ತು ವರ್ಷದೊಳಗಿನ(೧೮-೪೦) ಜನರನ್ನು, ನಾಲ್ಕನೆಯದಾಗಿ ೪೦ ವರ್ಷ ಮೇಲ್ಪಟ್ಟ ಹಾಗೂ ೬೦ರೊಳಗಿನವರನ್ನು (೪೧-೬೦), ಕೊನೆಯದಾಗಿ ೬೦ ವರ್ಷ ಮೇಲ್ಪಟ್ಟ(೬೧+) ವೃದ್ಧರು ಹೀಗೆ ಐದು ಹಂತದಲ್ಲಿ ವಯೋಗುಂಪುಗಳನ್ನು ವರ್ಗೀಕರಿಸಲಾಗಿದೆ.

ದಕ್ಷಿಣ ಕನ್ನಡ ಜಿಲ್ಲಾ ವ್ಯಾಪ್ತಿಯಲ್ಲಿ ನೆಲೆಸಿದ ಕೊರಗರಲ್ಲಿ ೦-೧೭ರ ವಯೋಮಾನದ ಮಕ್ಕಳು ಒಟ್ಟು ೩೬೯ ಇವೆ. ಇದರಲ್ಲಿ ಗಂಡುಮಕ್ಕಳು ೧೮೪ ಹಾಗೂ ಹೆಣ್ಣುಮಕ್ಕಳು ೧೮೦ರಷ್ಟಿದ್ದಾರೆ. ಅಂದರೆ ಒಟ್ಟು ಜನಸಂಖ್ಯೆಯಲ್ಲಿ ೦-೬ರ ವಯೋಮಾನದ ಮಕ್ಕಳ ಪ್ರಮಾಣವು ಶೇಕಡ ೧೫.೨೬ರಷ್ಟಿದೆ.

೬ರ ಮೇಲ್ಪಟ್ಟು ಹಾಗೂ ೧೭ರ ಒಳಗಿನ ವಯೋಮಾನದ ಮಕ್ಕಳು ಒಟ್ಟು ೧೩೪೨ ಇವೆ. ಇದರಲ್ಲಿ ಗಂಡುಮಕ್ಕಳು ೭೧೩ ಹಾಗೂ ಹೆಣ್ಣುಮಕ್ಕಳು ೬೨೯ರಷ್ಟಿದ್ದಾರೆ. ಅಂದರೆ ಒಟ್ಟು ಜನಸಂಖ್ಯೆಯಲ್ಲಿ ೦-೬ರ ವಯೋಮಾನದ ಮಕ್ಕಳ ಪ್ರಮಾಣವು ಶೇಕಡ ೧೯.೭೬ರಷ್ಟಿದೆ.

೧೭ರ ಮೇಲ್ಪಟ್ಟು ಹಾಗೂ ೪೦ರ ಒಳಗಿನ ವಯೋಮಾನದವರು ಒಟ್ಟು ೩೦೮೨ ಇದ್ದಾರೆ. ಇದರಲ್ಲಿ ಪುರುಷರು ೧೫೦೬ ಹಾಗೂ ಹೆಣ್ಣುಮಕ್ಕಳು ೧೫೭೬ರಷ್ಟಿದ್ದಾರೆ. ಅಂದರೆ ಒಟ್ಟು ಜನಸಂಖ್ಯೆಯಲ್ಲಿ ೦–೬ರ ವಯೋಮಾನದ ಮಕ್ಕಳ ಪ್ರಮಾಣವು ಶೇಕಡ ೪೫.೩೬ರಷ್ಟಿದೆ.

**ಕೋಷ್ಟಕ ೨. ಸಮೀಕ್ಷೆಗೊಳಪಟ್ಟ ದಕ್ಷಿಣ ಕನ್ನಡ ಜಿಲ್ಲೆಯ ಕೊರಗರ ವಯೋಗುಂಪುವಾರು ಜನಸಂಖ್ಯೆ ವಿವರ**

| ಕ್ರ.ಸಂ. | ಜಿಲ್ಲೆ | ವಯೋಗುಂಪು | ಜನಸಂಖ್ಯೆ | | |
|---|---|---|---|---|---|
| | | | ಗಂಡು | ಹೆಣ್ಣು | ಒಟ್ಟು |
| | ದಕ್ಷಿಣ ಕನ್ನಡ | ೦–೬ | ೫೩೭ | ೫೦೦ | ೧೦೩೭ |
| | | ೭–೧೭ | ೭೧೩ | ೬೨೯ | ೧೩೪೨ |
| | | ೧೮–೪೦ | ೧೫೦೬ | ೧೫೭೬ | ೩೦೮೨ |
| | | ೪೧–೬೦ | ೫೧೬ | ೪೩೮ | ೯೫೪ |
| | | ೬೧ರ ಮೇಲ್ಪಟ್ಟು | ೨೨೯ | ೧೫೦ | ೩೭೯ |
| | | **ಒಟ್ಟು** | **೩೫೦೧** | **೩೨೯೩** | **೬೭೯೪** |

೪೦ರ ಮೇಲ್ಪಟ್ಟು ಹಾಗೂ ೬೦ರ ಒಳಗಿನ ವಯೋಮಾನದವರು ಒಟ್ಟು ೯೫೪ ಇದ್ದಾರೆ. ಇದರಲ್ಲಿ ಪುರುಷರು ೫೧೬ ಹಾಗೂ ಮಹಿಳೆಯರು ೪೩೮ರಷ್ಟಿದ್ದಾರೆ. ಅಂದರೆ ಒಟ್ಟು ಜನಸಂಖ್ಯೆಯಲ್ಲಿ ೪೦ರ ಮೇಲ್ಪಟ್ಟು ಹಾಗೂ ೬೦ರ ಒಳಗಿನ ವಯೋಮಾನದವರ ಪ್ರಮಾಣವು ಶೇಕಡ ೧೬.೯ರಷ್ಟಿದೆ.

೬೦ರ ಮೇಲ್ಪಟ್ಟು ವಯೋಮಾನದವರು ಒಟ್ಟು ೩೭೯ ಇದ್ದಾರೆ. ಇದರಲ್ಲಿ ಪುರುಷರು ೨೨೯ ಹಾಗೂ ಮಹಿಳೆಯರು ೧೫೦ರಷ್ಟಿದ್ದಾರೆ. ಅಂದರೆ ಒಟ್ಟು ಜನಸಂಖ್ಯೆಯಲ್ಲಿ ೪೦ರ ಮೇಲ್ಪಟ್ಟು ಹಾಗೂ ೬೦ರ ಮೇಲ್ಪಟ್ಟ ವಯೋಮಾನದವರ ಪ್ರಮಾಣವು ಶೇಕಡ ೯.೬೭ರಷ್ಟಿದೆ.

**ಬದಲಾವಣೆಯಾಗಿರುವ ಕೊರಗರ ಜನಸಂಖ್ಯೆ**

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೨೦೦೧ರಲ್ಲಿ ಸುಮಾರು ೬೩೩೭ ಕೊರಗರಿದ್ದ ಜನಸಂಖ್ಯೆ ೨೦೧೧ರ ವೇಳೆಗೆ ೪೮೫೮ಕ್ಕೆ ಇಳಿದಿದೆ ಎಂದು ಜಿಲ್ಲಾಧಿಕಾರಿ ಎ.ಬಿ. ಇಬ್ರಾಹಿಂ ಮಾಹಿತಿ ನೀಡಿದ್ದಾರೆ. ಉಡುಪಿ ಜಿಲ್ಲೆಯಲ್ಲಿ ೨೦೧೧ರ ಜನಗಣತಿ ಪ್ರಕಾರ ೧೧.೧೩೩ ಕೊರಗರಿದ್ದಾರೆ. ಕೇರಳ ಮತ್ತು ಕರ್ನಾಟಕ ರಾಜ್ಯಗಳಲ್ಲಿರುವ ಕೊರಗರ ಸಂಖ್ಯೆ ಅಂದಾಜು ೧೭ ಸಾವಿರ ಮಾತ್ರ.

ಕೊರಗರಲ್ಲಿ ಜನಸಂಖ್ಯೆ ಅತ್ಯಂತ ವೇಗವಾಗಿ ಇಳಿಮುಖವಾಗಲು ಮುಖ್ಯಕಾರಣ ರೋಗಗಳಿಗೆ ತುತ್ತಾಗುತ್ತಿರುವುದು. ೬೦ ವರ್ಷ ದಾಟಿದವರ ಸಂಖ್ಯೆ ಅತ್ಯಂತ ಕಡಿಮೆ. ಯೇನಪೋಯ ವಿ.ವಿ.ಯ ಪ್ರಾಧ್ಯಾಪಕರಾದ ಡಾ. ಮಹಮ್ಮದ್ ಗುತ್ತಿಗಾರ್ ಅವರ ಪ್ರಕಾರ ಶೇ. ೪೬ರಷ್ಟು ಪುರುಷರು. ಶೇ. ೫೪ರಷ್ಟು ಮಹಿಳೆಯರು ಸೇರಿ ಕೊರಗ ಸಮುದಾಯದ ಶೇ. ೫೦ರಷ್ಟು ಮಂದಿ ಆರೋಗ್ಯ ಸಮಸ್ಯೆಯಿಂದ ಬಳಲುತ್ತಿದ್ದಾರೆ. ಶೇ. ೨೨.೨ರಷ್ಟು ಜನ ಅನೀಮಿಯ, ಶೇ. ೧೭.೮ರಷ್ಟು ಕೊರಗರು ಸಾಂಕ್ರಾಮಿಕ ರೋಗದಿಂದ ಬಳಲುತ್ತಿದ್ದರೆ, ಉಳಿದ ಶೇ. ೨೦.೫ರಷ್ಟು ಕೊರಗರಲ್ಲಿ ಇತರೆ ರೋಗಗಳು ಕಂಡುಬಂದಿವೆ ಎಂದು ಹೇಳುತ್ತಾರೆ. ಶೇ. ೧೩.೨ರಷ್ಟು ಕೊರಗರಲ್ಲಿ ಕ್ಷಯರೋಗವಿದ್ದರೆ, ಶೇ. ೧೭.೮ರಷ್ಟು ಎಲುಬಿನ ಸಮಸ್ಯೆಯಿದೆ. ಶೇ. ೨.೧೪ರಷ್ಟು ಗರ್ಭಕೋಶ ಸಂಬಂಧಿ ಖಾಯಿಲೆಯಿಂದ ಬಳಲುತ್ತಿದ್ದಾರೆ. ಶೇ. ೯.೫ರಷ್ಟು ಕೊರಗರು ಕಣ್ಣಿನ ಸಮಸ್ಯೆಯನ್ನು ಎದುರಿಸುತ್ತಿದ್ದಾರೆ. ಚರ್ಮರೋಗ ಶೇ. ೩.೦೬ರಷ್ಟು ಕೊರಗರಲ್ಲಿದೆ. ಶೇ. ೧.೫೪ರಷ್ಟು ದಂತ ಸಮಸ್ಯೆ ಕೊರಗರಲ್ಲಿ ಕಂಡುಬರುತ್ತಿದೆ. ಈ ಅಂಕಿ ಅಂಶಗಳನ್ನು ವಿವರಿಸುತ್ತಾ ಡಾ. ಮಹಮ್ಮದ್ ಗುತ್ತಿಗಾರ್ ಅವರು ಕಾಡಿನಲ್ಲಿ ನಿಸರ್ಗದತ್ತ ಫಲಹಾರ ಉಂಟು ಆರೋಗ್ಯವಂತರಾಗಿದ್ದರು. ಜೀತದಾಳುಗಳಾಗಿ ನಾಡಿಗೆ ಬಂದ ನಂತರ ಆಹಾರ ಪದ್ಧತಿ ಬದಲಾಗಿದ್ದು ರೋಗ್ಯ ಸಮಸ್ಯೆಗೆ ಪ್ರಮುಖ ಕಾರಣ. ಇದಲ್ಲದೆ, ಬಹುತೇಕರು ತಂಬಾಕು, ಮದ್ಯಕ್ಕೆ ದಾಸರಾಗಿರುವುದು ಸಮಸ್ಯೆ ಬಿಗಡಾಯಿಸಲು ಕಾರಣ" ಎಂದು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. "ಕೊರಗರಲ್ಲಿ ರೋಗಗಳಿಗೆ ಅನುವಂಶಿಕ ಕಾರಣವಿಲ್ಲ. ತಂಬಾಕು, ಕುಡಿತದ ಚಟ, ನೈರ್ಮಲ್ಯ ಕೊರತೆಯಿಂದ ಕ್ಷಯ, ಶ್ವಾಸಕೋಶದ ಸೋಂಕಿಗೆ ತುತ್ತಾಗಿರಬಹುದು" ಎಂಬುದಾಗಿ ಕರ್ನಾಟಕ ವಿಶ್ವವಿದ್ಯಾಲಯದ ವಿಜ್ಞಾನಿ ಸಯವೀಂದ್ರ ಕುಲಕರ್ಣಿ ಕೊರಗ ಕಾಲನಿಗೆ ಭೇಟಿ ನೀಡಿ, ಪರಿಶೀಲಿಸಿ ಅಭಿಪ್ರಾಯ ತಿಳಿಸಿದ್ದಾರೆ.

**ಕಾಯಕಾರ್ಹವಲ್ಲದ ಗುಂಪು**

**ಕೋಷ್ಟಕ ೩. ಸಮೀಕ್ಷೆಗೊಳಪಟ್ಟ ದಕ್ಷಿಣ ಕನ್ನಡ ಜಿಲ್ಲೆಯ ಕೊರಗರ ಕಾಯಕಾರ್ಹವಲ್ಲದ ವಿವರ**

| ಕ್ರ.ಸಂ. | ಜಿಲ್ಲೆ | ವಯೋಗುಂಪು | ಕಾಯಕಾರ್ಹವಲ್ಲದ ಜನಸಂಖ್ಯೆ | | |
|---|---|---|---|---|---|
| | | | ಗಂಡು | ಹೆಣ್ಣು | ಒಟ್ಟು |
| ೧ | ದಕ್ಷಿಣ ಕನ್ನಡ | ೦–೧೭ | ೫೦೩ | ೫೪೨ | ೧೦೪೫ |
| | | + ೬೦ | ೨೨೯ | ೧೫೦ | ೩೭೯ |
| | | ಒಟ್ಟು | ೭೩೨ | ೬೭೭ | ೧೪೦೯ |

೦–೧೭ ವರ್ಷದೊಳಗಿನ ಮಕ್ಕಳು ಹಾಗೂ ಅರವತ್ತು ವರ್ಷಗಳನ್ನು ಪೂರೈಸಿದ ವೃದ್ಧರನ್ನು ಕಾಯಕಾರ್ಹರಲ್ಲ ಎಂದು ಪರಿಗಣಿಸಲಾಗುತ್ತದೆ. ಏಕೆಂದರೆ ಭಾರತೀಯ ಕಾನೂನಿನಲ್ಲಿ ಮಗು ಹದಿನೇಳು ವರ್ಷ ಪೂರ್ಣಗೊಳಿಸದೆ ಯಾವುದೇ ಆರ್ಥಿಕ ಮೂಲವನ್ನು ಕೊಡುವ ಹುದ್ದೆಯಲ್ಲಿ ತೊಡಗಬಾರದೆಂದಿದೆ. ಅದೇ ರೀತಿಯಾಗಿ ಯಾವುದೇ ಹುದ್ದೆಯಿಂದ ನಿವೃತ್ತಿಗೊಳ್ಳುವ ವಯಸ್ಸು ೬೦ ಎಂದು ಪರಿಗಣಿಸಲಾಗಿದೆ. ಹೀಗಾಗಿ ಈ ಎರಡೂ ಗುಂಪುಗಳನ್ನು ಕಾಯಕಾರ್ಹವಲ್ಲದ ಗುಂಪೆಂದು ಪರಿಗಣಿಸಲಾಗಿದೆ. ಈ ರೀತಿ ಕಾಯಕಾರ್ಹವಲ್ಲದ ಕೊರಗರು ಒಟ್ಟು ೧೪೦೯ ಇದೆ. ಇದರಲ್ಲಿ ಪುರುಷರು ೭೩೨ ಹಾಗೂ ಮಹಿಳೆಯರು ೬೭೭ರಷ್ಟಿದ್ದಾರೆ. ಅಂದರೆ ಸಮೀಕ್ಷೆಗೆ ಒಳಪಡಿಸಿದ ಕೊರಗರಲ್ಲಿ ಕಾಯಕಾರ್ಹವಲ್ಲದವರ ಪ್ರಮಾಣವು ಶೇಕಡ ೪೦.೫೮ರಷ್ಟಿದ್ದಾರೆ. ಅಂದರೆ ಇದರಾಚೆಗೆ ಶೇಕಡ ೫೦.೪೨ರಷ್ಟು ಜನರು ಕಾಯಕಾರ್ಹರಾದವರೆಂದು ಪರಿಗಣಿಸಬಹುದು.

**ಕೋಷ್ಟಕ ೪. ಸಮೀಕ್ಷೆಗೊಳಪಟ್ಟ ತಾಲೂಕುವಾರು ಕೊರಗರ ಕಾಯಕಾರ್ಹರಲ್ಲದವರ ಹಾಗೂ ಕಾಯಕಾರ್ಹರ ವಿವರ**

| ಕ್ರ. ಸಂ. | ತಾಲೂಕು | ಕಾಯಕಾರ್ಹರಲ್ಲದವರು | | | ಕಾಯಕಾರ್ಹರು | | |
|---|---|---|---|---|---|---|---|
| | | ಗಂ | ಹೆ | ಒಟ್ಟು | ಗಂ | ಹೆ | ಒಟ್ಟು |
| ೧ | ಮಂಗಳೂರು | ೩೦೬ | ೩೨೫ | ೬೩೧ | ೯೬೩ | ೬೦೮ | ೧೫೭೧ |
| ೨ | ಬಂಟ್ವಾಳ | ೯೬ | ೯೮ | ೧೯೪ | ೧೮೫ | ೧೯೩ | ೩೭೮ |
| ೩ | ಪುತ್ತೂರು | ೮೭ | ೯೦ | ೧೭೭ | ೧೦೪ | ೧೧೫ | ೨೧೯ |
| ೪ | ಬೆಳ್ತಂಗಡಿ | ೯೮ | ೮೮ | ೧೮೬ | ೧೦೨ | ೯೫ | ೧೯೭ |
| ೫ | ಸುಳ್ಯ | ೨೫ | ೨೦ | ೪೫ | ೨೩ | ೩೩ | ೫೬ |
| ಒಟ್ಟು | | ೬೧೨ | ೬೨೧ | ೧೨೩೩ | ೧೩೭೭ | ೧೦೪೪ | ೨೪೨೧ |

ಕೊರಗರ ತಾಲೂಕುವಾರು ಜನಸಂಖ್ಯೆಯನ್ನು ನೋಡಿದಾಗ ಮಂಗಳೂರು ತಾಲೂಕಿನ ಒಟ್ಟು ಕೊರಗರಲ್ಲಿ ಕಾಯಕಾರ್ಹವಾದವರು ೧೫೭೧ ಇದ್ದಾರೆ. ಇದರಲ್ಲಿ ಪುರುಷ ಕಾಯಕಾರ್ಹರು ೯೬೩ ಇದ್ದರೆ ಮಹಿಳಾ ಕಾಯಕಾರ್ಹರು ೬೦೮ರಷ್ಟಿದ್ದಾರೆ. ಅಂದರೆ ಒಟ್ಟು ಜನಸಂಖ್ಯೆಯಲ್ಲಿ ಕಾಯಕಾರ್ಹವಾದವರ ಪ್ರಮಾಣವು ಶೇಕಡ ೭೦.೧೭ರಷ್ಟಿದೆ. ಇದರಲ್ಲಿ ಕಾಯಕಾರ್ಹರಲ್ಲದವರು ಶೇಕಡ ೨೮.೮೩ರಷ್ಟಿದೆ.

ಬಂಟ್ವಾಳ ತಾಲೂಕಿನ ಒಟ್ಟು ಕೊರಗರಲ್ಲಿ ಕಾಯಕಾರ್ಹವಾದವರು ೩೭೮ ಇದ್ದಾರೆ. ಇದರಲ್ಲಿ ಪುರುಷ ಕಾಯಕಾರ್ಹರು ೧೮೫ ಇದ್ದರೆ, ಮಹಿಳಾ ಕಾಯಕಾರ್ಹರ ಸಂಖ್ಯೆ ೧೯೩. ಅಂದರೆ ಒಟ್ಟು ಜನಸಂಖ್ಯೆಯಲ್ಲಿ ಕಾಯಕಾರ್ಹವಾದವರ ಪ್ರಮಾಣವು ಶೇಕಡ ೬೫.೪೪ರಷ್ಟಿದೆ. ಇದರಲ್ಲಿ ಕಾಯಕಾರ್ಹರಲ್ಲದವರು ಶೇಕಡ ೩೪.೫೬ರಷ್ಟಿದೆ.

ಪುತ್ತೂರು ತಾಲೂಕಿನ ಒಟ್ಟು ಕೊರಗರಲ್ಲಿ ಕಾಯಕಾರ್ಹವಾದವರು ೨೧೯ ಇದ್ದಾರೆ. ಇದರಲ್ಲಿ ಪುರುಷ ಕಾಯಕಾರ್ಹರು ೧೦೪ ಇದ್ದರೆ, ಮಹಿಳಾ ಕಾಯಕಾರ್ಹರು ೧೧೫ರಷ್ಟಿದ್ದಾರೆ. ಅಂದರೆ ಒಟ್ಟು ಜನಸಂಖ್ಯೆಯಲ್ಲಿ ಕಾಯಕಾರ್ಹವಾದವರ ಪ್ರಮಾಣವು ಶೇಕಡ ೫೪.೯೫ರಷ್ಟಿದೆ. ಇದರಲ್ಲಿ ಕಾಯಕಾರ್ಹರಲ್ಲದವರು ಶೇಕಡ ೪೫.೦೫ರಷ್ಟಿದೆ.

ಬೆಳ್ತಂಗಡಿ ತಾಲೂಕಿನ ಒಟ್ಟು ಕೊರಗರಲ್ಲಿ ಕಾಯಕಾರ್ಹವಾದವರು ೧೯೭ ಇದ್ದಾರೆ. ಇದರಲ್ಲಿ ಪುರುಷ ಕಾಯಕಾರ್ಹರು ೧೦೨ ಇದ್ದರೆ ಮಹಿಳಾ ಕಾಯಕಾರ್ಹರು ೯೫ ರಷ್ಟಿದ್ದಾರೆ. ಅಂದರೆ ಒಟ್ಟು ಜನಸಂಖ್ಯೆಯಲ್ಲಿ ಕಾಯಕಾರ್ಹವಾದವರ ಪ್ರಮಾಣವು ಶೇಕಡ ೫೦.೫೧ ರಷ್ಟಿದೆ. ಇದರಲ್ಲಿ ಕಾಯಕಾರ್ಹರಲ್ಲದವರು ಶೇಕಡ ೪೯.೪೯ರಷ್ಟಿದೆ.

ಸುಳ್ಯ ತಾಲೂಕಿನ ಒಟ್ಟು ಕೊರಗರಲ್ಲಿ ಕಾಯಕಾರ್ಹವಾದವರು ೫೬ ಇದ್ದಾರೆ. ಇದರಲ್ಲಿ ಪುರುಷ ಕಾಯಕಾರ್ಹರು ೨೩ ಇದ್ದರೆ ಮಹಿಳಾ ಕಾಯಕಾರ್ಹರು ೩೩ ರಷ್ಟಿದ್ದಾರೆ. ಅಂದರೆ ಒಟ್ಟು ಜನಸಂಖ್ಯೆಯಲ್ಲಿ ಕಾಯಕಾರ್ಹವಾದವರ ಪ್ರಮಾಣವು ಶೇಕಡ ೫೫.೫೧ರಷ್ಟಿದೆ. ಇದರಲ್ಲಿ ಕಾಯಕಾರ್ಹರಲ್ಲದವರು ಶೇಕಡ ೪೪.೪೯ರಷ್ಟಿದೆ.

ದಕ್ಷಿಣ ಕನ್ನಡ ಜಿಲ್ಲೆಯ ಒಟ್ಟು ಕೊರಗರಲ್ಲಿ ಕಾಯಕಾರ್ಹವಾದವರು **೨೪೨೧** ಇದ್ದಾರೆ. ಇದರಲ್ಲಿ ಪುರುಷ ಕಾಯಕಾರ್ಹರು **೧೩೭೭** ಇದ್ದರೆ, ಮಹಿಳಾ ಕಾಯಕಾರ್ಹರು **೧೦೪೪**ರಷ್ಟಿದ್ದಾರೆ. ಅಂದರೆ ಒಟ್ಟು ಜನಸಂಖ್ಯೆಯಲ್ಲಿ ಕಾಯಕಾರ್ಹವಾದವರ ಪ್ರಮಾಣವು ಶೇಕಡ ೬೬.೧೩ರಷ್ಟಿದೆ. ಇದರಲ್ಲಿ ಕಾಯಕಾರ್ಹರಲ್ಲದವರು ಶೇಕಡ ೩೩.೮೭ರಷ್ಟಿದೆ.

**ಸಮೀಕ್ಷೆಗೊಳಪಟ್ಟ ಉಡುಪಿ ಜಿಲ್ಲೆಯಲ್ಲಿನ ತಾಲೂಕುವಾರು ಗ್ರಾಮ ಪಂಚಾಯತ್‌ಗಳಲ್ಲಿ ಕೊರಗ ಸಮುದಾಯವು ವಾಸವಾಗಿರುವ ನೆಲೆಗಳು**

**೧. ಉಡುಪಿ ತಾಲೂಕು**

| ಕ್ರಸಂ. | ಗ್ರಾಮ ಪಂಚಾಯತ್ ಹೆಸರು | ಕುಟುಂಬಗಳು |
|---|---|---|
| ೧ | ಕಾಪು | ೬೦ |
| ೨ | ಹಾವಂಜೆ | ೫೫ |
| ೩. | ಪೆರ್ಡೂರು | ೫೮ |
| ೪ | ಶಿರ್ವ | ೫೬ |
| ೫ | ನೀಲಾವರ | ೫೭ |
| ೬ | ಕಟಪಾಡಿ | ೫೬ |
| ೧ | ಪೆರಂಪಳ್ಳಿ | ೫೩ |
| | **ಒಟ್ಟು** | **೪೪೯** |

೨. ಕಾರ್ಕಳ ತಾಲೂಕು

| ಕ್ರ.ಸಂ. | ಗ್ರಾಮ ಪಂಚಾಯತ್ ಹೆಸರು | ಕುಟುಂಬಗಳು |
|---|---|---|
| ೧ | ಸಾಣೂರು | ೫೧ |
| ೨ | ಹೆಬ್ರಿ | ೫೪ |
| ೩ | ಮುಂಡ್ಕೂರು | ೫೬ |
| ೪ | ಅಯ್ಯಪ್ಪನಗರ | ೫೦ |
| ೫ | ಬೆಳ್ಮಣ್ಣ್ | ೫೩ |
| ೬ | ಪಿಲಾರ್‌ಖಾನ್ | ೫೪ |
| ೭ | ಬಜಗೋಳಿ | ೫೨ |
| | ಒಟ್ಟು | ೪೨೭ |

೩. ಕುಂದಾಪುರ ತಾಲೂಕು

| ಕ್ರ.ಸಂ. | ಗ್ರಾಮ ಪಂಚಾಯತ್ ಹೆಸರು | ಕುಟುಂಬಗಳು |
|---|---|---|
| ೧ | ಹಾಲಾಡಿ | ೭ |
| ೨ | ಬೆಳ್ವೆ | ೨ |
| ೩ | ಮಡಾಮಕ್ಕಿ | ೧ |
| ೪ | ಅಮಾಸೆಬೈಲು | ೨ |
| ೫ | ಕಾಳಾವರ | ೮ |
| ೬ | ಕೋಟೇಶ್ವರ | ೧೩ |
| ೭ | ಕುಂಭಾಶಿ | ೧ |
| ೮ | ಬೀಜಾಡಿ | ೫ |
| ೯ | ಕೆದೂರು | ೧ |
| ೧೦ | ಹಕ್ಲಾಡಿ | ೪ |
| ೧೧ | ಆಲೂರು | ೧ |
| ೧೨ | ಶಿರೂರು | ೧ |
| ೧೩ | ಗೋಳಿಹೊಳೆ | ೨ |
| ೧೪ | ಜಡ್ಕಲ್ | ೧೫ |

| | | |
|---|---|---|
| ೮ | ಹಳ್ಳಿಹೊಳೆ | ೫ |
| ೯ | ಹೇರೂರು | ೧ |
| ೧೦ | ನಾಡ | ೪ |
| ೧೧ | ಬಿಜೂರು | ೧ |
| ೧೨ | ವಂಡ್ಸೆ | ೧ |
| ೧೩ | ಕೆರಾಡಿ | ೨ |
| ೧೪ | ಗುಜ್ಜಾಡಿ | ೧೫ |
| | ಒಟ್ಟು | ೪೦೯ |

ಉಡುಪಿ ಜಿಲ್ಲೆಯನ್ನೊಳಗೊಂಡಂತೆ ಕಾರ್ಕಳ ಮತ್ತು ಕುಂದಾಪುರ ತಾಲೂಕುಗಳಲ್ಲಿ ಗ್ರಾಮ ಪಂಚಾಯತ್‌ವಾರು ವಾಸಿಸುವ ಕೊರಗ ಸಮುದಾಯದ ಕೌಟುಂಬಿಕ ಸಮೀಕ್ಷೆಯಿಂದ ತಿಳಿದುಬಂದ ಜನಸಂಖ್ಯೆಯ ವಿವರ ಈ ಕೆಳಗಿನಂತಿದೆ.

**ಕೋಷ್ಟಕ ೫. ಸಮೀಕ್ಷೆಗೊಳಪಟ್ಟ ಉಡುಪಿ ಜಿಲ್ಲೆಯ ಕೊರಗ ಸಮುದಾಯದ ತಾಲೂಕುವಾರು ಕುಟುಂಬವಾರು, ಲಿಂಗವಾರು ಜನಸಂಖ್ಯೆ ಪ್ರಮಾಣ**

| ಕ್ರಸಂ. | ತಾಲೂಕುಗಳು | ಕುಟುಂಬ | ಜನಸಂಖ್ಯೆ | | |
|---|---|---|---|---|---|
| | | | ಗಂಡು | ಹೆಣ್ಣು | ಒಟ್ಟು |
| ೧ | ಉಡುಪಿ | ೪೪೯ | ೯೦೦ | ೮೦೦ | ೧೭೦೦ |
| ೨ | ಕಾರ್ಕಳ | ೪೨೭ | ೮೯೭ | ೭೫೩ | ೧೬೫೦ |
| ೩ | ಕುಂದಾಪುರ | ೪೦೯ | ೮೯೦ | ೭೩೫ | ೧೬೨೫ |
| | ಒಟ್ಟು | ೧೨೮೫ | ೨೬೮೭ | ೨೨೮೮ | ೪೯೭೫ |

ಉಡುಪಿ ಜಿಲ್ಲೆಯಲ್ಲಿ ನೆಲೆಸಿದ ಕೊರಗ ಸಮುದಾಯದ ಒಟ್ಟು ಕುಟುಂಬಗಳು ೧೨೮೫ ಇವೆ. ಒಟ್ಟು ಜನಸಂಖ್ಯೆಯು ೪೯೭೫ ಇದೆ. ಇದರಲ್ಲಿ ಪುರುಷರು ೨೬೮೭ (ಶೇ. ೫೩.೮೪) ಮಹಿಳೆಯರು ೨೨೮೮(ಶೇ. ೪೬.೧೯)ರಷ್ಟಿದ್ದಾರೆ. ತಾಲೂಕುವಾರು ನೋಡಿದಾಗ ಉಡುಪಿ ತಾಲೂಕಿನ ವ್ಯಾಪ್ತಿಯಲ್ಲಿ ೪೪೯ ಕೊರಗ ಕುಟುಂಬಗಳಿವೆ. ಈ ತಾಲೂಕಿನ ಒಟ್ಟು ಜನಸಂಖ್ಯೆಯು ೧೭೦೦ ಇದೆ. ಇದರಲ್ಲಿ ಲಿಂಗವಾರು ಗಮನಿಸಿದಾಗ ಪುರುಷರು ೫೩%(೯೦೦), ಮಹಿಳೆಯರು ೪೭%(೮೦೦)ರಷ್ಟಿದ್ದಾರೆ. ಜಿಲ್ಲೆಯ ಒಟ್ಟು

ಜನಸಂಖ್ಯೆಗೆ ಹೋಲಿಸಿದರೆ ಈ ತಾಲೂಕಿನಲ್ಲಿ ನೆಲೆಸಿದ ಕೊರಗರ ಪ್ರಮಾಣವು ಶೇಕಡ ೫೪ರಷ್ಟಿದೆ.

ಇದೇ ರೀತಿ ಕಾರ್ಕಳ ತಾಲೂಕಿನ ವ್ಯಾಪ್ತಿಯಲ್ಲಿ ೪೨೭ ಕೊರಗ ಕುಟುಂಬಗಳಿವೆ. ಈ ತಾಲೂಕಿನ ಒಟ್ಟು ಜನಸಂಖ್ಯೆಯು ೧೬೫೦ ಇದೆ. ಇದರಲ್ಲಿ ಪುರುಷರು ೮೯೭, ಮಹಿಳೆಯರು ೭೫೩ರಷ್ಟಿದ್ದಾರೆ.

ಕುಂದಾಪುರ ತಾಲೂಕಿನ ವ್ಯಾಪ್ತಿಯಲ್ಲಿ ೪೮೯ ಕೊರಗ ಕುಟುಂಬಗಳಿವೆ. ಈ ತಾಲೂಕಿನ ಒಟ್ಟು ಜನಸಂಖ್ಯೆಯು ೧೬೨೫ ಇದೆ. ಇದರಲ್ಲಿ ಪುರುಷರು ೮೯೦, ಮಹಿಳೆಯರು ೭೩೫ರಷ್ಟಿದ್ದಾರೆ.

**ವೃತ್ತಚಿತ್ರ ೨. ಉಡುಪಿ ಜಿಲ್ಲೆಯ ಕೊರಗ ಸಮುದಾಯದ ತಾಲೂಕುವಾರು ಮತ್ತು ಲಿಂಗವಾರು ಜನಸಂಖ್ಯಾ ಪ್ರಮಾಣ**




ಉಡುಪಿ ಜಿಲ್ಲೆಯ ಐದು ತಾಲೂಕುಗಳಲ್ಲಿ ೨೪ ಗ್ರಾಮ ಪಂಚಾಯಿತಿಯಲ್ಲಿನ ಕೊರಗರ ನೆಲೆಗಳಲ್ಲಿ ಕ್ಷೇತ್ರಕಾರ್ಯವನ್ನು ಮಾಡಲಾಗಿದೆ. ಇಲ್ಲಿ ತಿಳಿಸಿರುವ ನೆಲೆ ಮತ್ತು ಕುಟುಂಬಗಳ ಸಂಖ್ಯೆಯೇ ಅಂತಿಮವೆಂದು ಭಾವಿಸಬಾರದು. ಕ್ಷೇತ್ರಕಾರ್ಯಕ್ಕೆ ನಮೂನಾ ವಿಧಾನವನ್ನು ಅಳವಡಿಸಿಕೊಂಡು ಹೋದ ಸಂದರ್ಭದಲ್ಲಿ ದೊರೆತ ಕೊರಗ ಕುಟುಂಬಗಳನ್ನು ಮಾತ್ರ ಗಣತಿಗೆ ತೆಗೆದುಕೊಳ್ಳಲಾಗಿದೆ.

## ಕೋಷ್ಟಕ ೬. ಸಮೀಕ್ಷೆಗೊಳಪಟ್ಟ ಉಡುಪಿ ಜಿಲ್ಲೆಯ ಕೊರಗರ ವಯೋಗುಂಪುವಾರು ಜನಸಂಖ್ಯೆ ವಿವರ

| ಕ್ರ.ಸಂ. | ಜಿಲ್ಲೆ | ವಯೋಗುಂಪು | ಜನಸಂಖ್ಯೆ | | |
|---|---|---|---|---|---|
| | | | ಗಂಡು | ಹೆಣ್ಣು | ಒಟ್ಟು |
| | ಉಡುಪಿ | ೦-೬ | ೩೫೬ | ೨೪೧ | ೫೯೭ |
| | | ೭-೧೭ | ೫೦೨ | ೪೪೮ | ೯೫೦ |
| | | ೧೮-೪೦ | ೯೪೫ | ೮೩೯ | ೧೭೮೪ |
| | | ೪೧-೬೦ | ೫೮೬ | ೪೮೦ | ೧೦೬೬ |
| | | ೬೧ರ ಮೇಲ್ಪಟ್ಟು | ೨೯೮ | ೨೮೦ | ೫೭೮ |
| | | **ಒಟ್ಟು** | **೨೬೮೭** | **೨೨೮೮** | **೪೯೭೫** |

೪೦ರ ಮೇಲ್ಪಟ್ಟು ಹಾಗೂ ೬೦ರ ಒಳಗಿನ ವಯೋಮಾನದವರು ಒಟ್ಟು ೧೦೬೬ ಇದ್ದಾರೆ. ಇದರಲ್ಲಿ ಪುರುಷರು ೫೮೬ ಹಾಗೂ ಮಹಿಳೆಯರು ೪೮೦ರಷ್ಟಿದ್ದಾರೆ. ಅಂದರೆ ಒಟ್ಟು ಜನಸಂಖ್ಯೆಯಲ್ಲಿ ೪೦ರ ಮೇಲ್ಪಟ್ಟು ಹಾಗೂ ೬೦ರ ಒಳಗಿನ ವಯೋಮಾನದವರ ಪ್ರಮಾಣವು ಶೇಕಡ ೨೧.೬೯ರಷ್ಟಿದೆ.

೬೦ರ ಮೇಲ್ಪಟ್ಟು ವಯೋಮಾನದವರು ಒಟ್ಟು ೫೭೮ ಇದ್ದಾರೆ. ಇದರಲ್ಲಿ ಪುರುಷರು ೨೯೮ ಹಾಗೂ ಮಹಿಳೆಯರು ೨೮೦ರಷ್ಟಿದ್ದಾರೆ. ಅಂದರೆ ಒಟ್ಟು ಜನಸಂಖ್ಯೆಯಲ್ಲಿ ೪೦ರ ಮೇಲ್ಪಟ್ಟು ಹಾಗೂ ೬೦ರ ಮೇಲ್ಪಟ್ಟ ವಯೋಮಾನದವರ ಪ್ರಮಾಣವು ಶೇಕಡ ೧೧.೬೨ರಷ್ಟು ಇರುವುದು ಗಮನಿಸಬಹುದು.

## ಕಾಯಕಾರ್ಹವಲ್ಲದ ಗುಂಪು

**ಕೋಷ್ಟಕ ೭ ಸಮೀಕ್ಷೆಗೊಳಪಟ್ಟ ಉಡುಪಿ ಜಿಲ್ಲೆಯ ಕೊರಗರ ಕಾಯಕಾರ್ಹವಲ್ಲದ ವಿವರ**

| ಕ್ರ.ಸಂ. | ಜಿಲ್ಲೆ | ವಯೋಗುಂಪು | ಕಾಯಕಾರ್ಹವಲ್ಲದ ಜನಸಂಖ್ಯೆ | | |
|---|---|---|---|---|---|
| | | | ಗಂಡು | ಹೆಣ್ಣು | ಒಟ್ಟು |
| ೧ | ಉಡುಪಿ | ೦–೧೭ | ೮೫೮ | ೬೮೯ | ೧೫೪೭ |
| | | ೬೧ರ ಮೇಲ್ಪಟ್ಟು | ೨೯೮ | ೨೮೦ | ೫೭೮ |
| | | ಒಟ್ಟು | ೧೧೫೬ | ೯೬೯ | ೨೧೨೫ |

ಈ ಹಿಂದೆಯೇ ವಿಶ್ಲೇಷಿಸಿದಂತೆ ಇಲ್ಲಿಯೂ ಎರಡೂ ಗುಂಪುಗಳನ್ನು ಕಾಯಕಾರ್ಹವಲ್ಲದ ಗುಂಪೆಂದು ಪರಿಗಣಿಸಲಾಗಿದೆ. ಈ ರೀತಿ ಕಾಯಕಾರ್ಹವಲ್ಲದ ಕೊರಗರ ಸಂಖ್ಯೆ ಒಟ್ಟು ೨೧೨೫ ಇದೆ. ಇದರಲ್ಲಿ ಪುರುಷರು ೧೧೫೬ ಹಾಗೂ ಮಹಿಳೆಯರ ಸಂಖ್ಯೆ ೯೬೯. ಅಂದರೆ ಸಮೀಕ್ಷೆಗೆ ಒಳಪಡಿಸಿದ ಕೊರಗರಲ್ಲಿ ಕಾಯಕಾರ್ಹವಲ್ಲದವರ ಪ್ರಮಾಣವು ಶೇಕಡ ೪೩.೫೯ರಷ್ಟಿದೆ. ಅಂದರೆ ಇದರಾಚೆಗೆ ಶೇಕಡ ೪೭.೪೨ರಷ್ಟು ಜನರು ಕಾಯಕಾರ್ಹರಾದವರೆಂದು ಪರಿಗಣಿಸಬಹುದು.

**ಕೋಷ್ಟಕ ೮. ಸಮೀಕ್ಷೆಗೊಳಪಟ್ಟ ಉಡುಪಿ ಜಿಲ್ಲಾ ತಾಲೂಕುವಾರು ಕೊರಗರ ಕಾಯಕಾರ್ಹರಲ್ಲದವರ ಹಾಗೂ ಕಾಯಕಾರ್ಹರ ವಿವರ**

| ಕ್ರ.ಸಂ. | ತಾಲೂಕು | ಕಾಯಕಾರ್ಹರಲ್ಲದವರು | | | ಕಾಯಕಾರ್ಹರು | | |
|---|---|---|---|---|---|---|---|
| | | ಗಂ | ಹೆ | ಒಟ್ಟು | ಗಂ | ಹೆ | ಒಟ್ಟು |
| ೧ | ಉಡುಪಿ | ೩೫೮ | ೩೩೮ | ೭೨೩ | ೫೧೫ | ೪೬೨ | ೯೭೭ |
| ೨ | ಕಾರ್ಕಳ | ೩೧೩ | ೩೦೨ | ೬೧೭ | ೫೮೨ | ೪೫೧ | ೧೦೩೩ |
| ೩ | ಕುಂದಾಪುರ | ೩೬೮ | ೨೯೬ | ೬೬೪ | ೫೨೨ | ೪೩೯ | ೨೦೧೦ |
| | ಒಟ್ಟು | ೧೦೬೮ | ೯೩೬ | ೨೦೦೪ | ೧೬೧೯ | ೧೩೫೨ | ೨೯೭೧ |

ಕೊರಗರ ತಾಲೂಕುವಾರು ಜನಸಂಖ್ಯೆಯನ್ನು ನೋಡಿದಾಗ ಉಡುಪಿ ತಾಲೂಕಿನ ಒಟ್ಟು ಕೊರಗರಲ್ಲಿ ಕಾಯಕಾರ್ಹವಾದವರು ೫೧೫ ಇದ್ದಾರೆ. ಇದರಲ್ಲಿ ಪುರುಷ ಕಾಯಕಾರ್ಹರು ೪೬೨ ಇದ್ದರೆ, ಮಹಿಳಾ ಕಾಯಕಾರ್ಹರ ಸಂಖ್ಯೆ ೧೩೫೨. ಅಂದರೆ ಒಟ್ಟು ಜನಸಂಖ್ಯೆಯಲ್ಲಿ ಕಾಯಕಾರ್ಹವಾದವರ ಪ್ರಮಾಣವು ಶೇಕಡ ೬೮.೧೭ರಷ್ಟಿದೆ. ಇದರಲ್ಲಿ ಕಾಯಕಾರ್ಹರಲ್ಲದವರು ಶೇಕಡ ೩೦.೮೩ರಷ್ಟಿದ್ದಾರೆ.

ಕಾರ್ಕಳ ತಾಲೂಕಿನ ಒಟ್ಟು ಕೊರಗರಲ್ಲಿ ಕಾಯಕಾರ್ಹವಾದವರು ೧೦೩೩ ಇದ್ದಾರೆ. ಇದರಲ್ಲಿ ಪುರುಷ ಕಾಯಕಾರ್ಹರು ೫೮೨ ಇದ್ದರೆ, ಮಹಿಳಾ ಕಾಯಕಾರ್ಹರ ಸಂಖ್ಯೆ ೪೫೧. ಅಂದರೆ ಒಟ್ಟು ಜನಸಂಖ್ಯೆಯಲ್ಲಿ ಕಾಯಕಾರ್ಹವಾದವರ ಪ್ರಮಾಣವು ಶೇಕಡ ೬೫.೪೪ರಷ್ಟಿದೆ. ಇದರಲ್ಲಿ ಕಾಯಕಾರ್ಹರಲ್ಲದವರು ಶೇಕಡ ೩೪.೫೬ರಷ್ಟಿದ್ದಾರೆ.

ಕುಂದಾಪುರ ತಾಲೂಕಿನ ಒಟ್ಟು ಕೊರಗರಲ್ಲಿ ಕಾಯಕಾರ್ಹವಾದವರು ೨೧೧೦ ಇದ್ದಾರೆ. ಇದರಲ್ಲಿ ಪುರುಷ ಕಾಯಕಾರ್ಹರು ೫೨೨ ಇದ್ದರೆ, ಮಹಿಳಾ ಕಾಯಕಾರ್ಹರ ಸಂಖ್ಯೆ ೪೩೯. ಅಂದರೆ ಒಟ್ಟು ಜನಸಂಖ್ಯೆಯಲ್ಲಿ ಕಾಯಕಾರ್ಹವಾದವರ ಪ್ರಮಾಣವು ಶೇಕಡ ೫೬.೯೫ರಷ್ಟಿದೆ. ಇದರಲ್ಲಿ ಕಾಯಕಾರ್ಹರಲ್ಲದವರು ಶೇಕಡ ೪೭.೦೫ರಷ್ಟಿದ್ದಾರೆ.

ಉಡುಪಿ ಜಿಲ್ಲೆಯ ಒಟ್ಟು ಕೊರಗರಲ್ಲಿ ಕಾಯಕಾರ್ಹವಾದವರು **೨೯೭೧** ಇದ್ದಾರೆ. ಇವರಲ್ಲಿ ಪುರುಷ ಕಾಯಕಾರ್ಹರು **೧೬೧೯** ಇದ್ದರೆ, ಮಹಿಳಾ ಕಾಯಕಾರ್ಹರ ಸಂಖ್ಯೆ **೧೩೫೨**ರಷ್ಟಿದೆ. ಅಂದರೆ ಒಟ್ಟು ಜನಸಂಖ್ಯೆಯಲ್ಲಿ ಕಾಯಕಾರ್ಹವಾದವರ ಪ್ರಮಾಣವು ಶೇಕಡ ೬೦.೧೩ರಷ್ಟಿದೆ. ಇದರಲ್ಲಿ ಕಾಯಕಾರ್ಹರಲ್ಲದವರು ಶೇಕಡ ೩೯.೮೭ರಷ್ಟಿದೆ.

ಅಧ್ಯಾಯ ಮೂರು

# ಕೊರಗರ ಸಾಮಾಜಿಕ ಸ್ಥಿತಿಗತಿ

ಅಧ್ಯಾಯ ಮೂರು

# ಕೊರಗರ ಸಾಮಾಜಿಕ ಸ್ಥಿತಿಗತಿ

**ಭಾ**ರತದ ನೈಸರ್ಗಿಕ ಹಾಗೂ ಭೌಗೋಳಿಕ ಲಕ್ಷಣಗಳು ವೈವಿಧ್ಯಮಯ ಸಮುದಾಯಗಳಿಗೆ ಕಾರಣವಾಗಿದೆ. ಈ ರೀತಿಯ ಭಿನ್ನತೆಯಿಂದ ಕೂಡಿರುವ ನೂರಾರು ಜನ ಸಮುದಾಯಗಳು ಮತ್ತಾವ ದೇಶದಲ್ಲೂ ಕಾಣಲು ಅಸಾಧ್ಯ. ವಿದ್ವಾಂಸರ ಅಭಿಪ್ರಾಯದಂತೆ ವೈವಿಧ್ಯಮಯ ಪ್ರಕೃತಿ, ಪರಿಸರ ರೂಢಿಯಲ್ಲಿ ಬರೆದಿರುವ ಸಂಪ್ರದಾಯ, ಆಗಿಂದಾಗ್ಗೆ ಉಂಟಾದ ದಾಳಿಕೋರರ ಸಂಪರ್ಕ ಮುಂತಾದ ಐತಿಹಾಸಿಕ ಘಟನೆಗಳಿಂದಲೇ ವೈವಿಧ್ಯಮಯ ಪ್ರಪಂಚವನ್ನು ಭಾರತವೊಂದರಲ್ಲಿಯೇ ಕಾಣಬಹುದು. ಧರ್ಮ, ಮತ, ಜಾತಿ, ಪಂಗಡ, ಉಪಜಾತಿ, ಉಪಪಂಗಡ ಹೀಗೆ ದೇಶಾದ್ಯಂತ ವಿಧದ ಸಮುದಾಯ, ಸಂಸ್ಕೃತಿ–ಸಂಪ್ರದಾಯಗಳನ್ನು ಕಾಣಲು ಸಾಧ್ಯ. ಪ್ರತಿಯೊಂದು ಸಮುದಾಯವೂ ತನ್ನದೇ ಆದ ಸಂಸ್ಕೃತಿಯನ್ನು ಅನನ್ಯತೆಯನ್ನು ಹೊಂದಿರುವುದನ್ನು ಕಾಣಬಹುದು. ಒಂದಕ್ಕೊಂದು ಭಿನ್ನವಾಗಿರುವ, ವೈಶಿಷ್ಟ್ಯಗಳಿಂದ ಕೂಡಿರುವ ನೂರಾರು ವಿಚಾರಗಳು ಹುದುಗಿಸಿಕೊಂಡಿರುವುದನ್ನು ತಿಳಿಯಲು ನೂರಾರು ವರ್ಷಗಳೇ ಬೇಕಾದವು.

ಆಂಗ್ಲರು ತಮ್ಮ ವಸಾಹುತುವನ್ನು ಸ್ಥಾಪಿಸುವುದಕ್ಕೋಸ್ಕರ ಭಾರತಕ್ಕೆ ಬಂದು ಇಡೀ ಭಾರತವನ್ನು ತಮ್ಮ ತೆಕ್ಕೆಗೆ ತೆಗೆದುಕೊಂಡಿದ್ದು ಇತಿಹಾಸ. ತಮ್ಮ ಸುಗಮ, ಆಡಳಿತ, ಮತ ಪ್ರಸಾರಕ್ಕಾಗಿ ಭಾರತೀಯರನ್ನು ತಿಳಿಯಲು ಪಟ್ಟ ಶ್ರಮವೂ ಇತಿಹಾಸವೇ ಸರಿ. ಕಾರಣ ಕೋಟ್ಯಾಂತರ ಭಾರತೀಯರಿಗೆ ಕಾಡು–ಮೇಡುಗಳಲ್ಲಿ ವಾಸವಾಗಿರುವ ನೂರಾರು ಅಲೆಮಾರಿ, ಬುಡಕಟ್ಟುಗಳಿವೆ ಎಂಬುದನ್ನು ತಿಳಿಸಿದವರೇ ಆಂಗ್ಲರು ಎಂದರೆ ತಪ್ಪಾಗಲಾರದು.

ಆಂಗ್ಲರು ಹಾಕಿಕೊಟ್ಟ ಅಸ್ತಿಭಾರವನ್ನು ನಾವು ಮರೆಯುವಂತಿಲ್ಲ. ಪ್ರಸ್ತುತ ಬುಡಕಟ್ಟು ಜನರಾದ ಕೊರಗರ ಬಗೆಗೂ ಮೊತ್ತಮೊದಲು ಅಧ್ಯಯನಕ್ಕೆ ನಾಂದಿಹಾಡಿದವರೇ ಬ್ರಿಟಿಷರು. ಅನೇಕ ವಿದ್ವಾಂಸರು ಕೊರಗರ ಜೀವನಾವರ್ತನ ಆಚರಣೆಗಳ ಬಗೆ ಅವರವರದೇ ರೀತಿಯಲ್ಲಿ ವಿಶ್ಲೇಷಿಸಿದ್ದಾರೆ.

**ಜನನ**

ಕೊರಗರಲ್ಲಿ ಹೆರಿಗೆಯಾದಂದಿನಿಂದ ಬಾಣಂತಿಯನ್ನು ಮತ್ತು ಮಗುವನ್ನು ಬೇರೆ ಗುಡಿಸಲಲ್ಲಿ(ಮನೆಯಿಂದ ಹೊರಗೆ) ಏಳು ದಿನಗಳವರೆಗೆ ಇರಿಸುತ್ತಾರೆ. ಅಂದರೆ ಇವರಲ್ಲಿ ಏಳು ದಿನಗಳವರೆಗೆ ಸೂತಕವಿರುತ್ತದೆ. ಕೆಲವು ಪ್ರದೇಶಗಳಲ್ಲಿ ಮಗು–ಬಾಣಂತಿಯನ್ನು ಮನೆಯಲ್ಲಿ ಹಿರಿಯ ಮಹಿಳೆಯ ಜೊತೆಗಿರಿಸಿ ಇತರೆ ಮನೆ ಸದಸ್ಯರು ಬಂಧುಗಳ ಮನೆಯಲ್ಲಿರುತ್ತಾರೆ. ಸಾಂಪ್ರದಾಯಿಕವಾಗಿ ಬಾಣಂತಿಯನ್ನು ಸೋದರತ್ತೆ ನೋಡಿಕೊಳ್ಳುವುದು ವಾಡಿಕೆ. ಇತ್ತೀಚಿನ ದಿನಗಳಲ್ಲಿ ಕೊರಗರು ಆಸ್ಪತ್ರೆಯಲ್ಲಿ ಮಗುವಿಗೆ ಜನ್ಮ ನೀಡುವುದನ್ನು ಗಮನಿಸಬಹುದು. ಹಿಂದೆ ನಿಪುಣ ಸೂಲಗಿತ್ತಿಯ ಮುಖಾಂತರ ಮನೆಯಲ್ಲಿಯೇ ಮಗುವಿನ ಜನನವಾಗುತ್ತಿತ್ತು. ಅನುಭವಸ್ಥ, ನಿಪುಣ ಮಹಿಳೆಯರು ಸೂಲಗಿತ್ತಿಯಾಗಿ ಕಾರ್ಯನಿರ್ವಹಿಸಿದ್ದನ್ನು ಇಂದಿನ ಕೊರಗರು ನೆನಪಿಸಿಕೊಳ್ಳುತ್ತಾರೆ. ಪ್ರಸವವಾಗುವ ದಿನವೇ 'ಅಮೆ ಗುರಿ'ಯನ್ನು ತೆಗೆಯುವ ರೂಢಿ ಕೊರಗರಲ್ಲಿತ್ತು. ಅಂದರೆ ಹೆರಿಗೆಯಾದ ಸಂದರ್ಭದಲ್ಲಿ ಹೊರಬಂದ ಮಾಸನ್ನು ಹೂಳಬೇಕಾದ ಗುಂಡಿಯನ್ನು ತೆಗೆಯುತ್ತಿದ್ದರು. ಯಾವುದೇ ಕಾರಣಕ್ಕೂ ಮಾಸನ್ನು ಹೊರಗಡೆ ಬಿಸಾಕುವ ಹಾಗಿರಲಿಲ್ಲ. ಪ್ರತಿದಿನ ಬಾಣಂತಿ ಮತ್ತು ಮಗುವನ್ನು ಅಲ್ಲಿಯೇ ಸ್ನಾನ ಮಾಡಿಸಬೇಕು ಎಂಬ ನಿಯಮ ಕೊರಗರಲ್ಲಿದೆ.

ಮಗು ಹುಟ್ಟಿದೊಡನೆಯೇ ತಾಂಬೂಲ ಕೊಟ್ಟು ಗಂಡನ ಮನೆಗೆ ಸುದ್ದಿ ಮುಟ್ಟಿಸಲಾಗುತ್ತದೆ. ಮಗುವಿನ ಜನನದ ನಂತರ ಮಗುವಿನ ತಂದೆ ಎಲ್ಲ ಜವಾಬ್ದಾರಿಯನ್ನು ನಿರ್ವಹಿಸಬೇಕಾಗುತ್ತದೆ. ಮಗು ಹೆಣ್ಣಾಗಿದ್ದರೆ ನಾಮಕರಣದ ದಿನ ೧೩ ಸೇರು ಅಕ್ಕಿ, ೧೩ ತೆಂಗಿನಕಾಯಿ, ಒಂದು ಕಟ್ಟು ಓಲೆಬೆಲ್ಲ, ಅರ್ಧಸೇರು ಕಾಳುಮೆಣಸು, ೧೪ ಸೀಗೆ ಕೋಡು, ಅರಶಿಣ ತುಂಡು, ಒಂದು ಕುಡ್ತೆ(ಕೊಂಡೆ) ಎಣ್ಣೆ ಮತ್ತು ಅರ್ಧಸೇರು ಕಾಳಜೀರಿಗೆ(ಕರಿಜೀರಿಗೆ)ಗಳನ್ನು ಕೊಡುವುದು ಸಂಪ್ರದಾಯ. ಬಾಣಂತಿ–ಮಗು ತವರುಮನೆಯಲ್ಲಿದ್ದರೂ ತಾಯಿ ಮಗುವಿನ ಒಂದು ತಿಂಗಳ ಖರ್ಚನ್ನು ಗಂಡನೇ ಭರಿಸಬೇಕು. ಮಗು ಗಂಡಾಗಿದ್ದರೆ ೧೨ ಸೇರು ಅಕ್ಕಿ, ೧೨ ತೆಂಗಿನಕಾಯಿ, ಅರ್ಧಕಟ್ಟು ಓಲೆಬೆಲ್ಲ,

ಅರ್ಧಸೇರು ಕಾಳುಮೆಣಸು ಹೀಗೆ ಎಲ್ಲವನ್ನೂ ಒಪ್ಪಿಸುವುದು ಕೊರಗರಲ್ಲಿನ ನಿಯಮ. ಆದಿಮ ಬುಡಕಟ್ಟುಗಳಲ್ಲಿ ಒಂದಾದ ಕೊರಗರಲ್ಲಿ ಗಂಡಿಗಿಂತ ಹೆಣ್ಣಿಗೆ ಹೆಚ್ಚಿನ ಪ್ರಾಮುಖ್ಯತೆ ಇರುವುದನ್ನು ನಾವು ಗಮನಿಸಬಹುದು.

ಸೂತಕದ ಕಾಲಾವಧಿ(ಏಳು ದಿನಗಳು)ಯಲ್ಲಿ ಯಾವುದೇ ಶುಭ ಸಮಾರಂಭ, ಭೂತ, ಕೋಲ, ನೇಮ ಹೀಗೆ ಇನ್ನಿತರೆ ದೇವರ ಪೂಜಾಕಾರ್ಯಗಳಲ್ಲಿ ಭಾಗವಹಿಸುವಂತಿಲ್ಲ. ಮಗುವಿನ ಜನನದ ಏಳನೇ ದಿನ ಅಮೆ(ಸೂತಕ) ಕಳೆಯುವ ದಿನ. ಅಮೆ ಕಳೆಯುವುದು ಎಂದರೆ ಮೈಲಿಗೆಯನ್ನು ಕಳೆಯುವುದು ಎಂದರ್ಥ. ಒಳಾಡಳಿತವನ್ನು ನಿಭಾಯಿಸುವ ಗುರಿಕಾರನ ನೇತೃತ್ವದಲ್ಲಿ ಅಮೆ ಕಾರ್ಯ ಜರುಗುತ್ತದೆ. ಬಂಧು-ಬಾಂಧವರು ಅತಿಥಿಗಳಾಗಿರುತ್ತಾರೆ. ಆಮಂತ್ರಕರು ಅಕ್ಕಿ, ತೆಂಗಿನಕಾಯಿ ಮತ್ತು ತೆಂಗಿನ ಎಣ್ಣೆಯನ್ನು ತರುವುದು ಸಂಪ್ರದಾಯ. ತಾಯಿ-ಮಗುವಿಗೆ ಸ್ನಾನ ಮಾಡಿಸಿ ಹೊಸ ಬಟ್ಟೆ ಉಡಿಸಿ ಅಡುಗೆ ಕೋಣೆಯಲ್ಲಿ ಕುಳ್ಳಿರಿಸಲಾಗುತ್ತದೆ. ಅವರ ಎದುರು ಒಂದು ಬುಡ್ಡಿ, ಅಗಲವಾದ ಬುಟ್ಟಿ ಮತ್ತು ಮೊರದಲ್ಲಿ ದೈವದ ಕಾಣಿಕೆ ಇರಿಸಲಾಗುತ್ತದೆ. ಗುರಿಕಾರನ ಸಮ್ಮುಖದಲ್ಲಿ ಹಿರಿಯರಾದಿಯಾಗಿ ಕುಲದೈವಕ್ಕೆ ಪ್ರಾರ್ಥನೆ ಸಲ್ಲಿಸಿ ಮಗುವಿಗೆ ಹೆಸರಿಡುತ್ತಾರೆ.

ಕೊರಗರಲ್ಲಿ ಹಿರಿಯರ ಅಜ್ಜ-ಅಜ್ಜಿಯ ಹೆಸರನ್ನು ಮೊಮ್ಮಕ್ಕಳಿಗೆ ಇಡುವ ಪದ್ಧತಿ ಇದೆ. ಹಾಗೆಯೇ ದಿನಗಳ ಹೆಸರನ್ನೇ ಇಡುವ ಪದ್ಧತಿ ಸಾಂಪ್ರದಾಯಿಕವಾಗಿ ನಡೆದುಬಂದಿದೆ. ಆದಿತ್ಯವಾರ ಜನನವಾದರೆ ಐತ, ಸೋಮವಾರ ಹುಟ್ಟಿದರೆ ತೋಮ, ಸೋಮ, ಮಂಗಳವಾರ (ತುಳು: ಅಂಗಾರ) ಹುಟ್ಟಿದರೆ ಅಂಗಾರ ಹೀಗೆ ದಿನಗಳ ಹೆಸರನ್ನೇ ಸ್ಪಷ್ಟವಾಗಿ ಬಳಸುವುದು ಕಂಡುಬರುತ್ತದೆ. ಇತರೆ ಹೆಸರುಗಳನ್ನು ಇಡುವುದನ್ನು ಕಾಣಬಹುದು. ನಕ್ಕುರ, ಬೊಗ್ಗು ಪಿಜಿನ, ಚಳ್ಳ, ಮಾಂಕು, ಬಾಗಿ, ಅಮಾಸೆ- ಈ ರೀತಿಯ ಹೆಸರುಗಳೂ ಇವೆ. ಈ ರೀತಿಯ ವಾರಗಳ ಹೆಸರುಗಳನ್ನು ಕರಾವಳಿಯ ಇತರೆ ಸಮುದಾಯಗಳಲ್ಲೂ ಕಾಣುತ್ತೇವೆ ಎನ್ನುವುದು ಗಮನಾರ್ಹ. ಇತ್ತೀಚಿನ ಯುವಪೀಳಿಗೆಯಲ್ಲಿ ಆಧುನಿಕ ಹೆಸರು ಕಂಡುಬರುತ್ತವೆ. ಬದಲಾದ ಕಾಲಘಟ್ಟದಲ್ಲಿ ಹೊರಗಿನ ಇತರೆ ಸಮುದಾಯಗಳೊಂದಿಗೆ ಬೆರೆಯುತ್ತಿರುವ ಕೊರಗರಲ್ಲಿ ಬದಲಾವಣೆಯಾಗುತ್ತಿರುವುದರ ಒಂದಂಶವನ್ನು ಇಲ್ಲಿ ಕಾಣಬಹುದು. ಯುವಪೀಳಿಗೆಯಲ್ಲಿ ರಮೇಶ, ಸುಮತಿ, ಅರುಣ್, ಗೌರಿ, ಸುಂದರ, ಶಂಕರ, ಕುಸುಮ, ಅಮರನಾಥ, ಗೋಕುಲದಾಸ್ - ಈ ರೀತಿಯ ಹೆಸರುಗಳಿರುವುದನ್ನು ಕಾಣುತ್ತೇವೆ. ಆದರೂ ಮನೆಯೊಳಗೆ-ಹೊರಗೆ ಎಂದು ಎರಡೆರಡು ಹೆಸರುಗಳಿರುವುದನ್ನು

ಗಮನಿಸಬಹುದು. ಸೂಕ್ಷ್ಮವಾಗಿ ಗಮನಿಸಿದಾಗ ಕೊರಗರ ಹೆಸರುಗಳಲ್ಲಿ ಬಹುತೇಕ ವಾರ ಮತ್ತು ಪ್ರಕೃತಿಗೆ ಸಂಬಂಧಿಸಿದ ಹೆಸರುಗಳೇ ಕಾಣಸಿಗುತ್ತವೆ. ಅಂದರೆ ಮೂಲದಿಂದಲೂ ಪ್ರಕೃತಿಯ ಮಡಿಲಲ್ಲಿ ತಮ್ಮ ಸಂಪೂರ್ಣ ಜೀವನವನ್ನು ಸವೆಸಿದ ಕೊರಗರು ಯಾವುದೇ ರೀತಿಯ ಕೀಳರಿಮೆ–ಪರಕೀಯ ಪ್ರಜ್ಞೆಗೆ ಒಳಗಾದವರಲ್ಲ. ಆದರೆ ತಮ್ಮ ಪರಿಸರ, ಜೀವನದ ನೆಲೆಯನ್ನು ಯಾವಾಗ ಕಳೆದುಕೊಳ್ಳುವ ಹಂತಕ್ಕೆ ಬಂದರೋ ಅಂದಿನಿಂದ ಸ್ಥಿತ್ಯಂತರಕ್ಕೆ, ಬದಲಾವಣೆಗೆ ಒಳಪಟ್ಟರು ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ.

ಕೊರಗರಲ್ಲಿ ಜೀವನಕ್ಕೆ ಬೇಕಾದ ಎಲ್ಲ(ಬಹುತೇಕ) ಪರಿಕರಗಳು ಪ್ರಕೃತಿಜನ್ಯ ಪರಿಕರಗಳಾಗಿವೆ. ಮೂಲಕಸುಬು ಬುಟ್ಟಿ ಹೆಣೆಯುವುದಾಗಿರುವುದರಿಂದ ವಿವಿಧ ರೀತಿಯ ಬಳ್ಳಿಗಳಿಂದ ತಯಾರಿಸಿದ ಸಲಕರಣೆಗಳನ್ನೇ ಉಪಯೋಗಿಸುತ್ತಾರೆ. ಜನಿಸಿದ ಮಗುವನ್ನು ಬಿಳಲಿನಿಂದ ತಯಾರಿಸಿದ ತೊಟ್ಟಿಲಲ್ಲಿ ಮಲಗಿಸುವ ರೂಢಿ ಕೊರಗರಲ್ಲಿ ಇದ್ದಿರುವ ಬಗ್ಗೆ ಸ್ಪಷ್ಟತೆ ಇಲ್ಲ. ಸ್ವಲ್ಪ ಆರ್ಥಿಕ ಸ್ಥಿತಿವಂತರು ತೊಟ್ಟಿಲಲ್ಲಿ ಮಲಗಿಸುತ್ತಿದ್ದರು ಎಂಬುದಾಗಿ ಕೆಲ ವಕ್ತೃಗಳು ಹೇಳುತ್ತಾರೆ.

ಬಂಧು–ಬಾಂಧವರು ತೆಂಗಿನೆಣ್ಣೆ, ಅಕ್ಕಿ, ತೆಂಗಿನಕಾಯಿ ತರುವುದರ ಹಿಂದೆ ಮಾನವೀಯ, ಸಹಕಾರ ಗುಣವಿರುವುದನ್ನು ಗಮನಿಸಬೇಕು. ಎಷ್ಟೇ ಬಡವ ಬಲ್ಲಿದನಿರಲಿ ಒಂದು ಸಂಪ್ರದಾಯಿಕ ಚೌಕಟ್ಟಿನೊಳಗೆ ಪಾಲಿಸಿಕೊಂಡು ಬರಲಾಗಿದೆ. ಬಡವನಾದರೂ, ಶ್ರೀಮಂತನಾದರೂ ಸಹಾಯವನ್ನು ನಿರಾಕರಿಸುವುದಿಲ್ಲ. ಬಡವರಾದರೆ ಬಾಣಂತಿಗೆ ಬೇಕಾದ ಅಗತ್ಯಗಳನ್ನು ಸರಿದೂಗಿಸಲು ಈ ಬಂಧು ಬಾಂಧವರ ಸಹಾಯ ಸಹಕಾರಿಯಾಗುವುದರಲ್ಲಿ ಸಂಶಯವಿಲ್ಲ. ಕೊರಗರಲ್ಲಿ ಅಮೆ ಆಗುವವರೆಗೆ ಕಾಳಜೀರಿಗೆಯ ಕಷಾಯವನ್ನು ಬಾಣಂತಿಗೆ ಕುಡಿಸಲಾಗುತ್ತದೆ. ಆ ಮೂಲಕ ನಂಜುಕಾರಕ ಪದಾರ್ಥಗಳನ್ನು ದೂರವಿರಿಸಲಾಗುತ್ತದೆ. ಯಾವುದೇ ಸಿಹಿ ಪದಾರ್ಥ ಮತ್ತು ತೆಂಗಿನಕಾಯಿ ಸೇರಿಸಿದ ಪದಾರ್ಥಗಳನ್ನು ಸೇವಿಸಲು ನಿಷೇಧವಿರುತ್ತದೆ. ಬಾಣಂತಿಗೆ ಮೊದಲ ಹದಿನೈದು ದಿನಗಳ ನಂತರ ವಿವಿಧ ರೀತಿಯ ಔಷಧಿಗಳನ್ನು ಕೊಡುವ ಕ್ರಮ ಕೊರಗರಲ್ಲಿದೆ. ಇತ್ತೀಚಿನ ದಿನಗಳಲ್ಲಿ ಕೊರಗರಲ್ಲಿ ಸಂಪ್ರದಾಯಕ್ಕೆ ಸಂಬಂಧಿಸಿದಂತೆ ಬದಲಾವಣೆಗಳಾಗಿವೆ. ಅಮೆ(ನಾಮಕರಣ) ದಿನ ಮಗುವಿಗೆ ಉಡುಗೊರೆಗಳನ್ನು (ಹಣ ಅಥವಾ ಉಡುಗೊರೆ) ನೀಡುವ ರೂಢಿಯನ್ನು ಯುವ ಪೀಳಿಗೆಯ ಕೊರಗರು ಹುಟ್ಟುಹಾಕಿದ್ದಾರೆ. ಅಂತೆಯೇ ಹೊಸ ಆಧುನಿಕ ಹೆಸರುಗಳಿಂದಲೇ ಕರೆಯಲ್ಪಡುತ್ತಿದ್ದಾರೆ.

**ಋತುಮತಿ**

ಹುಡುಗಿ ಋತುಮತಿಯಾಗಿರುವುದನ್ನು ಕೊರಗರು ಸಂಭ್ರಮದಿಂದ ಆಚರಿಸುತ್ತಾರೆ. ಬಹುತೇಕ ಬುಡಕಟ್ಟು ಸಮುದಾಯಗಳಲ್ಲಿ ಹುಡುಗಿ ಮೈನೆರೆಯದ ಸಂದರ್ಭವನ್ನು ದೊಡ್ಡವಳಾದಳು, ಮದುವೆಗೆ ತಯಾರಾದಳು ಎಂದು ಸಂಭ್ರಮಿಸುವುದು ರೂಢಿಗತವಾಗಿ ಬಂದಿದೆ. ಹೆಣ್ಣಾಗಲಿ, ಗಂಡಾಗಲಿ ತಮ್ಮ ಜೀವನದಲ್ಲಿ ಪ್ರೌಢಾವಸ್ಥೆಗೆ ಬರುವುದು ಸ್ವಾಭಾವಿಕ. ಎಲ್ಲಾ ಸಮಾಜದಲ್ಲಿ, ಸಮುದಾಯಗಳಲ್ಲಿ ಗಂಡು ಪ್ರೌಢಾವಸ್ಥೆಗೆ ಬಂದಾಗ ಯಾವುದೇ ರೀತಿಯ ಶಾಸ್ತ್ರ-ಆಚರಣೆ-ನಿಷೇಧಗಳ ಕಟ್ಟುಪಾಡುಗಳಿಲ್ಲ. ಆದರೆ ಹೆಣ್ಣಿನ ವಿಚಾರಕ್ಕೆ ಬಂದಾಗ ಅನೇಕ ಸಂಪ್ರದಾಯಾಚರಣೆಗಳು, ನಿಷೇಧಗಳು ಹಿಂದಿನ ಕಾಲದಿಂದಲೂ ನಡೆದುಕೊಂಡು ಬಂದಿರುವುದನ್ನು ನಾವು ಕಾಣುತ್ತೇವೆ. ಕಾರಣ ಸ್ತ್ರೀಯನ್ನು ಸಮೃದ್ಧಿಯ ಸಂಕೇತವಾಗಿ, ಸೃಷ್ಟಿಯ ಕಾರಣಕ್ಕಾಗಿ ಗೌರವ ಮತ್ತು ಪಾವಿತ್ರತೆಯಿಂದ ಕಾಣಲಾಗಿದೆ.

ತುಳು ಭಾಷೆಯಲ್ಲಿ ಋತುಶಾಂತಿಯನ್ನು 'ಮದಿಮಾಲ್ ಮದಿಮೆ'(ಮದುಮಗಳ ಮದುವೆ), 'ಮುಳ್ಳು ಮೊಟ್ಟುನೆ'(ಮುಳ್ಳನ್ನು ಮೆಟ್ಟುವುದು) ಎಂದು ಕರೆಯಲಾಗುತ್ತದೆ. ಕರಾವಳಿ ಪ್ರದೇಶದ ಇತರೆ ಸಮುದಾಯಗಳಲ್ಲಿ 'ಕಾಗೆ ಮುಟ್ಟಿತು' ಎಂದು ಕರೆಯುವುದು ರೂಢಿಯಲ್ಲಿದೆ. ಮಾತೃಮೂಲೀಯ ಕುಟುಂಬ ವ್ಯವಸ್ಥೆಯಲ್ಲಿ ಹುಡುಗಿ ಗರ್ಭಧಾರಣೆ ಮಾಡುವ ಶಕ್ತಿಯನ್ನು ಪಡೆದುಕೊಳ್ಳುವ ಈ 'ಋತುಮತಿ' ಹಂತವನ್ನು ಸಂತಸ-ಸಂಭ್ರಮದಿಂದಲೇ ಸ್ವಾಗತಿಸುವ ಪರಂಪರೆಯಿರುವುದನ್ನು ಕಾಣುತ್ತೇವೆ. ಈ ಮದಿಮಲೆ ಮದಿಮೆ ಅಥವಾ ನೀರ ಮದುವೆಯ ಮೂಲಕ ತಮ್ಮ ಬಂಧು-ಬಾಂಧವರಿಗೆಲ್ಲ ಹುಡುಗಿ ಮದುವೆಗೆ ಸಿದ್ಧವಾಗಿದ್ದಾಳೆ ಎಂದು ತಿಳಿಸುವುದೇ ಆಶಯ.

ಹುಡುಗಿ ಮೈನೆರೆದ ಕೂಡಲೇ ಇತರೆ ವಾರಗೆಯವರಿಂದ ದೂರ ಮಾಡುತ್ತಾರೆ. ಮೈನೆರೆದ ಸಂದರ್ಭವನ್ನು ಸೂತಕವಾಗಿದ್ದರೂ ಗಂಭೀರವಾಗಿ ಪರಿಗಣಿಸುವುದಿಲ್ಲ. ಆದರೆ ಅದಕ್ಕೆ ಸಂಬಂಧಿಸಿದಂತೆ ನಿಯಮ-ಸಂಪ್ರದಾಯಗಳನ್ನು ಕಟ್ಟುನಿಟ್ಟಾಗಿ ಕೊರಗರು ಪಾಲಿಸಿಕೊಂಡು ಬರುತ್ತಾರೆ. ಅದಕ್ಕಾಗಿ ಗುರಿಕಾರನ ನಿರ್ದೇಶನವಿರುವುದನ್ನು ಗಮನಿಸ ಬಹುದು. ಋತುಮತಿಯಾದ ಏಳು, ಒಂಬತ್ತು, ಹನ್ನೊಂದು ಅಥವಾ ಹದಿಮೂರನೇ ದಿನದಂದು ನೀರಮದುವೆ ಮಾಡಬೇಕೆಂಬ ಸಂಪ್ರದಾಯ ಕೊರಗರಲ್ಲಿದೆ. ಇತ್ತೀಚಿನ ದಿನಮಾನಗಳಲ್ಲಿ ಈ ಕಟ್ಟುನಿಟ್ಟಿನ ಸಂಪ್ರದಾಯದಲ್ಲಿ ಸಡಿಲಿಕೆಯಾಗಿದೆ. ಆರ್ಥಿಕ ಪರಿಸ್ಥಿತಿ ಗನುಗುಣವಾಗಿ, ಅನುಕೂಲ ದಿನಗಳಿಗನುಗುಣವಾಗಿ ನಿಗದಿಪಡಿಸುವುದು ಕಂಡುಬರುತ್ತದೆ.

ಕೊರಗರಲ್ಲಿ ನೀರಮದುವೆಯಾಗದೆ ಧಾರೆಯಾಗುವಂತಿಲ್ಲ ಎಂಬ ಸಂಪ್ರದಾಯವಿರುವುದರಿಂದಲೇ ನೀರಮದುವೆಗೆ ಮಹತ್ವ ನೀಡುತ್ತಾ ಬಂದಿದ್ದಾರೆ. ಹಾಗೆಯೇ ಅನೇಕ ಬದಲಾವಣೆಗಳನ್ನು ತಂದಿರುವುದನ್ನು ಗಮನಿಸಬಹುದು.

ಪ್ರತಿಯೊಂದು ಬುಡಕಟ್ಟು ಸಮುದಾಯಗಳಲ್ಲಿರುವಂತೆ ಕೊರಗರಲ್ಲಿಯೂ ಮೂಲ ಮನೆತನಕ್ಕೆ, ತರವಾಡು ಮನೆಗೆ ವಿಶೇಷವಾದ ಸ್ಥಾನಮಾನಗಳಿವೆ. ಹತ್ತಿರದ ಬಂಧು-ಬಾಂಧವರೆಲ್ಲ ಸೇರಿ ಆಚರಿಸುವ ನೀರಮದುವೆ ಇಂದು ಸಾರ್ವಜನಿಕ ಕಾರ್ಯಕ್ರಮದಂತೆ ಅದ್ಧೂರಿಯಾಗಿ ನಡೆಯುತ್ತಿವೆ ಎಂದು ವಕ್ತೃಗಳ ಅಭಿಪ್ರಾಯಗಳನ್ನು ಗಮನಿಸಿದಾಗ ಕೊರಗರಲ್ಲಾದ ಬದಲಾವಣೆಯ ರೀತಿಯನ್ನು ಗಣಿಸಬಹುದು. ನೀರಮದುವೆಯಲ್ಲಿ ಗುರಿಕಾರನ ಮಾತಿನಂತೆ ಎಲ್ಲ ಕಾರ್ಯವಿಧಾನಗಳು ನೆರವೇರುತ್ತಿದ್ದವು. ಇತ್ತೀಚಿನ ದಿನಮಾನಗಳಲ್ಲಿ 'ತರವಾಡು ಮನೆ'ಯ ಪರಿಕಲ್ಪನೆಯಲ್ಲೂ ಬದಲಾವಣೆ ಕಂಡಿರುವುದು ಗಮನಾರ್ಹ. ಈ ಪರಿವರ್ತನೆಯ ಪ್ರಕ್ರಿಯೆಯನ್ನು ಸಹಜವೆಂಬಂತೆ ಕಾಣಬೇಕಾಗುತ್ತದೆ. ಕಾರಣ ಜನಸಂಖ್ಯೆಯಲ್ಲಿ ಹೆಚ್ಚಳ, ಕಾಡಿನ ನಾಶ, ಮೂಲ ಕಸುಬು ಕಣ್ಮರೆ, ಇತರೆ ಸಮುದಾಯಗಳ ಒಡನಾಟ, ಶಿಕ್ಷಣ ಇತ್ಯಾದಿಗಳಿಂದ ಯಾವುದೇ ಸಮುದಾಯ ಸ್ಥಗಿತ ಸ್ಥಿತಿಯಲ್ಲಿರಲು ಕಷ್ಟಸಾಧ್ಯ.

ನೀರಮದುವೆ ಆಚರಣೆಯಲ್ಲಿ ಕೊರಗ ಸಮುದಾಯದ ನಾಲ್ಕು ಪಂಗಡಗಳಲ್ಲೂ ಅಲ್ಪಸ್ವಲ್ಪ ಭಿನ್ನತೆಯನ್ನು ಕಾಣಬಹುದು. ಬಹುತೇಕ ಎಲ್ಲ ಸಮುದಾಯಗಳಲ್ಲಿರುವ ಸಂಪ್ರದಾಯದಂತೆ ಕೊರಗರು ಮೈನೆರೆದ ಹುಡುಗಿಯನ್ನು ಹಾಲು ಬರುವ ಮರದ ಬುಡದಲ್ಲಿ ಕುಳ್ಳಿರಿಸುತ್ತಾರೆ. ಅಥವಾ ತೆಂಗಿನ ಮರದ ಬುಡದಲ್ಲಿ ಕುಳ್ಳಿರಿಸಿ ಬೇರೆ ಬೇರೆ ಬಳಿಯ ಕೊರಗ ಮಹಿಳೆಯರು ಸೇರಿ ನೀರು ಎರೆಯುತ್ತಾರೆ. ಹಿಂದಿನ ಕಾಲದಲ್ಲಿ ಮೈನೆರೆದ ಹುಡುಗಿಯನ್ನು ಪ್ರತ್ಯೇಕ ಸ್ಥಳದಲ್ಲಿ ಕೂರಿಸುವ ಸಂಪ್ರದಾಯ ಇತ್ತೆಂದು ಹಿರಿಯ ವಕ್ತೃಗಳು ನೆನಪಿಸುತ್ತಾರೆ. ಋತುಮತಿಯಾದ ನಂತರ ನೀರಮದುವೆಯಾಗುವವರೆಗೆ ಕೆಲವೊಂದು ಕಟ್ಟುಪಾಡುಗಳನ್ನು ಕಡ್ಡಾಯವಾಗಿ ಪಾಲಿಸಬೇಕಾಗುತ್ತದೆ. ಹುಡುಗಿಗೆ ಅರಿಶಿಣ ಹಚ್ಚಿ ಸ್ನಾನ ಮಾಡಿಸಿ ಮದುಮಗಳಂತೆ ಸಿಂಗರಿಸುತ್ತಾರೆ. ಮನೆಯ ಅಂಗಳದಲ್ಲಿ ಕುಳ್ಳಿರಿಸಿ ಸೇಸೆ ಹಾಕಲಾಗುತ್ತದೆ. ಈ ಸಂದರ್ಭದಲ್ಲಿ ಬಂಧು-ಬಳಗದವರು ಹುಡುಗಿಗೆ ಉಡುಗೊರೆ ನೀಡುತ್ತಾರೆ. ಹುಡುಗಿಯನ್ನು ಮನೆಯೊಳಗೆ ಕರೆದು ಅಡುಗೆ ಪಾತ್ರೆಗಳನ್ನೆಲ್ಲ ಮುಟ್ಟಿಸುತ್ತಾರೆ. 'ನೀನು ಮುಂದೆ ಒಂದು ಸಂಸಾರವನ್ನು ನಿಭಾಯಿಸಲು ಶಕ್ತಳಾಗಿದ್ದಿ' ಎಂಬುದನ್ನು ಈ ಕ್ರಿಯೆ ಸಂಕೇತಿಸುತ್ತದೆ.

ನೀರಮದುವೆಯ ದಿನ ಮಾಂಸದೂಟವನ್ನು ವ್ಯವಸ್ಥೆ ಮಾಡುವ ಸಂಪ್ರದಾಯ ಕೊರಗರಲ್ಲಿದೆ. ಎಲ್ಲ ಸಂಪ್ರದಾಯಾಚರಣೆಗಳು ಮುಗಿದ ನಂತರ ಹುಡುಗಿಯನ್ನು ಸೋದರಮಾವನ ಮನೆಗೆ ಅಥವಾ ಅಜ್ಜಿ ಮನೆಗೆ ಕರೆದೊಯ್ಯುತ್ತಾರೆ. ಒಂದು ದಿನಕ್ಕಾದರೂ ಸಂಬಂಧಿಕರ, ಬಂಧು ಬಳಗದವರ ಮನೆಯಲ್ಲಿರಬೇಕೆಂಬ ನಿಯಮ ಕೊರಗರಂತೆ ಅನೇಕ ಸಮುದಾಯಗಳಲ್ಲಿ ಕಂಡುಬರುತ್ತದೆ. ಸಂಬಂಧಿಕರ ಮನೆಯ 'ಸಮ್ಮಾನ'(ಸನ್ಮಾನ)ವನ್ನು ಹುಡುಗಿ ಸ್ವೀಕರಿಸುತ್ತಾಳೆ. ಇತ್ತೀಚಿನ ದಿನಗಳಲ್ಲಿ ಸಾಮಾಜಿಕ ನೀರಮದುವೆಗಳು ನಡೆದಿರುವುದನ್ನು ವಕ್ತೃಗಳು ಉಲ್ಲೇಖಿಸುತ್ತಾರೆ. ಕೊರಗರ ಸಾಂಪ್ರದಾಯಿಕ ಕೊಳಲು ಮತ್ತು ಡೋಲು ಬಡಿಯುವುದು ಹಿಂದಿನ ನೀರಮದುವೆಯ ಸಂದರ್ಭದಲ್ಲಿತ್ತೆಂದು ತಿಳಿದುಬರುತ್ತದೆ. ಆದರೆ ಇಂದಿನ ನೀರಮದುವೆಯಲ್ಲಿ ಇವು ಇಲ್ಲ. ಬದಲಾಗಿ ಧ್ವನಿವರ್ಧಕಗಳ ಬಳಕೆಯಿದೆ. ನೀರಮದುವೆಯ ಉದ್ದೇಶಗಳು ಏನೇ ಇದ್ದರೂ ಅದರಿಂದಾಗುವ ಪರಿಣಾಮಗಳನ್ನೂ ಅವಲೋಕಿಸಿಬಹುದಾಗಿದೆ. ಬದಲಾದ ಕಾಲಘಟ್ಟದಲ್ಲಿ 'ಋತುಮತಿ' ಯಾಗುವ ಸಂದರ್ಭವನ್ನು ಪ್ರಚುರಪಡಿಸಲು ಯಾರೂ ಇಚ್ಛಿಸುವುದಿಲ್ಲ. ಶಿಕ್ಷಣ, ಉನ್ನತ ಶಿಕ್ಷಣ ಪಡೆಯುವ ಸಂದರ್ಭದಲ್ಲಿ ವೈಯಕ್ತಿಕ ಸಹಜ ದೈಹಿಕ ಕ್ರಿಯೆಗಳನ್ನು ಬದಿಗೊತ್ತುವುದು ಸ್ವಾಭಾವಿಕ. 'ಋತುಮತಿ'ಯಾದ ತಕ್ಷಣ ಮದುವೆಯಾದರೆ ಅದು ಬಾಲ್ಯವಿವಾಹವೇ ಸರಿ. ದೊಡ್ಡವಳಾದ ನಂತರ ಯಾವುದೇ ಉನ್ನತ ಶಿಕ್ಷಣ ಯಾಕೆ ಎಂದು ವಿದ್ಯಾಭ್ಯಾಸ ಮೊಟಕುಗೊಳಿಸುವ ಸಂದರ್ಭಗಳನ್ನೆಲ್ಲ ಎದುರಿಸಬೇಕಾಗುತ್ತದೆ. ಈ ಎಲ್ಲ ಅವಗುಣಗಳಿಂದ ಇತ್ತೀಚೆಗೆ ನೀರಮದುವೆಗಳ ಸಂಖ್ಯೆ ಕ್ಷೀಣಿಸುತ್ತಿದೆ.

ನೀರಮದುವೆಯ ಬದಲಿಗೆ ದೇವಸ್ಥಾನಕ್ಕೆ ಹೋಗಿ 'ಕಳಶ ಸ್ನಾನ' ಮಾಡಿ ಬರುವ ಹೊಸ ನಿಯಮಕ್ಕೆ ದಾರಿಮಾಡಿಕೊಟ್ಟಿದೆ. ಆದಿಮ ಬುಡಕಟ್ಟು ಕೊರಗರು ವೈದಿಕ ಪರಂಪರೆಯ 'ಕಲಶ ಸ್ನಾನ'ಕ್ಕೆ ಮೊರೆಹೋಗಲು ಮುಖ್ಯ ಕಾರಣ ಸಮಾಜದ ಬದಲಾವಣೆ. ಈ ಮೊದಲು ಪ್ರಸ್ತಾಪಿಸಿದಂತೆ ತಮ್ಮ ತಮ್ಮ ಅಸ್ಮಿತೆಗಳನ್ನು ಉಳಿಸಿಕೊಳ್ಳಲು ಬಹುತೇಕ ಬುಡಕಟ್ಟು ಸಮುದಾಯಗಳ ಹೆಣಗಾಡುತ್ತಿರುವುದು ನಿಜ. ನಗರೀಕರಣ, ಸಂಸ್ಕೃತೀಕರಣ, ಜಾಗತೀಕರಣಗಳ ಜಂಜಾಟದಲ್ಲಿ ತಮ್ಮತನವನ್ನು, ತಮ್ಮ ಮೂಲ ಸಂಸ್ಕೃತಿಯನ್ನು ಉಳಿಸಿಕೊಳ್ಳಲು ಸಾಧ್ಯವೇ ಎಂಬುದು ದೊಡ್ಡ ಪ್ರಶ್ನೆಯಾಗಿದೆ.

ಕಾಲಕ್ಕೆ ತಕ್ಕಂತೆ ಬದಲಾವಣೆಗಳಾಗುವುದು ಸಹಜ ಪ್ರಕ್ರಿಯೆ. ಈ ಹಿನ್ನೆಲೆಯಲ್ಲಿಯೇ ಕೊರಗರ ನೀರಮದುವೆ(ಋತುಶಾಂತಿ)ಯನ್ನು ವ್ಯಾಖ್ಯಾನಿಸಬಹುದು. ಉತ್ತಮ ಆಶಯವನ್ನು,

ಉದ್ದೇಶವನ್ನು ಹೊಂದಿರುವ ಜೀವನಾವರ್ತನ ಆಚರಣೆಗಳಲ್ಲಿ ಒಂದಾದ ನೀರಮದುವೆಯನ್ನು ಹೆಣ್ಣುಮಕ್ಕಳ ಭವಿಷ್ಯಕ್ಕೆ ಯಾವುದೇ ರೀತಿಯಲ್ಲಿ ಧಕ್ಕೆಯಾಗದಂತೆ ಮುಂದುವರೆಸಬೇಕಾಗಿದೆ. ಹಿರಿಯರಿಂದ ಪಾರಂಪರಿಕವಾಗಿ ಮುಂದುವರೆದು ಬಂದಿರುವ ಇಂತಹ ಆಚರಣೆಗಳಿಂದ ಮೂಲ ಸಂಸ್ಕೃತಿಯನ್ನು ಉಳಿಸಿ ಮುಂದುವರಿಸಿದಂತಾಗುತ್ತದೆ. ಹಾಗೆಯೇ ಅವುಗಳ ಹಿಂದೆ ಘಟಿಸಬಹುದಾದ ಅವಗುಣಗಳನ್ನು ಘಟಿಸಿದಂತೆ ತಡೆಯುವ ಸರ್ವಪ್ರಯತ್ನವನ್ನು ಮಾಡಬೇಕಾದ ಜವಾಬ್ದಾರಿ ಇಂದಿನ ಯುವಪೀಳಿಗೆಯ ಮೇಲಿದೆ ಎಂದರೆ ತಪ್ಪಾಗಲಾರದು.

**ಮದುವೆ**

ಸಮಾಜದ ಮೂಲ ಘಟಕವೇ ಕುಟುಂಬ. ಸಮುದಾಯ, ಸಮಾಜ, ಗ್ರಾಮ, ಜಿಲ್ಲೆ, ರಾಷ್ಟ್ರ ಎಲ್ಲವೂ ಈ 'ಕುಟುಂಬ'ದ ಆಧಾರದ ಮೇಲೆಯೇ ನಿಂತಿದೆ. ಜಗತ್ತಿನ ಪ್ರತಿಯೊಂದು ಸಮುದಾಯ-ಸಮಾಜದಲ್ಲಿಯೂ ಯಾವುದಾದರೂ ಒಂದು ಬಗೆಯ ಕುಟುಂಬ ಅಸ್ತಿತ್ವದಲ್ಲಿರುವುದನ್ನು ಕಾಣಬಹುದು. ಪ್ರತಿಯೊಬ್ಬ ವ್ಯಕ್ತಿಯೂ ಪ್ರಥಮತಃ ಒಂದು ಕುಟುಂಬದ ಸದಸ್ಯ. ಜೀವನದ ಎಲ್ಲ ಚಟುವಟಿಕೆಗಳ ಕೇಂದ್ರವೇ ಕುಟುಂಬ. ಕುಟುಂಬ ವಿಲ್ಲದೇ ಸಮುದಾಯ-ಸಮಾಜ-ದೇಶವಿರಲಾರದು. ಅಷ್ಟು ಪ್ರಾಮುಖ್ಯತೆ ಕುಟುಂಬಕ್ಕಿದೆ. ಮಾನವನ ಇತಿಹಾಸದಷ್ಟೇ ಇತಿಹಾಸವನ್ನು ಹೊಂದಿರುವ ಕುಟುಂಬ ಎಲ್ಲೂ ಪೂರ್ಣಪ್ರಮಾಣದ ವಿಘಟನೆಗೆ ಒಳಗಾಗಿಲ್ಲವೆಂಬುದರ ಮೇಲೆಯೇ ಅದರ ಗಟ್ಟಿತನವನ್ನು, ಮಹತ್ವವನ್ನು ತಿಳಿಯಬಹುದಾಗಿದೆ. ಜೀವನಮೌಲ್ಯ, ಪ್ರೀತಿ, ರೀತಿ-ನೀತಿ, ನಡೆ-ನುಡಿಗಳನ್ನು ಮೂಲತಃ ಕುಟುಂಬದಿಂದಲೇ ಪಡೆಯಬೇಕಾಗುತ್ತದೆ.

ಕುಟುಂಬಕ್ಕೆ ಮದುವೆಯೇ ಅಡಿಪಾಯ. ಕೂಡಿ ಬಾಳುವ ವ್ಯವಸ್ಥೆ ಪ್ರಾಣಿ-ಪಕ್ಷಿಗಳಲ್ಲಿ ಕಂಡುಬರುತ್ತದೆಯಾದರೂ ಮದುವೆಯ ಮೂಲಕ ಕೂಡಿ ಬಾಳುವ ವ್ಯವಸ್ಥೆ ಮಾನವನಿಗಷ್ಟೇ ಸೀಮಿತವಾಗಿರುವುದನ್ನು ಕಾಣಬಹುದು. ವಿವಾಹ ಮತ್ತು ಕುಟುಂಬ ವ್ಯವಸ್ಥೆಗಳು ಮಾನವನ ಶಾರೀರಿಕ ಮತ್ತು ಸಾಮಾಜಿಕ ಅವಶ್ಯಕತೆಗಳನ್ನು ಪೂರೈಸಿಕೊಳ್ಳುವುದಕ್ಕಾಗಿ ಏರ್ಪಡಿಸಿಕೊಂಡಿರುವ ವ್ಯವಸ್ಥೆ. ಸ್ವಾಭಾವಿಕವಾದ ಲೈಂಗಿಕ ಬಯಕೆಗಳನ್ನು ಈಡೇರಿಸಿಕೊಂಡು ಸಂಬಂಧಗಳನ್ನು ಸ್ಥಿರಪಡಿಸಿ ವಂಶವಾಹಿನಿಯನ್ನು ಮುಂದಕ್ಕೊಯ್ಯುವುದೇ ಕುಟುಂಬದ ಮೂಲ ಉದ್ದೇಶ. ಪ್ರಾಚೀನ ಕಾಲದಿಂದಲೂ ಪರಂಪರಾಗತವಾಗಿ ಬಂದಿರುವ ಭಾರತೀಯ ವೈವಾಹಿಕ ವಿಧಿ-ವಿಧಾನ, ಸ್ವರೂಪಗಳನ್ನು ಇತರೆ ವಿದೇಶಿಯರು ಇಂದಿಗೂ ಬೆರಗುಗಣ್ಣಿನಿಂದ ನೋಡುತ್ತಿದ್ದಾರೆ. ಕಾರಣ ಭಾರತೀಯ ಸಂಸ್ಕೃತಿಗಳಲ್ಲಿ ಅಡಗಿರುವ ಸಾಂಪ್ರದಾಯಿಕ

ಪದ್ಧತಿಗಳು, ವ್ಯವಸ್ಥೆಗಳು ಸದೃಢ ಕುಟುಂಬಕ್ಕೆ, ಸಮಾಜಕ್ಕೆ ಪೂರಕವಾಗಿರುವುದು. ಮನುಷ್ಯರಲ್ಲಿ ಕುಟುಂಬ ವ್ಯವಸ್ಥೆ ಪ್ರಾರಂಭವಾದಾಗ ಪ್ರಾಣಿಗಳಲ್ಲಿರುವಂತೆ ಲೈಂಗಿಕ ತೃಪ್ತಿಯೇ ಪ್ರೇರಣೆ ಯಾಗಿದ್ದಿರಬೇಕು. ವಂಶಾಭಿವೃದ್ಧಿಗೆ ಸಂತಾನ ಅನಿವಾರ್ಯವೆಂಬುದು ಪ್ರಕೃತಿ ನಿಯಮ. ಸಂತಾನೋತ್ಪತ್ತಿಗೆ ಲೈಂಗಿಕ ಕ್ರಿಯೆಯೇ ಸಾಧನ. ಲೈಂಗಿಕ ಕ್ರಿಯೆಗೆ ಪ್ರೇರಣೆ ದೊರೆಯುವುದು ಕಾಮದಿಂದ. ವಿವಾಹೇತರ ಲೈಂಗಿಕತೆಗೆ ನಮ್ಮ ಸಮಾಜದಲ್ಲಿ ಒಪ್ಪಿಗೆಯಿಲ್ಲ, ಅದು ಅನೈತಿಕ ಎಂದೆನಿಸುತ್ತದೆ. ಆದರೂ ಇತ್ತೀಚಿನ ದಿನಗಳಲ್ಲಿ ಕುಟುಂಬ ವ್ಯವಸ್ಥೆಯಲ್ಲಿ ಅಲ್ಪಸ್ವಲ್ಪ ಬದಲಾವಣೆಯಾಗುತ್ತಿರುವುದನ್ನು ಗಮನಿಸಬಹುದಾಗಿದೆ. ವಿವಾಹವಾಗದೇ ವಯಸ್ಕ ಯುವಕ-ಯುವತಿ ಜೊತೆಯಾಗಿ ಬದುಕುವ ಪದ್ಧತಿಗಳನ್ನು ಪಾಶ್ಚಾತ್ಯ ದೇಶಗಳ ಅನುಕರಣೆಯ ಮೂಲಕ ಒಪ್ಪಿಕೊಳ್ಳುತ್ತಿದ್ದೇವೆ.

ಕುಟುಂಬವೊಂದರ ನಡಾವಳಿ(behaviour)ಯನ್ನು ಮದುವೆಯ ವಿಧಿ ವಿಧಾನಗಳು ಸಾಂಕೇತಿಕವಾಗಿ ಅಭಿವ್ಯಕ್ತಿಸಲೇ ಬೇಕಾಗುತ್ತದೆ. ಇಂಥ ಕಡೆ ಸಮಾನ ಆಚರಣೆ ಇರುವ ಒಂದು ಗುಂಪಿಗೆ, ಆ ಗುಂಪಿನ ಮದುವೆ ಕ್ರಮವು ಸಹಜವಾಗಿ ತೋರಿದರೆ, ಇತರರ ಆದರ್ಶಗಳು, ಭಾವನೆಗಳು, ನಡಾವಳಿಗಳು ವಿಚಿತ್ರವೆಂದೋ, ಅಸಂಬದ್ಧವೆಂದೋ ತೋರಬಹುದು. ಒಂದು ಕುಟುಂಬದ ಆಹಾರ ನಿಯಮ, ಉಡುಪಿನ ಕ್ರಮಗಳು, ತೊಡುಗೆಗಳು, ಅಲಂಕಾರ, ವಿವಾಹ ಸಂಬಂಧಗಳು, ವ್ಯಕ್ತಿ ಸಂಬಂಧಗಳು, ಕೃಷಿ ಪದ್ಧತಿಗಳು, ಹೀಗೆ ಸಕಲವೂ ಅದರ ಅಧ್ಯಯನ ವ್ಯಾಪ್ತಿಗೆ ಬರುತ್ತದೆ. ದಯೆ, ಕರುಣೆ, ದ್ವೇಷ, ಭಕ್ತಿ, ವಿನಯ-ಗೌರವ ಈ ಭಾವನೆಗಳನ್ನು ಯಾರು ಯಾರಲ್ಲಿ, ಯಾವ ಮಟ್ಟದಲ್ಲಿ, ಏಕೆ ತೋರಬೇಕೆಂಬುದೂ ಇದರಲ್ಲಿ ಸೇರುತ್ತದೆ. ಹೊರ ಸಂಸ್ಕೃತಿಗಳ ಸಂಪರ್ಕವು ತೀವ್ರವಾದಂತೆ ಈ ಭಾವನೆ ಕಡಿಮೆಯಾಗುವುದು ಹೌದಾದರೂ ಪ್ರತಿ ಸಂಸ್ಕೃತಿಯಲ್ಲೂ ತನ್ನದು ಎಂಬುದಕ್ಕೆ ವಿಶಿಷ್ಟ ಸ್ಥಾನವೊಂದು ಇದ್ದೇ ಇರುತ್ತದೆ. ಇದರಿಂದಾಗಿ ಒಂದು ಜನಾಂಗದ ಕುಟುಂಬ ವ್ಯವಸ್ಥೆಯು ತನ್ನ ವಿವಿಧ ರೀತಿಯ ಹೊಂದಾಣಿಕೆಗಳ ಪರಿಣಾಮವಾಗಿ ತನ್ನ ಆಶ್ರಯದಲ್ಲಿ ಇರುವವರಿಗೆ ತೃಪ್ತಿಯನ್ನೋ, ನಿರಾಶೆಯನ್ನೋ, ಸಮಚಿತ್ತತೆಯನ್ನೋ ನೀಡುತ್ತದೆ. ಇವುಗಳನ್ನು ಒಂದು ಕುಟುಂಬದ ಅಧ್ಯಯನದಲ್ಲಿ ಗುರುತಿಸಲು ಸಾಧ್ಯ.[೨] ಎಂಬ ಪುರುಷೋತ್ತಮ ಬಿಳಿಮಲೆಯವರ ಅಭಿಪ್ರಾಯಗಳು ಕುಟುಂಬ ವ್ಯವಸ್ಥೆಯ ಅಧ್ಯಯನದ ಪ್ರಾಮುಖ್ಯತೆಯನ್ನು ತಿಳಿಸಿಕೊಡುತ್ತದೆ. ವಿಭಿನ್ನ ಸಂಸ್ಕೃತಿಗಳು ತಮ್ಮದೇ ಆದಂಥ ರೀತಿ-ರಿವಾಜು, ನಡಾವಳಿಗಳನ್ನು ಹೊಂದಿರುವಂತೆಯೇ

ತಮ್ಮದೇ ದೃಷ್ಟಿಕೋನಗಳನ್ನು ಹೊಂದಿರುವುದನ್ನು ಕಾಣುತ್ತೇವೆ. ವಿವಾಹ ಸಂಸ್ಥೆ ಮನುಷ್ಯನಷ್ಟೇ ಪ್ರಾಚೀನವಾದುದು. ಭಾರತದಲ್ಲಿ ವಿವಾಹ ಒಂದು ಧಾರ್ಮಿಕ ರೀತಿ–ನೀತಿ–ನಡವಳಿಕೆಗಳಿಗೆ ಅನುಸಾರವಾಗಿ, ಸಂಪ್ರದಾಯಬದ್ಧವಾಗಿ ನಡೆಯುತ್ತದೆ. ವ್ಯಕ್ತಿ ಜೀವನದಲ್ಲಿ ವಿವಾಹ ಅತೀ ಮುಖ್ಯವಾದ ಸಂಸ್ಕಾರ. ಇದು ದೇವರಿಂದ ಕಟ್ಟಲ್ಪಟ್ಟ ಪವಿತ್ರ ಬಂಧನವೆಂಬ ನಂಬಿಕೆಯಿದೆ. ಮದುವೆಯಿಲ್ಲದೆ ಮೋಕ್ಷವಿಲ್ಲವೆಂಬ ನಂಬಿಕೆ ಇರುವುದರಿಂದ ಹಿಂದೂಗಳಲ್ಲಿ ವಿವಾಹ ಅನಿವಾರ್ಯ[೩] ಎಂದು ನಂಜಮ್ಮಣ್ಣಿ ಅವರು ವಿವಾಹದ ಬಗೆಗೆ ವ್ಯಾಖ್ಯಾನಿಸಿದ್ದಾರೆ.

ಭಾರತ ಉಪಖಂಡದಲ್ಲಿರುವ ನೂರಾರು ಜನಸಮುದಾಯಗಳು ತಮ್ಮ ತಮ್ಮ ವಿಶಿಷ್ಟ ಪದ್ಧತಿಯ ಮೂಲಕ ವಿವಾಹ ಪದ್ಧತಿಯನ್ನು ಅನುಸರಿಸಿಕೊಂಡು ಬಂದಿರುವುದನ್ನು ಕಾಣುತ್ತೇವೆ. ಇದಕ್ಕೆ ಕೊರಗರೂ ಹೊರತಾಗಿಲ್ಲ. ಆದರೆ ಕೊರಗರ ವಿವಾಹ ಸಂಪ್ರದಾಯ ಸರಳವಾಗಿರುತ್ತದೆ. ಮದುವೆಗೆ ಆರಂಭದಲ್ಲಿ ಹುಡುಗ–ಹುಡುಗಿಯ ಬಳಿಯ ಆಯ್ಕೆ ನಡೆಯುತ್ತದೆ. ನಂತರ ಹುಡುಗ ಹುಡುಗಿಯನ್ನು ನೋಡಲು ಹುಡುಗಿ ಮನೆಗೆ ಬರುತ್ತಾನೆ. ಹುಡುಗ–ಹುಡುಗಿ ಒಪ್ಪಿಗೆಯಾದರೆ ಎಲ್ಲರಿಗೂ ಒಪ್ಪಿಗೆಯಾದಂತೆಯೇ ಸರಿ. ಪ್ರಾದೇಶಿಕ ಭಿನ್ನತೆ ಕೊರಗರ ಮದುವೆಯಲ್ಲಿ ಕಂಡುಬರುತ್ತದೆ. ದಕ್ಷಿಣದ ಕಾಸರಗೋಡು ಪ್ರದೇಶದಲ್ಲಿರುವ ಕೊರಗರ ವಿವಾಹಕ್ಕೂ ಉತ್ತರದ(ಉಡುಪಿ, ಕುಂದಾಪುರ) ಕೊರಗರ ವಿವಾಹ ಸಂಪ್ರದಾಯದಲ್ಲಿ ಭಿನ್ನತೆಯನ್ನು ಗುರುತಿಸಲು ಸಾಧ್ಯ.

ಕಾಸರಗೋಡಿನ ಬಟ್ಯರ ಪ್ರಕಾರ ಕೊರಗರಲ್ಲಿ ಪ್ರತ್ಯೇಕವಾಗಿ ಉಂಗುರ ಹಾಕುವ ಅಥವಾ ನಿಶ್ಚಯ ಕ್ರಮ ಇಲ್ಲ. ಬದಲಾಗಿ ಎರಡೂ ಕಡೆಗಳಲ್ಲಿ ಚಮ್ಮನ(ಔತಣ) ನಡೆಯುತ್ತದೆ. ಕೊನೆಗೆ ನಾಲ್ಕು ಬಳಗದವರ (ಕೂರ್ಮೆರು, ಬಾದೆರು, ಮಾನವೆರು ಹಾಗೂ ಮುಂಡನ ಬಳಿಗಳು) ಉಪಸ್ಥಿತಿಯಲ್ಲಿ ಕಾಲಾವಧಿಯ ದೈವದ ಕ್ರಿಯೆ(ಕಾಲಜಿ) ನಡೆಯುವ ದಿನವೇ ವಿಧಿವತ್ತಾಗಿ ಮದುವೆ ನಡೆಯುತ್ತದೆ. ಹುಡುಗಿಯ ಮನೆಗೆ ದಿಬ್ಬಣ ಬರುವುದು. ತೆಂಗಿನ ಮರದ ಬುಡದಲ್ಲಿ ಮದುಮಕ್ಕಳ ತಲೆಗೆ ನಾಲ್ಕು ಬಳಿಯವರ ಸಮ್ಮುಖದಲ್ಲಿ ಹೆತ್ತವರು ಧಾರೆನೀರು ಹೊಯ್ಯುತ್ತಾರೆ. ಹುಡುಗ ಹುಡುಗಿಗೆ ಕರಿಮಣಿ ಕಟ್ಟುವ ಸಂಪ್ರದಾಯವಿಲ್ಲ. ಮದುಮಗಳನ್ನು ಶೃಂಗರಿಸುವಾಗಲೇ ಅತ್ತಿಗೆ ಅಥವಾ ಇತರ ಮಹಿಳೆಯಾರಾದರೂ ಕಟ್ಟುತ್ತಾರೆ. ಮದುವೆಯ ಮರುದಿನ ಗಂಡನ ಮನೆಗೆ ನವವಧುವನ್ನು ಕರೆದುಕೊಂಡು ಹೋಗುತ್ತಾರೆ ಎಂಬುದನ್ನು ಪಾಂಗಾಳ ಬಾಬು ಕೊರಗ ಅವರು

ಉಲ್ಲೇಖಿಸುತ್ತಾರೆ. (ಪು.೮೬, ೨೦೧೩). ಅಲ್ಲಿಗೆ ಸರಳವಾದ, ಸಾಂಪ್ರದಾಯಿಕ ವಿವಾಹ ಕೊನೆಗೊಳ್ಳುತ್ತದೆ.

ಕರಾವಳಿಯ ದಕ್ಷಿಣ ಪ್ರದೇಶದ ಕೊರಗರಲ್ಲಿ ಸರಳ ವಿವಾಹ ನಡೆದರೆ ಉತ್ತರದ ಕುಂದಾಪುರ ಪ್ರದೇಶದ ಕೊರಗರಲ್ಲಿ ಐದು ದಿನಗಳ ಮದುವೆ ನಡೆಯುತ್ತದೆ. ಇಲ್ಲಿನ ಕೊರಗರಲ್ಲಿ ನಿಶ್ಚಯ ಕಾರ್ಯಕ್ರಮವಿದೆ. ಎರಡೂ ಕಡೆಯ ಗುರಿಕಾರರ ಸಮ್ಮುಖದಲ್ಲಿ ವೀಳ್ಯ ವಿನಿಮಯ ಕಾರ್ಯಕ್ರಮ ನಡೆಯುತ್ತದೆ. ಐದು ದಿನಗಳ ಸಾಂಪ್ರದಾಯಿಕ ವಿವಾಹ ಸಮಾರಂಭದ ಮೊದಲನೇ ದಿನ ಕುಟುಂಬಿಕರು, ಬಂಧು ಬಳಗದವರು ಮದುವೆ ಮನೆಯಲ್ಲಿ ಸೇರುತ್ತಾರೆ. ಎರಡನೇ ದಿನ ಕುಟುಂಬದ ಗುರಿಕಾರನ ಉಪಸ್ಥಿತಿಯಲ್ಲಿ ಬಂಧು-ಬಾಂಧವರು ತಂದಂಥ ಹೊರೆಯನ್ನು ಸ್ವೀಕರಿಸಲಾಗುತ್ತದೆ. ಎರಡನೇ ದಿನ ರಾತ್ರಿ ವಿವಾಹ ಮುಹೂರ್ತ ನಡೆಯುತ್ತದೆ. ರಾತ್ರಿ ೭ರಿಂದ ೮ ಗಂಟೆಯೊಳಗಿನ ಸಮಯದಲ್ಲಿ ವಧುವನ್ನು ಅಂಗಳಕ್ಕೆ ಕರೆತಂದು ಪೂರ್ವಾಭಿಮುಖವಾಗಿ ನಿಲ್ಲಿಸುತ್ತಾರೆ. ತೆಂಗಿನ ಕಾಯಿಯ ಹಾಲಿನಲ್ಲಿ ಬೆರೆಸಿದ ಅರಿಶಿಣ(ತುಳು: ಪೇರ್ ಮಂಜೊಲು)ವನ್ನು ವಧುವಿನ ಕೈಕಾಲು, ಮುಖಕ್ಕೆ ಹಚ್ಚುತ್ತಾರೆ. ಇಲ್ಲಿ ಪ್ರಧಾನವಾದ ಐದು ಬಳಿಗಳ ಆಹ್ವಾನಿತರನ್ನು ಗೌರವಿಸಲಾಗುತ್ತದೆ. ಈ ಜವಾಬ್ದಾರಿ ಕುಟುಂಬದ ಗುರಿಕಾರನದ್ದಾಗಿರುತ್ತದೆ. ನಂತರ ನವವಧುವಿಗೆ ಸ್ನಾನ ಮಾಡಿಸುತ್ತಾರೆ. ಗುರಿಕಾರ ನವವಧುವಿಗೆ ಮುಹೂರ್ತದ ಸೀರೆಯನ್ನು ನೀಡಿ ಮುಹೂರ್ತದ(ಮೂರ್ತ) ಮಣಿ ಹಾಕಲಾಗುತ್ತದೆ. ಈ ಸಂದರ್ಭದಲ್ಲೂ ಐದು ಬಳಿಗಳ ಆಹ್ವಾನಿತರಿಗೆ ಗೌರವ ನೀಡಬೇಕಾಗುತ್ತದೆ. ಮುಹೂರ್ತದ ಮಣೆಯಲ್ಲಿ ಕುಳಿತ ವಧುವಿಗೆ ಗುರಿಕಾರ ಮೂರ್ತದ ಹಳದಿ ಮಣಿಸರವನ್ನು ಕಟ್ಟುತ್ತಾನೆ. ಈ ರೀತಿಯ ವಿಧಿವಿಧಾನಗಳು ಹೆಣ್ಣು-ಗಂಡು ಹೀಗೆ ಎರಡೂ ಮನೆಗಳಲ್ಲಿ ಏಕಕಾಲದಲ್ಲಿ ನಡೆಯುತ್ತವೆ.

ಮೂರನೇ ದಿನ ಮದುವೆ. ಕೊರಗರು ಬಿರ್ದ್ ಎಂದು ತುಳು ಭಾಷೆಯಲ್ಲಿ ಮದುವೆಯನ್ನು ಕರೆಯುತ್ತಾರೆ. ಬಹುತೇಕ ಮದುವೆಗಳು ಹುಡುಗಿಯ ಮನೆಯಲ್ಲಿಯೇ ನಡೆಯುವುದು ಸಂಪ್ರದಾಯ. ಗಂಡಿನ ಕಡೆಯ ದಿಬ್ಬಣ ಹೆಣ್ಣಿನ ಮನೆಗೆ ಬಂದಾಗ ಹಿರಿಯ ಮಹಿಳೆಯೊಬ್ಬರು ದಿಬ್ಬಣವನ್ನು ಎದುರುಗೊಂಡು ದೃಷ್ಟಿ ತೆಗೆಯುತ್ತಾರೆ. ನವವರನಿಗೆ ದಾರಿಯಲ್ಲಿ ಬರುವಾಗ ವಕ್ರದೃಷ್ಟಿಯಾಗಿದ್ದರೆ ಹೋಗಲಾಡಿಸುವ ಸಲುವಾಗಿ ದೃಷ್ಟಿ ತೆಗೆಯಲಾಗುತ್ತದೆ.

ಮದುಮಗ ಮತ್ತು ಸಕುಟುಂಬ ಪರಿವಾರವನ್ನು ಆದರದಿಂದ ಸ್ವಾಗತಿಸುತ್ತಾ ವಧುವಿನ ಕುಟುಂಬದ ಗುರಿಕಾರ ಒಂದು ಕೋಳಿ ಮತ್ತು ತೆಂಗಿನಕಾಯಿಯನ್ನು ಸಾಂಕೇತಿಕವಾಗಿ ತೋರಿಸುವ ಸಂಪ್ರದಾಯ ಕೊರಗರಲ್ಲಿದೆ. ಮದುವೆಯ ಊಟ ಮಾಂಸದೂಟವಾಗಿರುತ್ತದೆ ಎಂಬುದನ್ನು ಈ ರೀತಿ ಸಂಕೇತಗಳ ಮೂಲಕ ತಿಳಿಸುತ್ತಾರೆ. ಗುರಿಕಾರ ತೋರಿಸಿದ ತೆಂಗಿನಕಾಯಿಯನ್ನು ದಿಬ್ಬಣದಲ್ಲಿ ಬಂದ ಯಾರಾದರೊಬ್ಬರು ಕೈಯ ಮೂಲಕ ಒಡೆಯಬೇಕೆಂದು ಸವಾಲು ಹಾಕುತ್ತಾರೆ. ವರನ ಕಡೆಯವರಿಗೆ ಇದು ಪ್ರತಿಷ್ಠೆಯ ಸವಾಲು. ಕೊನೆಗೆ ಯಾರಾದರೊಬ್ಬರು ಕೈಯಿಂದ ತೆಂಗಿನಕಾಯಿಯನ್ನು ಒಡೆದು ಚೂರು ಚೂರು ಮಾಡಿದಾಗಲೇ ವರನ ಕಡೆಯ ಬಳಗದವರಿಗೆ ನಿರಾಳ-ಸಂತೃಪ್ತಿ.

ಮೂರು ಬಾರಿ ವೀಳ್ಯವನ್ನು ಬದಲಾಯಿಸುವ ಮೂಲಕ ಅಂತಿಮ ಒಪ್ಪಂದಕ್ಕೆ ವಧು-ವರನ ಕಡೆಯವರು ಬರುತ್ತಾರೆ. ವಧುವಿನ ಮನೆಯ ಅಂಗಳದ ಚಪ್ಪರದಡಿಯಲ್ಲಿ ಚಾಪೆ ಹಾಸಿ ಎದುರುಬದುರು ಕುಳಿತು ವಿವಾಹ ಒಪ್ಪಂದವನ್ನು ಮಾಡಿಕೊಳ್ಳುತ್ತಾರೆ. ಎರಡೂ ಕಡೆಯ ಗುರಿಕಾರರು ತಮ್ಮಿಂದ ಯಾವುದೇ ತಪ್ಪು ಸಂಭವಿಸುವುದಿಲ್ಲ. ನಾವು ಜವಾಬ್ದಾರಿಯನ್ನು ಹೊರುತ್ತೇವೆ ಎಂದು ಭರವಸೆಯ ಮಾತುಗಳನ್ನಾಡುತ್ತಾರೆ. ಹಾಗೆಯೇ ಅರ್ಥದ ಪಣವು(ತೆರ) ರೂಪವಾಗಿ ನಾಲ್ಕಾಣೆ ಅಥವಾ ಎಂಟಾಣೆಯನ್ನು ಮದುಮಗಳಿಗೆ ಕಡ್ಡಾಯವಾಗಿ ನೀಡಬೇಕಾಗುತ್ತದೆ. ಇಂದು ಅರ್ಥದ ಪಣ ಐದುನೂರರ ಗಡಿ ದಾಟಿದೆ.

ಒಪ್ಪಂದವಾದ ನಂತರ ವಧು-ವರರನ್ನು ಪೂರ್ವಾಭಿಮುಖವಾಗಿ ನಿಲ್ಲಿಸಿ ಬಂಧು-ಬಳಗ-ನೆಂಟರಿಷ್ಟರ ಸಮ್ಮುಖದಲ್ಲಿ ಕರಿಮಣಿ ಕಟ್ಟುವ ಶಾಸ್ತ್ರ ನಡೆಸುತ್ತಾರೆ. ಬಳಿಕ ತೆಂಗಿನ ಮರದ ಬುಡದಲ್ಲಿ ವಧು-ವರರನ್ನು ಮಣೆ ಹಾಕಿ ಕುಳ್ಳಿರಿಸಿ ತಲೆಗೆ ಧಾರೆ ಎರೆಯುತ್ತಾರೆ. ಅಲ್ಲಿಗೆ ಮದುವೆಯ ಪ್ರಮುಖ ಘಟ್ಟ ಮುಗಿದ ಹಾಗೆ. ಮಾಂಸದೂಟ ಭೋಜನದ ವ್ಯವಸ್ಥೆ ಮಾಡಿರುತ್ತಾರೆ. ನಾಲ್ಕನೇ ದಿನ ಮಧ್ಯಾಹ್ನ ವಧುವನ್ನು 'ಮದುಮಗನ'(ಗಂಡನ) ಮನೆಗೆ ಕರೆತರಲಾಗುತ್ತದೆ. ಐದನೇ ದಿನ ಗಂಡನ ಮನೆಯಲ್ಲಿ 'ದೇಸೆ'(ಆರತಕ್ಷತೆ) ಕಾರ್ಯಕ್ರಮವನ್ನು ನಿಗದಿಗೊಳಿಸಿರುತ್ತಾರೆ. ಅಲ್ಲಿಗೆ ಐದು ದಿನಗಳ ವಿವಾಹ ಸಂಪ್ರದಾಯ ಮುಕ್ತಾಯಗೊಳ್ಳುತ್ತದೆ.

ಈ ಮೊದಲು ಪ್ರಸ್ತಾಪಿಸಿದಂತೆ ಕೊರಗರಲ್ಲಿ ವಿವಾಹ ಸಂಪ್ರದಾಯಗಳು ಪ್ರಾದೇಶಿಕವಾಗಿ ಭಿನ್ನತೆಯಿಂದ ಕೂಡಿರುತ್ತವೆ ಎಂಬುದು ಗಮನಾರ್ಹ. ಕೆಲವೊಂದು ಪ್ರದೇಶಗಳಲ್ಲಿ

ಹುಡುಗಿಯ ಮನೆಯಲ್ಲಿ ವಿವಾಹ ಕಾರ್ಯಕ್ರಮ ನೆರವೇರುತ್ತದೆ. ಅದಕ್ಕಾಗಿ ಹುಡುಗಿ ಕಡೆಯವರು ಒಂದು ಮುಡಿ ಅಕ್ಕಿ, ಒಂದು ಮುಡಿ ಭತ್ತ, ಸೌತೆಕಾಯಿ ಮತ್ತು ಮೆಣಸು ಇತ್ಯಾದಿ ದವಸ ಧಾನ್ಯಗಳನ್ನು ಸಂಗ್ರಹಿಸಬೇಕು. ಮದುಮಗನನ್ನು ಅಕ್ಕಿ ಮುಡಿಯ ಮೇಲೆ ಮತ್ತು ಮದುಮಗಳನ್ನು ಭತ್ತದ ಮುಡಿಯ ಮೇಲೆ ಕುಳ್ಳಿರಿಸಲಾಗುತ್ತದೆ. ಅಕ್ಕಿ, ಭತ್ತ ಮುಡಿಗಳಿಲ್ಲದಿದ್ದರೆ ಕವುಚಿ ಹಾಕಿದ ಬುಟ್ಟಿಯ ಮೇಲೆ ಕುಳ್ಳಿರಿಸುವ ಸಂಪ್ರದಾಯವೂ ಇದೆ. ಹುಡುಗನ ಕುಟುಂಬದ ಗುರಿಕಾರನು ಹುಡುಗಿಗೆ ಮಣಿಸರವನ್ನು ಕಟ್ಟಿ ಕಾಲುಂಗುರ ತೊಡಿಸುತ್ತಾನೆ. ನಂತರ ಎಲ್ಲರೂ ಸೂರ್ಯನಿಗೆ ಕೈಮುಗಿಯುತ್ತಾರೆ. ಮದುಮಗ ಮದುಮಗಳಿಗೆ ಬೆಳ್ಳಿಯ ನಾಣ್ಯವೊಂದನ್ನು ಕೊಡುತ್ತಾನೆ. ಸೇರಿದ ಬಂಧು-ಬಾಂಧವರು ವಧು-ವರರಿಗೆ ಅಕ್ಕಿಕಾಳು ಹಾಕಿ ಆಶೀರ್ವದಿಸುತ್ತಾರೆ. ಮಾಂಸದೂಟ ಮಾಡಿ ಕಳ್ಳು ಕಡಿದು ಡೋಲು ಬಾರಿಸಿ ಸಂತೋಷದಿಂದ ಕುಣಿಯುತ್ತಾರೆ.

ಮದುವೆ ಕಾರ್ಯಕ್ರಮಾದಿಯಾಗಿ ಬಹುತೇಕ ಶುಭಸಮಾರಂಭಗಳಲ್ಲಿ ಕೊರಗರು ಸಾಂಪ್ರದಾಯಿಕವಾಗಿ ಮಾಂಸದೂಟವನ್ನು ಬಯಸುತ್ತಾರೆ. ಹಾಗೆಯೇ ಡೋಲು ಮತ್ತು ಕೊಳಲುವಾದನ ಕೊರಗರ ಕಲೆಯ ಅಸ್ಮಿತೆಯನ್ನು ತಿಳಿಸುತ್ತದೆ.

ಭಾರತದ ಬಹುತೇಕ ಬುಡಕಟ್ಟು, ಹಿಂದುಳಿದ ಅಲೆಮಾರಿ ಮತ್ತು ಅರೆಅಲೆಮಾರಿ ಸಮುದಾಯಗಳು ತಮ್ಮತನವನ್ನು ಉಳಿಸಿಕೊಳ್ಳಲು ಹೆಣಗಾಡುತ್ತಿರುವುದನ್ನು ನಾವು ಕಾಣಬಹುದು. ಕಾರಣ ಬದಲಾದ ಸಮಾಜ, ಸಂಸ್ಕೃತಿ, ಜಾಗತೀಕರಣ, ಖಾಸಗೀಕರಣ ಮುಂತಾದವುಗಳ ತೀವ್ರವಾದ ಪ್ರಭಾವ. ಇವುಗಳ ಪ್ರಭಾವಗಳಿಗೆ ಒಳಗಾಗದೆ ಜನರೇ ಇಲ್ಲ ಎಂಬಂತಾಗಿದೆ. ಕೊರಗರೂ ಕೂಡ ಬದಲಾವಣೆಯನ್ನು ಕಂಡಿದ್ದಾರೆ, ಕಾಣುತ್ತಿದ್ದಾರೆ. ಕೊರಗರ ವಿವಾಹ ಕಾರ್ಯಕ್ರಮದಲ್ಲಿ ಇದನ್ನು ನಿಚ್ಚಳವಾಗಿ ದೃಢೀಕರಿಸಲು ಸಾಧ್ಯ. ಪರಂಪರೆಯಿಂದ ಬಂದಂಥ ಕರಿಮಣಿ ಕಟ್ಟುವ ಶಾಸ್ತ್ರದಲ್ಲಿ ಈ ಹಿಂದೆ ಕುಟುಂಬದ ಗುರಿಕಾರ ವಧುವಿನ ಕೊರಳಿಗೆ ಕಟ್ಟುತ್ತಿದ್ದ. ಆದರೆ ಇಂದು ಮದುವೆಯಾಗುವ ಗಂಡೇ ವಧುವಿನ ಕೊರಳಿಗೆ ಕರಿಮಣಿ ಕಟ್ಟುವ ಸಂಪ್ರದಾಯವನ್ನು ರೂಢಿಸಿಕೊಂಡಿರುವುದನ್ನು ಗಮನಿಸಬಹುದು. ಐದು ದಿನಗಳವರೆಗಿನ ಮದುವೆ ಸಮಾರಂಭಗಳು ಒಂದು ದಿನಕ್ಕೆ ಸೀಮಿತವಾಗಿದೆ. ಮನೆಯ ಅಂಗಳದಲ್ಲಿ ಚಪ್ಪರ ಹಾಕಿ ಸಂಭ್ರಮ ಸಡಗರದಿಂದ ನಡೆಯುತ್ತಿದ್ದ ವಿವಾಹಗಳು ಇಂದು ಪಟ್ಟಣ-ನಗರಗಳ ಕಲ್ಯಾಣ ಮಂಟಪಗಳಿಗೆ ಸ್ಥಳಾಂತರಗೊಂಡಿವೆ. ಸಂಪ್ರದಾಯ-ಶಾಸ್ತ್ರಗಳಿಗೆ ತಿಲಾಂಜಲಿಯನ್ನು ನೀಡುತ್ತಿರುವ ಎಲ್ಲ ಸಮುದಾಯಗಳಂತೆ

ಕೊರಗ ಬುಡಕಟ್ಟು ಸಮುದಾಯವೂ ಮುಂದಾಗಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಶಾಸ್ತ್ರ-ಸಂಪ್ರದಾಯಗಳ ಮುಖಾಂತರ ಪರಿಸರ ಪೂರಕವಾದ, ಜೀವಪೋಷಕವಾದ ಅಂಶಗಳು ಅಪಾರವಾಗಿದ್ದರೂ ತೀವ್ರಗತಿಯಲ್ಲಿ ಬದಲಾವಣೆಯನ್ನು ಕಾಣುತ್ತಿರುವ ಸಮಾಜ ಕಣ್ಣಿದ್ದೂ ಕುರುಡನಂತೆ ಇತರೆ ಸಂಸ್ಕೃತಿಗಳ ನಡವಳಿಕೆ, ರೀತಿ-ರಿವಾಜುಗಳನ್ನು ಅನುಸರಿಸುತ್ತಿರುವುದು ವಿಷಾದನೀಯ. ಕೊರಗರೂ ಸೇರಿದಂತೆ ಭಾರತದ ಬಹುತೇಕ ಬುಡಕಟ್ಟು ಸಮುದಾಯಗಳು ತಮ್ಮ ಅಸ್ಮಿತೆಯನ್ನು ಅನನ್ಯತೆಯನ್ನು ದೂರಮಾಡುತ್ತಿವೆ ಎಂದರೆ ತಪ್ಪಾಗಲಾರದು. ಅದು ಅವರಿಗೆ ಅನಿವಾರ್ಯವೂ ಆಗಬಹುದು.

"ಕೊರಗರಲ್ಲಿ ವಿಧವೆಯ ಪರಿಕಲ್ಪನೆ ಇಲ್ಲ. ಗಂಡ ಸತ್ತರೆ ಆಕೆ ಬೇರೆ ಮದುವೆ ಮಾಡಿಕೊಳ್ಳಲು ಸ್ವತಂತ್ರಳು. ಹಾಗೆಯೇ ಗಂಡಸರು ಮೂರು ಮದುವೆ ಮಾಡಿಕೊಳ್ಳಲು ಅವಕಾಶವಿದೆ"[೪] ಎಂದು ಪುರುಷೋತ್ತಮ ಬಿಳಿಮಲೆ ಅವರು ಹೇಳಿದ್ದಾರೆ. ಆದರೆ ಎ.ವಿ. ನಾವಡರು "ಕೊರಗರ ಒಳಾಡಳಿತ ವ್ಯವಸ್ಥೆ ಗಂಡಿನ ಮರುಮದುವೆಗೆ ವಿಶೇಷ ಪ್ರೋತ್ಸಾಹ ನೀಡುತ್ತಿಲ್ಲ"[೫] ಎಂದು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಕ್ಷೇತ್ರಕಾರ್ಯದಲ್ಲಿ ಪ್ರಶ್ನಿಸಿದಾಗ ಮರುವಿವಾಹಕ್ಕೆ ಸಮ್ಮತಿಯಿರುವುದಾಗಿ ಕಂಡುಬಂದಿದೆ. ಗಂಡ-ಹೆಂಡತಿಯ ವೈವಾಹಿಕ ಜೀವನದಲ್ಲಿ ಜಗಳಗುಳುಂಟಾದಾಗ ಪರಿಹರಿಸುವ ಮತ್ತು ಬೇರೆಯಾಗಿಸುವ ಅವಕಾಶ ಹಿರಿಯರ ಒಪ್ಪಿಗೆಯಿಂದ ನಡೆಯುತ್ತದೆ. ಜೊತೆಯಾಗಿ ಜೀವನ ಮಾಡಲು ಕಷ್ಟಸಾಧ್ಯವೆಂದಾಗ ವಿಚ್ಛೇದನ ಕೊಡಲು ಕೊರಗರ ಸಾಮಾಜಿಕ ಕಟ್ಟಳೆಗಳು ಅನುಮತಿ ನೀಡುತ್ತದೆ. ವಿಚ್ಛೇದನದ ನಂತರವೂ ಸ್ತ್ರೀ ಮರುವಿವಾಹವಾಗಲು ಯಾವುದೇ ಅಡೆತಡೆಗಳಿಲ್ಲ. ಕೊರಗರಲ್ಲಿ ಬಹುತೇಕ ವಿಧುರರು ವಿಧವೆಯರನ್ನೇ ವಿವಾಹವಾಗಿರುವುದನ್ನು ಗಮನಿಸಬಹುದು.

ಒಂದೇ ಬಳಿಯ ಗಂಡು-ಹೆಣ್ಣು ವಿವಾಹವಾಗುವುದಕ್ಕೆ ಕೊರಗರಲ್ಲಿ ನಿಷೇಧವಿದೆ. ಹಾಗೆಯೇ ಆಷಾಢ(ಆಟಿ) ತಿಂಗಳಲ್ಲಿ ಮತ್ತು ಸೂತಕದ ದಿನಗಳಲ್ಲಿ ವಿವಾಹ ಸಮಾರಂಭವನ್ನು ನಡೆಸಲು ನಿಷೇಧವಿದೆ. ಯಾವುದೇ ಜಾತಕದ ಆಧಾರದ ಮೇಲೆ ಮುಹೂರ್ತ ನಿಗದಿಪಡಿಸುವ ಸಂಪ್ರದಾಯ ಕೊರಗರಲ್ಲಿ ಇಲ್ಲ. ಆದರೆ ಇತ್ತೀಚಿನ ದಿನಗಳಲ್ಲಿ ಬಲಾವಣೆಯಾಗಿರುವುದನ್ನು ಒಪ್ಪಿಕೊಳ್ಳಲೇಬೇಕು. ಅತ್ಯಂತ ಕಡಿಮೆ ಜನಸಂಖ್ಯೆಯಿರುವ ಕೊರಗರು ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಬೇಕಾದರೆ ಇತರೆ ಸಮುದಾಯಗಳ ಪ್ರಭಾವಕ್ಕೆ ಒಳಗಾಗಲೇಬೇಕಾದ ಅನಿವಾರ್ಯತೆ ಇರುವುದನ್ನು ಅಲ್ಲಗೆಳೆಯಲಾಗದು.

**ಸೀಮಂತ(ಬಯಕೆ)**

ಕೊರಗರಲ್ಲಿ ಚೊಚ್ಚಲ ಬಸುರಿಗೆ ಏಳನೇ ತಿಂಗಳಲ್ಲಿ ಸೀಮಂತ(ಬಯಕೆ) ಮಾಡುವ ಸಂಪ್ರದಾಯವಿದೆ. ಏಳನೇ ತಿಂಗಳಲ್ಲಿ ಬಯಕೆ ಕಾರ್ಯ ಮಾಡಿ ತವರುಮನೆಗೆ ಕರೆದುಕೊಂಡು ಹೋಗುವುದು ಪದ್ಧತಿ. ನಂತರ ಹೆರಿಗೆ-ಬಾಣಂತನ ತವರುಮನೆಯಲ್ಲಿಯೇ ನಡೆಯುತ್ತದೆ. ನಿಗದಿಪಡಿಸಿದ ದಿನದಂದು ತವರುಮನೆಯವರು ವಸ್ತ್ರ ಮತ್ತು ವಿಶೇಷ ಭಕ್ಷ್ಯಗಳೊಂದಿಗೆ ಅಳಿಯನ ಮನೆಗೆ ಬರುತ್ತಾರೆ. ತವರುಮನೆಯವರು ತಂದಂಥ ಸೀರೆ, ರವಿಕೆ, ಉಂಗುರ, ಬಳೆ, ಮಣಿಸರಗಳನ್ನು ಬಸುರಿಗೆ ಉಡಿಸಲಾಗುತ್ತದೆ. ತಮ್ಮ ಕುಲದೈವವಾದ ಕೊರಗ ತನಿಯನಿಗೆ ಕೈಮುಗಿದು ಪ್ರಾರ್ಥಿಸುತ್ತಾರೆ. ಗರ್ಭಿಣಿಗೆ ಬಗೆ ಬಗೆಯ ತಿಂಡಿ ತಿನಿಸುಗಳನ್ನು ಬಡಿಸುತ್ತಾರೆ. ಕೋಳಿ ಮಾಂಸದೂಟ ವಿಶೇಷವಾಗಿರುತ್ತದೆ. ಹಾಗೆಯೇ ನುಗ್ಗೆ ಸೊಪ್ಪಿನ ಪಲ್ಯ, ಚಕ್ಕುಲಿ, ಬಾಳೆಹಣ್ಣು ಇರಬೇಕೆಂಬ ನಂಬಿಕೆ ಕೊರಗರಲ್ಲಿದೆ.

ವಿಶೇಷ ಊಟದ ಬಳಿಕ ಗರ್ಭಿಣಿ ಸ್ತ್ರೀಯನ್ನು ತವರುಮನೆಯವರು ಕರೆದುಕೊಂಡು ಹೋಗುತ್ತಾರೆ. ಗರ್ಭಿಣಿ ಸ್ತ್ರೀಯ ಸೀರೆ ಸೆರಗಿಗೆ ಸ್ವಲ್ಪ ಕರಿಮೆಣಸು, ಕಾಳಜೀರಿಗೆ ಮತ್ತು ಬೆಳ್ಳುಳ್ಳಿಗಳನ್ನು ಕಟ್ಟುವ ಪದ್ಧತಿ ಕೊರಗರಲ್ಲಿದೆ. ಇದನ್ನು 'ತಾತಾಯಿ ಮುಂಚಿ' ಎಂದು ಕರೆಯುತ್ತಾರೆ. ಇದನ್ನು ತೆಗೆದುಕೊಂಡ ಗರ್ಭಿಣಿ ತಿರುಗಿ ನೋಡದೆ ತವರುಮನೆ ಸೇರಬೇಕೆಂಬ ನಿಯಮ, ನಂಬಿಕೆ ಕೊರಗರಲ್ಲಿದೆ. ನಂತರ ಹೆರಿಗೆಯಾಗಿ ಬಾಣಂತಿಯಾಗಿದ್ದಾಗ ಗಂಡನ ಮನೆಯಿಂದ ತಂದಂಥ 'ತಾತಾಯಿ ಮುಂಚಿ' ಪದಾರ್ಥಗಳಿಗೆ ಉಪ್ಪು ಹಾಕಿ ಅರೆದು ಮುದ್ದೆ ಮಾಡಿ ಊಟಕ್ಕೆ ಕೊಡುವ ರೂಢಿಯಿದೆ. ಆ ಮೂಲಕ ದೇಹಾರೋಗ್ಯದ ಕಾಳಜಿ ಇರುವುದನ್ನು ಗಮನಿಸಬಹುದು.

**ಸಾವು**

ಕೊರಗರು ಸತ್ತವರನ್ನು ಹೂಳುವ ಪದ್ಧತಿಯನ್ನು ಅನುಸರಿಸುತ್ತಾರೆ. ಸುಡುವ ಪದ್ಧತಿ ಇವರಲ್ಲಿಲ್ಲ. ಸಾವು ಸಂಭವಿಸಿದ ತಕ್ಷಣ ಕೊಡ್ತರ್(ಗುರಿಕಾರ) ಎಲ್ಲರಿಗೂ ಸುದ್ದಿ ಮುಟ್ಟಿಸುತ್ತಾನೆ. ಕುಟುಂಬದ ಇತರೆ ಸದಸ್ಯರು ಬಂಧು-ಬಳಗಕ್ಕೆ ನಿಧನದ ವಾರ್ತೆಯನ್ನು ತಲುಪಿಸುತ್ತಾರೆ. ಮನೆಯೊಳಗೆ ಹೆಣವನ್ನು ದಕ್ಷಿಣ ಭಾಗಕ್ಕೆ ತಲೆಮಾಡಿ ಮಲಗಿಸಲಾಗುತ್ತದೆ. ಹೆಣದ ತಲೆಯ ಹತ್ತಿರದಲ್ಲಿ ದೀಪವೊಂದನ್ನು ಉರಿಸಲಾಗುತ್ತದೆ. ಸತ್ತವರ ಆತ್ಮ ಹೊರ ಹೋಗಲು ಅನುಕೂಲವಾಗುವಂತೆ ತಲೆಯ ನೇರಕ್ಕೆ ಚಾವಣಿಯ ಹಂಚನ್ನು ಸರಿಸುವುದು ಅಥವಾ ತೂತು ಮಾಡುತ್ತಾರೆ. ಸಂಬಂಧಿಕರು, ಆಪ್ತರು ಎಲ್ಲ ಸೇರಿದ ನಂತರ ಗುರಿಕಾರ

ಸತ್ತ ವ್ಯಕ್ತಿಯ ಮಕ್ಕಳಿಗೆ ಗುದ್ದಲಿ ಕೊಡುತ್ತಾರೆ. ಗುದ್ದಲಿ ಪಡೆದ ಮಕ್ಕಳು ಮತ್ತು ಇತರರೆಲ್ಲ ಸೇರಿ ಗುರಿಕಾರರು ಸೂಚಿಸಿದ ಸ್ಥಳದಲ್ಲಿ ಐದು ಅಡಿ ಆಳದ ಹೊಂಡವನ್ನು ನಿರ್ಮಿಸುತ್ತಾರೆ.

ಬಂಧು ಬಳಗದವರೆಲ್ಲ ಸೇರಿ ಹೆಣಕ್ಕೆ ಸ್ನಾನ ಮಾಡಿಸುತ್ತಾರೆ. ಹಲಸಿನ ತೊಗಟೆ ಹಾಕಿ ಬಿಸಿ ಮಾಡಿದ ನೀರಿನಲ್ಲಿ ಅರಿಶಿಣ ಹಾಕಿ ಹೆಣಕ್ಕೆ ಸ್ನಾನ ಮಾಡಿಸಲಾಗುತ್ತದೆ. ಚಾಪೆಯಲ್ಲಿ ಹೆಣವನ್ನು ಸುತ್ತಿ ಹಗ್ಗಗಳ ಸಹಾಯದಿಂದ ಐದು ಅಡಿ ಆಳದ ಹೊಂಡಕ್ಕೆ ಇಳಿಸಲಾಗುತ್ತದೆ. ಮೊತ್ತಮೊದಲು ಮಕ್ಕಳು ಮಣ್ಣು ಹಾಕುತ್ತಾರೆ. ವೀಳ್ಯದೆಲೆ ಇಟ್ಟು ನಿಶ್ಚಿತ ಉತ್ತರಕ್ರಿಯೆಗಾಗಿ ಸತ್ತವ್ಯಕ್ತಿಯನ್ನು ಆಹ್ವಾನಿಸಿ ಮನೆಗೆ ಹಿಂತಿರುಗುತ್ತಾರೆ. ಅರಿಶಿಣ ಬೆರೆಸಿದ ನೀರನ್ನು ಹಲಸಿನ ಎಲೆಯಲ್ಲಿ ಪ್ರೋಕ್ಷಿಸಿದರೆ ಶುದ್ಧಗೊಳ್ಳುವರು. ಹೆಣ ಹೂತ ೪೨ನೇ ದಿನ ದಾಟಿದ ಬಳಿಕ ಉತ್ತರಕ್ರಿಯೆ ಸದ್ಗತಿಕಾರ್ಯ ಮಾಡುವುದು ಕೊರಗರ ಸಂಪ್ರದಾಯ. ಉತ್ತರಕ್ರಿಯೆ ದಿನದಂದು ರಾತ್ರಿ ಗತಿಸಿದ ಹಿರಿಯರೊಟ್ಟಿಗೆ ಸೇರಿಸುವ ಸಂಪ್ರದಾಯ ಕೊರಗರಲ್ಲಿದೆ.

ಹೆಣ ಹೊರುವ ಅಧಿಕಾರ ಗಂಡುಮಕ್ಕಳಿಗೆ ಮಾತ್ರ ಇದೆ. ಹಾಗೆಯೇ ಹೆಣ್ಣುಮಕ್ಕಳು ಸ್ಮಶಾನದ ಹತ್ತಿರ ಹೋಗುವಂತಿಲ್ಲ. ಸತ್ತ ವ್ಯಕ್ತಿಯನ್ನು ಹೂತ ಮೂರನೇ ದಿನ ದೂಪೆ ಮಾಡಿ ಅದರ ಮೇಲೊಂದು ಕಲ್ಲು ಇಡುತ್ತಾರೆ. ಕಲ್ಲಿನ ಮೇಲೆ ಒಂದು ಎಳನೀರು ಮತ್ತು ಅನ್ನವನ್ನು ಇಟ್ಟು ಬರುತ್ತಾರೆ. ಮೂರು ದಿನಗಳ ಸೂತಕವನ್ನು ಕಟ್ಟುನಿಟ್ಟಾಗಿ ಪಾಲಿಸಲಾಗುತ್ತದೆ. ಮಾಂಸಾಹಾರ, ಮದ್ಯಸೇವನೆ ಇತ್ಯಾದಿಗಳಿಗೆ ನಿಷೇಧವಿರುತ್ತದೆ. ಹದಿಮೂರನೇ ದಿನ ಸದ್ಗತಿಕಾರ್ಯವನ್ನು ನೆರವೇರಿಸುತ್ತಾರೆ. ಇತ್ತೀಚಿನ ದಿನಗಳಲ್ಲಿ ಕೆಲವು ಪ್ರದೇಶಗಳಲ್ಲಿ ಸತ್ತ ಕೊರಗರನ್ನು ಹೂಳುವ ಬದಲು ಸುಡುತ್ತಾರೆ. ಸತ್ತವರು 'ಕುಲೆ'ಯಾಗಿ ಪರಿವರ್ತನೆಗೊಂಡು ಸದಾ ಅಶರೀರವಾಗಿ ಜೊತೆಯಲ್ಲಿರುತ್ತಾರೆ ಎಂಬ ನಂಬಿಕೆ ಕೊರಗರಲ್ಲಿದೆ.

**ವಾರ್ಷಿಕಾವರ್ತನ ಆಚರಣೆಗಳು**

ಆದಿಮ ಬುಡಕಟ್ಟು ಸಮುದಾಯವಾದ ಕೊರಗರ ಆರಾಧ್ಯದೈವ ಕೊರಗ ತನಿಯ. ಕೊರಗ ತನಿಯನನ್ನು ತಮ್ಮ ಸಾಂಸ್ಕೃತಿಕ ವೀರನೆಂದೂ, ಆದ್ಯಪುರುಷನೆಂದೂ ಕರೆಯುತ್ತಾರೆ ಕೊರಗರು. ಈ ಹಿನ್ನೆಲೆಯಲ್ಲಿ ವಾರ್ಷಿಕವಾಗಿ ಅಗೆಲು, ತಂಬಿಲ, ಕೋಲಗಳಂಥ ಆಚರಣೆಗಳು ಕೊರಗ ತನಿಯನಿಗೆ ಸಲ್ಲುತ್ತವೆ. ತರವಾಡು ಮನೆಗಳಲ್ಲಿ ವರ್ಷಕ್ಕೆ ಒಂದು

ಸಾರಿ ಕೊರಗ ತನಿಯನಿಗೆ ಕೋಲದ ಮೂಲಕ ತಮ್ಮ ಧಾರ್ಮಿಕತೆಯನ್ನು ವ್ಯಕ್ತಪಡಿಸುತ್ತಾರೆ. ಬೇಸಿಗೆ ಕಾಲದ ಹುಣ್ಣಿಮೆ ದಿನದಂದು ಕೊರಗ ತನಿಯನಿಗೆ ಸರಳ ರೀತಿಯಲ್ಲಿ ಕೋಲ ಸಲ್ಲುತ್ತದೆ.

ಕೊರಗ ತನಿಯನನ್ನು ಕರಾವಳಿಯ ಅನೇಕ ಸಮುದಾಯಗಳು ನಂಬುತ್ತವೆ. ಹಸು–ಕರುಗಳಿಗೆ ಅಸೌಖ್ಯವಾದಾಗ, ಮಗು–ಮಕ್ಕಳಿಗೆ ಖಾಯಿಲೆಯುಂಟಾದಾಗ ಕೊರಗ ತನಿಯನ ಹೆಸರಲ್ಲಿ ಹರಕೆ ಹೇಳಿಕೊಳ್ಳುವ ರೂಢಿಯಿದೆ. ತಪ್ಪಿಸಿಕೊಂಡ ದನ–ಕರುಗಳು ಹರಕೆ ಹೇಳಿಕೊಂಡ ಮೂರು ದಿನಗಳೊಳಗೆ ಮನೆ ಸೇರುತ್ತವೆ ಎಂಬುದಾಗಿ ಅನೇಕರು ತಮ್ಮ ಅನುಭವವನ್ನು ಬಿಚ್ಚಿಡುತ್ತಾರೆ. ಅಂದರೆ ಮೂಲತಃ ಕೊರಗರ ದೈವ, ಕೊರಗರ ಸಾಂಸ್ಕೃತಿಕ ವೀರಪುರುಷ ಸಮುದಾಯವನ್ನು ಮೀರಿ ಸಾರ್ವತ್ರಿಕವಾಗಿರುವುದನ್ನು ಗಮನಿಸಬಹುದಾಗಿದೆ. ಇದೇ ರೀತಿ ಕರಾವಳಿಯಲ್ಲಿ ಕೋಟಿ–ಚೆನ್ನಯ, ಕಲ್ಕುಡ–ಕಲ್ಲುರ್ಟಿ, ಅಬ್ಬಗ–ದಾರಗ ಮುಂತಾದ ವೀರಸಾಹಸಿಗರು ದೈವತ್ವವನ್ನು ಪಡೆದು ಜಾತಿ–ಮತ ಭೇದವಿಲ್ಲದೆ ಸಾರ್ವತ್ರಿಕರಣಗೊಂಡಿರುವುದು ಗಮನೀಯ. ಕರಾವಳಿಯ ಇತರೆ ದೈವಗಳಿಗೆ ಹೋಲಿಸಿದರೆ ಕೊರಗ ತನಿಯನ ಕೋಲ ಸರಳತೆಯಿಂದ ಕೂಡಿರುತ್ತದೆ. ಬಹುತೇಕ ಎಲ್ಲ ದೈವಗಳಿಗೆ ಅಣಿ ಇದ್ದರೆ ಕೊರಗ ತನಿಯನಿಗಿಲ್ಲ. ಮೈಗೆ ಕಪ್ಪು ಬಣ್ಣ ಮತ್ತು ಬಿಳಿ ಚುಕ್ಕೆಗಳನ್ನಿಟ್ಟು ತಲೆಗೆ ಅಡಿಕೆ ಹಾಳೆಯ ಮಟ್ಟಾಳೆ ಧರಿಸಿ ಸೊಂಟಕ್ಕೆ ಗೆಜ್ಜೆಪಟ್ಟಿ ಕಟ್ಟಿ ಬೆತ್ತ ಹಿಡಿದರಾಯಿತು. ಮಂಗಳೂರು ತಾಲೂಕಿನ ದೇರಳಕಟ್ಟೆ ಕೊರಗತನಿಯನ ಜನ್ಮಸ್ಥಳ ಎಂದು ಹೇಳಲಾಗುತ್ತದೆ. ಈ ಹಿನ್ನೆಲೆಯಲ್ಲಿ ಪ್ರತಿವರ್ಷ ದೇರಳಕಟ್ಟೆ ಮತ್ತು ಕುತ್ತಾರ್‌ಪದವು ಎಂಬಲ್ಲಿ ವಿಶೇಷವಾಗಿ ಕೊರಗ ತನಿಯನ ಜಾತ್ರೆ ನಡೆಯುತ್ತದೆ.

ಕೊರಗರು ಕೊರಗ ತನಿಯ ದೈವವಲ್ಲದೇ ಇತರೆ ದೈವಗಳಾದ ಪಂಜುರ್ಲಿ, ಜುಮಾದಿ, ಕಲ್ಕುಡ, ಬೊಬ್ಬರ್ಯ ಮುಂತಾದವುಗಳನ್ನು ಆರಾಧಿಸುತ್ತಾರೆ. ವಾರ್ಷಿಕವಾಗಿ ಒಂದೊಂದು ದಿನ ಸಕುಟುಂಬಿಕರಾಗಿ ಗುರಿಕಾರರನ್ನು ಆಹ್ವಾನಿಸಿ ಕಳ್ಳು ಮಾಂಸಾಹಾರದ ಎಡೆಯಿಟ್ಟು ಪ್ರಾರ್ಥಿಸುತ್ತಾರೆ. ಪಂಜುರ್ಲಿ, ಜುಮಾದಿ, ಕಲ್ಕುಡ, ಕಲ್ಲುರ್ಟಿ ಮತ್ತು ಬೊಬ್ಬರ್ಯ ದೈವಗಳು ಇತರೆ ತುಳು ಭಾಷಿಕ ಸಮುದಾಯಗಳ ಪ್ರೇರಣೆ ಅಥವಾ ಪ್ರಭಾವದಿಂದ ಕೊರಗರು ಆಚರಿಸುತ್ತಿದ್ದಾರೆ ಎಂಬುದಾಗಿ ಅನೇಕ ವಿದ್ವಾಂಸರ ಅಭಿಪ್ರಾಯ. ಕೊರಗರಿಗೆ ಕಾಸರಕನ ಮರ ಅತ್ಯಂತ ಶ್ರೇಷ್ಠ. ಅದರ ಬುಡದಲ್ಲಿ ದೇವರಿದ್ದಾನೆ ಎಂದು ನಂಬುತ್ತಿದ್ದವರು ಇತ್ತೀಚೆಗೆ ಇತರರ ಪ್ರಭಾವಗಳಿಂದ ದೈವ ದೇವರುಗಳನ್ನು ಆರಾಧಿಸುತ್ತಿರುವುದು ಗಮನಾರ್ಹ.

ಕರಾವಳಿ–ಕರ್ನಾಟಕದ ಜನಪರ ಕ್ರೀಡೆಗಳಲ್ಲಿ ಒಂದಾದ ಕಂಬಳದಲ್ಲಿ ಕೊರಗರು ಪ್ರಮುಖಪಾತ್ರ ನಿರ್ವಹಿಸುತ್ತಿದ್ದರು. ಕಂಬಳದ ದಿನವನ್ನು ಪ್ರಚಾರ ಮಾಡುವ ಸಂಪ್ರದಾಯ ಕೊರಗರ ಮೂಲಕ ನಡೆಯುತ್ತಿತ್ತು. ಹಾಗೆಯೇ ಕಂಬಳದ ಹಿಂದಿನ ದಿನ 'ಪನಿ ಕುಲ್ಲುನಿ' ಎಂಬ ಕಾರ್ಯಕ್ರಮವನ್ನು ಜಾಗರಣೆ ಮೂಲಕ ಮಾಡುತ್ತಿದ್ದರು. ಹಾಗೆಯೇ 'ಅಜಲು' ಪದ್ಧತಿಯಲ್ಲೂ ಕೊರಗರ ಪಾತ್ರವಿದ್ದಿತು. ಆದರೆ ಅಮಾನವೀಯ ರೀತಿಯ ಈ ಪದ್ಧತಿಗಳಿಗೆ ತಿಲಾಂಜಲಿ ನೀಡಿದ್ದಾರೆ ಕೊರಗರು.

ಕುಂದಾಪುರ, ಅಸೋಪು, ಬೈಂದೂರು ಪ್ರದೇಶಗಳಲ್ಲಿ ಕೊರಗರಿಗೆ ಮೀಸಲಾದ ನಾಗಬನಗಳಿವೆ. 'ಹುಟ್ಟು' ಎಂದು ಕರೆಯಲ್ಪಡುವ ನಾಗಬನಗಳಲ್ಲಿ ವರ್ಷಕ್ಕೊಂದು ದಿನ ಕುಟುಂಬಸ್ಥರು ಸೇರಿ ಪೂಜಿಸುವ ಸಂಪ್ರದಾಯ ಕೊರಗರಲ್ಲಿದೆ. ಬದಲಾದ ಸಾಮಾಜಿಕ ವ್ಯವಸ್ಥೆಯಲ್ಲಿ ಅಲ್ಪಸಂಖ್ಯಾತ ಸಮುದಾಯವೊಂದು ತನ್ನ ಪಾರಂಪರಿಕ ಜೀವನಕ್ರಮವನ್ನು ಅನುಸರಿಸಿಕೊಂಡು ಹೋಗುವುದು ಕಷ್ಟಸಾಧ್ಯ. ಕಾರಣ ಜೀವನಾವಶ್ಯಕವಾದ ಬೇಕು ಬೇಡಗಳನ್ನು ಪೂರೈಸಿಕೊಳ್ಳಲು ಸಮಾಜದ ಇತರೆ ಸಮುದಾಯಗಳನ್ನು ಸಂಪರ್ಕಿಸಲೇಬೇಕು. ಆ ಸಂದರ್ಭದಲ್ಲಿ ಸಹಜವಾಗಿ ಇತರರ ಪ್ರಭಾವಗಳಿಗೆ ಒಳಗಾಗಲೇಬೇಕಾಗುತ್ತದೆ. ಕೊರಗರು ಕೂಡ ಮೂಲದಲ್ಲಿದ್ದ ಕೆಲವೊಂದು ಆಚರಣೆಗಳನ್ನು ಮರೆತಿದ್ದಾರೆ. ಕರಾವಳಿಯ ಇತರೆ ಆಚರಣೆಗಳನ್ನು ಒಪ್ಪಿಕೊಂಡಿದ್ದಾರೆ. ಸ್ಥಳೀಯ ದೈವ–ದೇವರುಗಳ ಆರಾಧಕರಾಗಿದ್ದಾರೆ. ಕೊರಗರಲ್ಲಿ ಆದಂಥ ಪರಿವರ್ತನೆಯನ್ನು ಎ.ವಿ.ನಾವಡ ಅವರು ಹೀಗೆ ವ್ಯಾಖ್ಯಾನಿಸಿದ್ದಾರೆ. "ಇದೀಗ ನಗರ ವಲಯಗಳಲ್ಲಿ ಸರಕಾರಿ ಚಾಕರಿ ಹಿಡಿದು ಸ್ವಂತ ದರ್ಖಾಸ್ತುಗಳಲ್ಲಿ ವಾಸಿಸುತ್ತಿರುವ ಕೊರಗರು ಭೂತಾರಾಧನೆಯನ್ನು ಸ್ವಲ್ಪಮಟ್ಟಿಗೆ ಮರೆತಿದ್ದಾರೆ. ಅವರ ಇಂದಿನ ಮನೆ ಮನೆಗಳ ಗೋಡೆಗಳಲ್ಲಿ ಧರ್ಮಸ್ಥಳದ ಮಂಜುನಾಥ, ಉಡುಪಿಯ ಶ್ರೀಕೃಷ್ಣ, ಅಯ್ಯಪ್ಪಸ್ವಾಮಿ, ರಾಘವೇಂದ್ರ ಸ್ವಾಮಿಗಳ ಚಿತ್ರಪಟಗಳು ರಾರಾಜಿಸುತ್ತಿವೆ. ಎಲ್ಲರಂತೆ ಸೋಮವಾರ ಶಿವದೇವಾಲಯ, ಗುರುವಾರ ರಾಘವೇಂದ್ರ ಮಠ, ಶುಕ್ರವಾರ ಅಮ್ಮನವರ ಗುಡಿಗಳಿಗೆ ಸಂದರ್ಶನ ನೀಡಲು ತೊಡಗಿದ್ದಾರೆ. ತಮ್ಮ ಮನೆಗಳಿಗೆ ಬ್ರಾಹ್ಮಣ ಪುರೋಹಿತರನ್ನು ಕರೆಸಿ ಸತ್ಯನಾರಾಯಣ ಪೂಜೆ ಮಾಡಿಸುವ ಸಂಪ್ರದಾಯ ಆರಂಭವಾಗಿದೆ. ಹೊಸ ತಲೆಮಾರು ಮುಕ್ತವಾಗಿ ಊರ ದೇವಾಲಯಗಳಿಗೆ ಪ್ರವೇಶಿಸುತ್ತಿದ್ದರೂ ಹಳೆಯವರಿಗೆ ಇನ್ನೂ ಸಂಕೋಚ ಹೋಗಿಲ್ಲ."[೬](ಪು. ೨೭೮, ೨೦೧೩)

## ಕೊರಗರ ಕುಣಿತ

ಸುಗ್ಗಿ ಹುಣ್ಣಿಮೆಯ ಸಂದರ್ಭದಲ್ಲಿ ಕೊರಗ ವೇಷಧರಿಸುವುದು ಕರಾವಳಿ ಕರ್ನಾಟಕದ ವಿಶೇಷ ಕುಣಿತವಾಗಿತ್ತು. ಕರಾವಳಿ ಕರ್ನಾಟಕದಲ್ಲಿ ಕೊರಗ ಪದ ಜಾತಿಸೂಚಕ ಪದವಾದರೂ ಕೊರಗ ವೇಷ ಕೊರಗರಿಗೆ ಸೀಮಿತವಾಗಿಲ್ಲ. ಹೇಳಿಕೊಂಡ ಹರಕೆಯನ್ನು ತೀರಿಸಲು ಕೊರಗ ವೇಷವನ್ನು ಯಾವುದೇ ಸಮುದಾಯದವರೂ ಹಾಕಬಹುದಾಗಿದೆ. ಇದರಲ್ಲಿ ಕೊರಗರು ವೇಷ ಹಾಕಿ ಹರಕೆ ಒಪ್ಪಿಸುವುದನ್ನು ಕಾಣಬಹುದು. ನವರಾತ್ರಿ ಸಂದರ್ಭದಲ್ಲಿ ಒಂಬತ್ತು ದಿನಗಳ ಕಾಲ ವೇಷಹಾಕಿ ಮನೆ ಮನೆಗೆ ಹೋಗಿ ಭಿಕ್ಷೆ ಬೇಡಿ ಅದನ್ನು ಹರಕೆ ಒಪ್ಪಿಕೊಂಡ ದೇವಸ್ಥಾನಕ್ಕೆ ಹಾಕಿ ಬರುತ್ತಾರೆ. ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಉತ್ತರ ಭಾಗದ ಕೊರಗರು ಧರ್ಮಸ್ಥಳ ಇನ್ನಿತರ ದೇವಸ್ಥಾನಕ್ಕೆ ಹರಕೆ ಒಪ್ಪಿಸಿದರೆ, ದಕ್ಷಿಣ ಕೊರಗರು ಕಾಸರಗೋಡು ಜಿಲ್ಲೆಯಲ್ಲಿರುವ ಕೊರಕ್ಕೋಡು ಎಂಬ ದೇವಸ್ಥಾನಕ್ಕೆ ಕೊರಗ ವೇಷದ ಹರಕೆ ಒಪ್ಪಿಸುತ್ತಾರೆ. ಇತ್ತೀಚೆಗೆ ಕೊರಗ ವೇಷ ಹರಕೆ ಒಪ್ಪಿಸುವವರ ಸಂಖ್ಯೆ ಇಳಿಮುಖವಾಗಿದೆ.

ಕೊರಗ ವೇಷ ಅತ್ಯಂತ ಸರಳ ರೀತಿಯಲ್ಲಿದೆ. ವೇಷಧಾರಿ ಮೈಯೆಲ್ಲಾ ಮಸಿ ಬಳಿದುಕೊಂಡಿರುತ್ತಾನೆ. ಇದ್ದಿಲನ್ನು ಅರೆದು ಪುಡಿ ಮಾಡಿ ಸ್ವಲ್ಪ ತೆಂಗಿನ ಎಣ್ಣೆಯನ್ನು ಬೆರೆಸಿ ಮೈಗೆ ಚೆನ್ನಾಗಿ ಅಂಟಿಕೊಳ್ಳುವಂತೆ ಮಾಡಲಾಗುತ್ತವೆ. ಮೈಮೇಲೆ ಯಾವುದೇ ವಸ್ತ್ರವನ್ನು ಧರಿಸುವಂತಿಲ್ಲ. ಸೊಂಟಕ್ಕೆ ಮಾತ್ರ ತುಂಡು ಬಟ್ಟೆ ಅಥವಾ ಛತ್ರಿಯ ಕಪ್ಪು ಬಟ್ಟೆಯನ್ನು ಕಟ್ಟಿಕೊಳ್ಳುವುದು ರೂಢಿ. ತಲೆಗೆ ಮುಟ್ಟಾಳೆ(ಅಡಿಕೆ ಮರದ ಹಾಳೆಯಿಂದ ತಯಾರಿಸಿದ್ದು) ಧರಿಸಿರುತ್ತಾರೆ. ಕೊರಗ ವೇಷಧಾರಿ ಕಾಲಿಗೆ ಗೆಜ್ಜೆ ಮತ್ತು ಕೈಯಲ್ಲಿ ಕೊಳಲು. ಮನೆ ಮನೆಗೆ ಹೋಗಿ ಕೂ... ಕೂ... ಕೊರಗೆ ಬತ್ತೇ... ಎಂದು ಜೋರಾಗಿ ಹೇಳುತ್ತಾ, ಕೊಳಲು ನುಡಿಸುತ್ತಾ ಬಂದು ಮನೆಯ ಅಂಗಳದಲ್ಲಿ ಕುಣಿಯುತ್ತಾನೆ. ಒಂದು ಸಾರಿ ವೇಷ ಧರಿಸಿದರೆ ಒಂಭತ್ತು ದಿನಗಳ ಕಾಲವೂ ಸ್ನಾನ ಮಾಡಲು ನಿಷೇಧವಿದೆ. ಉಡುಪಿ ಪ್ರದೇಶದಲ್ಲಿ ಕೊರಗ ವೇಷಧಾರಿ ಪಾಡ್ದನ ಹೇಳುತ್ತಾನೆ.

ಬಹುತೇಕ ಕೊರಗರೇತರರು ಕೊರಗ ವೇಷ ಹಾಕಿದರೂ ಕೆಳವರ್ಗವೆಂದು ಕರೆಯಲ್ಪಡುವ ಇತರೆ ಸಮುದಾಯದವರ ಮನೆ ಮನೆಗೆ ಹೋಗಿ ಭೀಕ್ಷೆ ಬೇಡಲೇಬೇಕೆಂಬ ನಿಯಮವಿದೆ. ಕೊರಗ ವೇಷಧಾರಿ ಒಂಭತ್ತು ದಿನಗಳ ಕಾಲ ಕೆಲವೊಂದು ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸಬೇಕೆಂದು ನಂಬಿಕೆಗಳಿವೆ. ಬದಲಾದ ಕಾಲಘಟ್ಟಗಳಲ್ಲಿ ಇಂತಹ ನಿಯಮ–

ನಂಬಿಕೆಗಳು ತೆರೆಮರೆಗೆ ಸರಿದಿರುವುದು ಕಂಡಬರುತ್ತದೆ. ಇತ್ತೀಚಿನ ದಿನಗಳಲ್ಲಿ ಕೊರಗ ವೇಷವೇ ಇಲ್ಲವೆಂದು ಹೇಳಬೇಕು. ಕೆಲವರು ಇದನ್ನೇ ದುರುಪಯೋಗಪಡಿಸಿಕೊಂಡಿರುವ ಉದಾಹರಣೆಗಳಿವೆ. ಭಿಕ್ಷೆ ಬೇಡಿ ಬಂದಂತಹ ಹಣ ಏನ್ನೆಲ್ಲಾ ತಮ್ಮ ದುಶ್ಚಟಗಳಿಗೆ, ಸಾಲ ತೀರುವಳಿಗಾಗಿ ವಿನಿಯೋಗಿಸಿದ ಉದಾಹರಣೆಗಳಿವೆ. ಒಟ್ಟಾರೆಯಾಗಿ ಕರಾವಳಿ ಕರ್ನಾಟಕದಲ್ಲಿ ಪರಂಪರಾಗತವಾಗಿ ಬಂದಂಥ ಜನಪದ ಆಚರಣೆಯೊಂದು ಕಾಲಾಂತರದಲ್ಲಿ ತೆರೆಮರೆಗೆ ಸರಿದಿದೆ ಎಂದು ಹೇಳಬಹುದು.

ಉಡುಪಿ ಜಿಲ್ಲೆಯಲ್ಲಿ ಪ್ರಚಲಿತದಲ್ಲಿರುವ ಕೊರಗರ ಕುಣಿತವೇ ಚುಣ್ಣ. ಕಂಬಳದ ಸಂದರ್ಭದಲ್ಲಿ ಮತ್ತು ಮಾರುಕಟ್ಟೆಯ ಹಬ್ಬದ ದಿನದಂದು ಚುಣ್ಣ ಕುಣಿತ ಆಚರಿಸಲ್ಪಡುತ್ತದೆ. ಮಾರುಕಟ್ಟೆಯ ಹಬ್ಬದ ದಿನದಂದು ಚುಣ್ಣ ವೇಷಧರಿಸಿ ಊರಿನ ಮನೆಮನೆಗೆ ಹೋಗಿ ಪಡಿ ಪಡೆಯುತ್ತಾರೆ. ಇದೆ ರೀತಿ ಕರಾವಳಿಯ ದಕ್ಷಿಣ ಭಾಗದಲ್ಲಿ ಕೆಡ್ಡಸ ಬಂದಿರುವುದನ್ನು ಇತರೆ ಸಮುದಾಯವಾದ ನಲಿಕೆ ಯವರು ಡೋಲು ಭಾರಿಸಿ ಕೆಡ್ಡಸ ಬಂದಿದೆ ಎಂದು ಮನೆಮನೆಗೆ ಹೋಗಿ ಹೇಳುವ ಸಂಪ್ರದಾಯವಿತ್ತು. ಆದರೆ ಯಾವುದೇ ರೀತಿಯ ವೇಷ ಇರುವುದಿಲ್ಲ. ಕೊರಗರು ಕಂಬಳದ ಸಂದರ್ಭದಲ್ಲಿ ಮುಖ್ಯ ಭೂಮಿಕೆಯಲ್ಲಿರುವುದನ್ನು ಕಾಣುತ್ತೇವೆ. ಚುಣ್ಣ ವೇಷಧರಿಸಿ ಕೋಣಗಳ ಜೊತೆಗೆ ಕಂಬಳ ಗದ್ದೆಗೆ ಹೋಗುವ ಸಂಪ್ರದಾಯ ಉಡುಪಿ ಜಿಲ್ಲೆಯಲ್ಲಿ ಕಂಡುಬರುತ್ತದೆ.

ಸೊಂಟಕ್ಕೆ ಸಣ್ಣದಾದ ಬಟ್ಟೆ ಸುತ್ತಿಕೊಂಡು ಅದರ ಮೇಲೆ ನೆಕ್ಕಿ ಸೊಪ್ಪು ಅಥವಾ ಮಾವಿನ ಎಲೆಗಳನ್ನು ಕಟ್ಟಿಕೊಳ್ಳುತ್ತಾರೆ. ಮೈಪೂರ್ತಿ ಮಸಿ ಬಳಿದುಕೊಂಡು ತಲೆಗೆ ಮುಟ್ಟಾಳೆ ಧರಿಸುತ್ತಾರೆ. ಕೈಯಲ್ಲೊಂದು ಮೊರ ಮತ್ತು ಮರದ ಕತ್ತಿ ಹಿಡಿದುಕೊಂಡು ಡೋಲುಕೊಳಲು, ತಾಳಗಳ ವಾದನಕ್ಕೆ ಹೆಜ್ಜೆ ಹಾಕುವುದೇ ಚುಣ್ಣ ಕುಣಿತ. ಒಂದೊಂದು ತಂಡದಲ್ಲಿ ಆರರಿಂದ ಎಂಟು ಜನ ಕಲಾವಿದರಿರುತ್ತಾರೆ. ಸ್ತ್ರೀಯರೂ ಭಾಗಿಯಾಗುತ್ತಾರೆ. ಪ್ರದರ್ಶನ ಸಂದರ್ಭದಲ್ಲಿ ಮಾಂಸಾಹಾರ ಸೇವನೆಗೆ ನಿಷೇಧವಿರುತ್ತದೆ. ಆದರೆ ಕಳ್ಳುನಂತಹ ಅಮಲು ಸೇವನೆಗೆ ಯಾವುದೇ ನಿರ್ಬಂಧವಿರುವುದಿಲ್ಲ. ಇತ್ತೀಚಿನ ಬದಲಾದ ಕಾಲದಲ್ಲಿ ಈ ಚುಣ್ಣ ಕುಣಿತ ಅಪರೂಪವಾಗಿದೆ.

**ಕೊರಗರ ಸಂಗೀತ**

ಕೊರಗರಿಗೆ ಅವರ ಸಂಗೀತ ಪರಿಕರಗಳಾದ ಕೊಳಲು ಮತ್ತು ಡೋಲಿನೊಂದಿಗೆ ಭಾವನಾತ್ಮಕ ಸಂಬಂಧವಿದೆ. ತಮ್ಮ ಸಂತಸಗಳನ್ನು ಹಂಚಿಕೊಳ್ಳಲು ಡೋಲು, ಕೊಳಲುಗಳನ್ನು

ಬಾರಿಸುತ್ತಿದ್ದರು. ಆದರೆ ಕೆಲವರು ಇವರ ಸಂಗೀತ ಪರಿಕರವಾದ ಡೋಲಿಗೆ ಅಜಲಿನ ಸ್ಪರ್ಶ ನೀಡಿದರು. ಇದು ಕೊರಗರ ಸಮಸ್ಯೆಗೆ ಕಾರಣವಾಗಿದೆ. ಇಂದು ಕೊರಗ ಮುಖಂಡರ, ಸಂಘಟನೆಗಳ ಪ್ರಯತ್ನದ ಫಲವಾಗಿ ಡೋಲಿಗೆ ವಿಶೇಷ ಸ್ಥಾನಮಾನಗಳು ದೊರೆಯುತ್ತಿವೆ. ಹಲವಾರು ಕಲಾತಂಡಗಳು ಸ್ಥಾಪನೆಯಾಗಿವೆ. ಕಲಾತಂಡಗಳು ಹಲವಾರು ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದಾರೆ.

ಯಾವುದೇ ಧಾರ್ಮಿಕ ಮೆರವಣಿಗೆಗಳಲ್ಲಿ ದೇವಸ್ಥಾನಗಳ ರಥೋತ್ಸವ, ದೀಪೋತ್ಸವ ಮುಂತಾದ ಉತ್ಸವ ಸಂದರ್ಭಗಳಲ್ಲಿ ಕೊರಗ ಸಮುದಾಯ ಮುಂಚೂಣಿಯಲ್ಲಿದ್ದು ಡೋಲು ಬಾರಿಸುತ್ತಾರೆ. ದೈವಸ್ಥಾನಗಳಲ್ಲಿ ನಡೆಯುವ ನೇಮೋತ್ಸವಗಳಿಗೆ ಕೊರಗರ ಡೋಲಿನ ಸದ್ದು ಬೇಕು. ನವರಾತ್ರಿಯ ಆಚರಣೆ ಸಂದರ್ಭದಲ್ಲೂ ಕೊರಗ ಸಮುದಾಯ ಮನೆ-ಮನೆಗೂ ಡೋಲು ಬಾರಿಸುವ ಆಚರಣೆ ಇಂದಿಗೂ ಅಲ್ಲಲ್ಲಿ ಕಂಡುಬರುತ್ತದೆ. ಆದರೆ ಇತ್ತೀಚಿನ ವರ್ಷಗಳಲ್ಲಿ ಕೊರಗರ ಯುವಕರು ಡೋಲು ಬಾರಿಸುವ ಕಾಯಕದಿಂದ ದೂರ ಸರಿಯುತ್ತಿದ್ದಾರೆ. ಕೊರಗರ ಡೋಲಿನ ಸದ್ದು ಸ್ವಲ್ಪ ಮಟ್ಟಿಗೆ ಕಡಿಮೆಯಾಗಿದೆ ಎಂದರೆ ತಪ್ಪಾಗಲಾರದು.

ಕೊರಗರಲ್ಲಿ ಸಾಂಸ್ಕೃತಿಕ ಪರಿವರ್ತನೆ ತರಲು ಸಾಂಸ್ಕೃತಿಕ ಕಲಾತಂಡಗಳ ರಚನೆಗಳಾಗಿವೆ. ಇದು ಅವರ ಕಲೆ, ಕೌಶಲ್ಯಗಳು ಅಳಿಯದೆ ಉಳಿಸಲು ನೆರವಾಗಿದೆ. ಪ್ರಮುಖವಾದ ಕಲಾಸಂಘಗಳೆಂದರೆ:

೧. ಹುಬಾಶಿಕ ಕೊರಗರ ಯುವ ಕಲಾ ವೇದಿಕೆ, ಬಾರ್ಕೂರು.

೨. ಕೊರಗರ ಯುವ ಕಲಾ ವೇದಿಕೆ, ಮರವಂತೆ

೩. ಮಹಾತ್ಮ ಜ್ಯೋತಿಬಾ ಪುಲೆ ಯುವ ಕಲಾವೇದಿಕೆ, ಬೈಂದೂರು

ಅಸ್ಪೃಶ್ಯತೆಯ ಸಮಸ್ಯೆ ಕೊರಗರಲ್ಲಿ ಇದೆ. ಸ್ಥಳೀಯ ಬುಡಕಟ್ಟುಗಳಿಗೆ ಇಲ್ಲದ ಸಮಸ್ಯೆ ಇವರಿಗೆ ಯಾಕೆ ಇದೆ ಎನ್ನುವ ಬಗ್ಗೆ ಚರ್ಚೆಯ ಅಗತ್ಯವಿದೆ. ಎಂದು ಮುಖಂಡರ ಅಭಿಪ್ರಾಯವಾಗಿದೆ.

**೩.೩. ಕೊರಗರ ದೈಹಿಕ ಲಕ್ಷಣಗಳು, ಉಡುಗೆ-ತೊಡುಗೆಗಳು**

ಕರಾವಳಿ ಪ್ರದೇಶದ ಮೂಲನಿವಾಸಿಗಳು, ಆದಿಮ ಬುಡಕಟ್ಟು ಸಮುದಾಯವೆಂದು ಕರೆಯಲ್ಪಡುವ ಕೊರಗರಲ್ಲಿ ಆದಿಮ ಬುಡಕಟ್ಟಿಗೆ ಸಂಬಂಧಿಸಿದ ಎಲ್ಲ ಲಕ್ಷಣಗಳಿವೆ

ಎಂಬುದನ್ನು ಬಹುತೇಕ ವಿದ್ವಾಂಸರು ಒಪ್ಪಿಕೊಳ್ಳುತ್ತಾರೆ. ಕಪ್ಪು ಬಣ್ಣದ ನುಣುಪು ಮೈಯನ್ನು ಹೊಂದಿರುವ ಕೊರಗರ ಮೂಗು ಚಪ್ಪಟೆಯಾಗಿದ್ದು ವಿಸ್ತಾರವಾಗಿರುತ್ತದೆ. ಒರಟಾದ ಗುಂಗುರು ಕೂದಲು, ಅಗಲವಾದ ಇಳಿಜಾರಾದ ಹಣೆ, ದಪ್ಪ ತುಟಿ ಹರಿತವಾದ ಕಣ್ಣುಗಳನ್ನು ಹೊಂದಿರುವ ಕೊರಗರ ದೇಹ ಪ್ರಾಕೃತಿಕವಾಗಿ ಬಲಿಷ್ಠವಾಗಿರುತ್ತದೆ. ದವಡೆ ಸ್ವಲ್ಪ ಮುಂದೆ ಚಾಚಿಕೊಂಡಿದ್ದು, ಕೆನ್ನೆಯ ಎಲುಬು ಎತ್ತರವಾಗಿ ಕಾಣುತ್ತದೆ. ಮೈಮೇಲಿನ ರೋಮ ಕಡಿಮೆ. ಈ ರೀತಿಯ ದೈಹಿಕ ಗುಣಲಕ್ಷಣಗಳಿರುವ ಕೊರಗರು ಪ್ರೋಟೊ ಅಸ್ಟ್ರಲಾಯಿಡ್ ಗುಂಪಿಗೆ ಸೇರುತ್ತಾರೆ ಎಂಬುದಾಗಿ ಮಾನವಶಾಸ್ತ್ರಜ್ಞರು ದೃಢೀಕರಿಸುತ್ತಾರೆ. ಹಿಂದಿನಿಂದಲೂ ಕಾಡುಮೇಡುಗಳಲ್ಲಿ ಕಷ್ಟಕರ ಜೀವನ ನಡೆಸುತ್ತಾ ಬಂದಿರುವರ ಕೊರಗರಿಗೆ ಬಲಿಷ್ಠ ಶರೀರ ಪ್ರಾಕೃತಿಕವಾಗಿ ಬಂದಿರುವಂಥದ್ದು. ಬರಿಗಾಲಲ್ಲೇ ಜೀವನಪೂರ್ತಿ ನಡೆದಾಡುತ್ತಿದ್ದ ಕೊರಗರ ದೇಹಪ್ರಕೃತಿ ಪರಿಸರಕ್ಕೆ ಪೂರಕವಾಗಿತ್ತು ಎಂದರೆ ತಪ್ಪಾಗಲಾರದು.

ಕೊರಗರ ಬಗೆಗೆ ಮೊದಲು ಅಧ್ಯಯನ ಮಾಡಿದ ಸ್ಟುವರ್ಟ್ ಅವರ ಉಡುಗೆ–ತೊಡುಗೆಯನ್ನು ಈ ರೀತಿ ವಿವರಿಸಿದ್ದಾರೆ. ಕೊರಗರು ಸೊಂಟದಿಂದ ಕೆಳಕ್ಕೆ ಕಪ್ಪುಬಟ್ಟೆಯನ್ನು, ಸೊಂಟದಿಂದ ಮೇಲಕ್ಕೆ ಬಿಳಿಬಟ್ಟೆಯನ್ನೂ ಕಟ್ಟಿಕೊಳ್ಳುತ್ತಾರೆ. ತಲೆಗೆ ಅಡಿಕೆ ಹಾಳೆಯಿಂದ ಮಾಡಿದ ಟೊಪ್ಪಿಗೆ ಧರಿಸುತ್ತಾರೆ. ಕಿವಿಗೆ ಹಿತ್ತಾಳೆಯ ಬೆಂಡೋಲೆ, ಕೈಗಳಿಗೆ ಕಬ್ಬಿಣದ ಬಳೆ, ಸೊಂಟಕ್ಕೆ ಉಡಿದಾರ ಇರುತ್ತದೆ. ಉಡುಪಿಯಲ್ಲಿ ನಾನು ನೋಡಿದ ಕೊರಗನೊಬ್ಬ ಗೂಬೆಗಳ ಮೂಳೆಗಳಿಂದ ತಯಾರಿಸಲಾದ ಉಡುದಾರವನ್ನು ಹಾಕಿಕೊಂಡಿದ್ದ.[೬]

ಬಹುತೇಕ ಬುಡಕಟ್ಟು ಸಮುದಾಯಗಳು ಸರಳವಾದ ಉಡುಗೆ–ತೊಡುಗೆಗಳಿಂದಿರುವುದು ಸಹಜ. ಕಾರಣ ಆಹಾರಕ್ಕಾಗಿ ಅತ್ಯಂತ ಕಠಿಣವಾದ ಕೆಲಸ ಕಾರ್ಯಗಳಲ್ಲಿ ತೊಡಗ ಬೇಕಾಗುತ್ತದೆ. ಹಾಗೆಯೇ ಕಾಡು–ಮೇಡುಗಳಲ್ಲಿಯೇ ಜೀವನವನ್ನು ಕಳೆಯುತ್ತಿದ್ದರಿಂದ ಬಟ್ಟೆ–ಬರೆಗಳ ಬಗೆಗೆ ಅಷ್ಟಾಗಿ ಗಮನಹರಿಸಲು ಅವರಿಗೆ ಕಷ್ಟಸಾಧ್ಯ. ಕರಾವಳಿ ಕರ್ನಾಟಕದ ಕೊರಗರು ಕೂಡ ಸರಳವಾದ ಉಡುಗೆ–ತೊಡುಗೆಗಳನ್ನು ಧರಿಸುತ್ತಿದುದು ಸಂಶೋಧನೆಯಿಂದ ತಿಳಿದುಬರುತ್ತದೆ. ಗುಲಾಮಗಿರಿಗೆ ಒಳಪಟ್ಟ ಕೊರಗರು ದಾರಿದ್ರ್ಯವನ್ನು ಅನುಭವಿಸಬೇಕಾಗಿ ಬಂತು. ಈ ಎಲ್ಲಾ ಕಾರಣಗಳಿಂದ ಸರಳವಾಗಿಯೇ ಜೀವನ ನಡೆಸುತ್ತಾ ಬಂದಿದ್ದಾರೆ ಕೊರಗರು.

ಪುರುಷ ಕೊರಗರು ಲಾಡಿಯಿಂದ ಕಟ್ಟಿಕೊಳ್ಳುವ ತೋಳುಗಳಿಲ್ಲದ ಅಂಗಿಯನ್ನು ಧರಿಸುತ್ತಾರೆ. ಸ್ತ್ರೀಯರು ಹಿಂದಿನ ಕಾಲದಲ್ಲಿ ಮಣಿಸರಗಳಿಂದಲೇ ಎದೆ ಮುಚ್ಚಿಕೊಳ್ಳುತ್ತಿದ್ದರು. ಹಾಗೆಯೇ ಸೆರಗು ಹಾಕಿಕೊಳ್ಳದೇ ಸೀರೆಯುಡುತ್ತಿದ್ದರು. ಬೇರೆ ಬೇರೆ ಲೋಹಗಳಿಂದ ಅಥವಾ ಮಣ್ಣಿನಿಂದ ತಯಾರಿಸಿದ ಬಳೆಗಳನ್ನು ಧರಿಸುತ್ತಿದ್ದರು.

**೩.೪. ವೈದ್ಯಪದ್ಧತಿ ಮತ್ತು ತಾಂತ್ರಿಕ ಪದ್ಧತಿ**

ಜನಪದ ವೈದ್ಯ ಪದ್ಧತಿ ಸಂಪ್ರದಾಯವೂ ಹೌದು, ವಿಜ್ಞಾನವೂ ಹೌದು. ಪಾಶ್ಚಾತ್ಯ ದೇಶದವರು ಭಾರತಕ್ಕೆ ಬರುವುದಕ್ಕೆ ಮುಂಚೆ ನಮ್ಮ ಗ್ರಾಮೀಣ ಜನಸಾಮಾನ್ಯರಿಗೆ ನಾಟಿವೈದ್ಯ ಪದ್ಧತಿಯೇ ಅನಿವಾರ್ಯವಾಗಿತ್ತು. ಪರಂಪರಾಗತವಾಗಿ ಸಾವಿರಾರು ವರ್ಷಗಳಿಂದ ತಲೆಮಾರಿನಿಂದ ತಲೆಮಾರಿಗೆ ಹಸ್ತಾಂತರಗೊಳ್ಳುತ್ತಾ ಬಂದಿರುವ ನಾಟಿ ವೈದ್ಯ ಪದ್ಧತಿ ಅನುಭವದಿಂದ ಹುಟ್ಟಿದುದು. ಹಾಗಾಗಿ ಅಂತಹ ಔಷಧಿಗಳಿಂದಲೇ–ಆಹಾರದಿಂದಲೇ ನೂರಾರು ವರ್ಷಗಳ ಕಾಲ ಬಾಳಿ ಬದುಕಿದರು. ಬದಲಾದ ಇಂದಿನ ಕಾಲದಲ್ಲಿ ವೈಜ್ಞಾನಿಕ, ತಂತ್ರಜ್ಞಾನಗಳ ನೆರವಿದ್ದರೂ ಸರಿಸುಮಾರು ಎಪ್ಪತ್ತೈದು ವರ್ಷಗಳ ಕಾಲ ಬದುಕುವುದೇ ಅಪರೂಪ. ಪ್ರಕೃತಿಯಲ್ಲಿ ದೊರಕುವ ಆಹಾರ ಪದಾರ್ಥಗಳನ್ನೇ ಔಷಧಿಗಳನ್ನಾಗಿ, ಆಹಾರಗಳನ್ನಾಗಿ ಪಡೆದು ಸಾರ್ಥಕ ಜೀವನ ನಡೆಸಿದ ನಮ್ಮ ಹಿರಿಯರ ಜಾಣ್ಮೆ ಅದ್ಭುತವೇ ಸರಿ. ಎಲ್ಲಾ ವೈದ್ಯ ಪದ್ಧತಿಗಳ ಮೂಲ ನಾಟಿ ವೈದ್ಯ. ಅದರ ಮುಂದುವರಿದ ಭಾಗವೇ ಆಯುರ್ವೇದ, ಜನಪದ ವೈದ್ಯ, ಸಾಂಪ್ರದಾಯಿಕವಾಗಿ ತಲೆತಲಾಂತರದಿಂದ ಬಂದಿರು ವಂಥದ್ದು. ರೋಗವನ್ನು ಗುಣಪಡಿಸುವುದಕ್ಕಿಂತ ಬಾರದಂತೆ ತಡೆಯುತ್ತದೆ. ನಂಬಿಕೆಗಳ ಮೂಲಕ ಮಾನಸಿಕ ದೃಢತೆಯನ್ನು ಹೆಚ್ಚಿಸುತ್ತ ಆ ಮೂಲಕ ರೋಗದ ಜೊತೆ ಮಾನಸಿಕ ರೋಗವೂ ದೂರವಾಗುತ್ತದೆ.

ಕೊರಗರು ತಮಗೊದಗಿದ ಪ್ರಾಕೃತಿಕ ಸಂಪತ್ತನ್ನು ಆಹಾರಕ್ಕಾಗಿ ಔಷಧಿಗಳಿಗಾಗಿ ಚೆನ್ನಾಗಿಯೇ ಬಳಸಿಕೊಂಡಿದ್ದಾರೆ ಎಂದರೆ ತಪ್ಪಾಗಲಾರದು. ಕೊರಗರು ಕೆಲವೊಂದು ಖಾಯಿಲೆಗಳಿಗೆ ಗಿಡಮೂಲಿಕೆಗಳ ಔಷಧಿಗಳನ್ನು ಬಳಸಿದರೆ ಇನ್ನು ಕೆಲವು ಕಾಯಿಲೆಗಳಿಗೆ ತಾಂತ್ರಿಕ ವೈದ್ಯಪದ್ಧತಿಯ ಮೊರೆಹೋಗುತ್ತಿದ್ದುದು ಕಂಡುಬಂದಿದೆ. ಬಹುತೇಕ ಕೊರಗರು ದೈವ–ದೇವರುಗಳು ಮುನಿಸಿಕೊಂಡಿರುವುದರಿಂದ ಮತ್ತು ತಮಗಾದವರು ಮಾಟ–ಮಂತ್ರ ಮಾಡಿರುವುದರಿಂದ ಖಾಯಿಲೆ ಬಂದಿದೆ ಎಂದು ಬಹುವಾಗಿ ನಂಬುತ್ತಾರೆ. ಹಾಗೆಯೇ ತೀರಿಕೊಂಡವರು ತಮಗೆ ತೊಂದರೆ ಕೊಡುವುದರಿಂದ ಖಾಯಿಲೆ ಬರುತ್ತಿದೆ

ಎಂದು ತಿಳಿಯುತ್ತಾರೆ. ಇವುಗಳನ್ನೆಲ್ಲ ಸರಿಪಡಿಸುವುದಕ್ಕಾಗಿಯೇ ಮಂತ್ರವಾದಿಗಳೆಂದು ಕರೆಯಲ್ಪಡುವ ತಾಂತ್ರಿಕರಿರುತ್ತಿದ್ದರು.

**ತಾಂತ್ರಿಕ ವೈದ್ಯ ಪದ್ಧತಿ** ಮೂಲಕ ಗುಣಪಡಿಸುವ ರೀತಿಯನ್ನು ಗಮನಿಸೋಣ.

**ತಾಯತ ಕಟ್ಟುವುದು:** ಬಹುತೇಕ ಸಮುದಾಯಗಳಲ್ಲಿ ಕಂಡುಬರುವಂತೆ ಕೊರಗರಲ್ಲಿಯೂ ತಾಯತದ ಮೂಲಕ ಬರುವ ರೋಗಗಳನ್ನು ಬರಲಾರದಂತೆ ತಡೆಗಟ್ಟಿಕೊಳ್ಳುತ್ತಾರೆ. ಮಂದ್ರವಾದಿಯಿಂದ ತಾಯತವನ್ನು ಪಡೆಯುತ್ತಾರೆ. ಭಯದಿಂದ ಜ್ವರ ಬಂದಾಗ, ಸದಾ ಮೈಕೈ ನೋವುಂಟಾದಾಗ, ಮಕ್ಕಳಿಗೆ ಕೈ ರೆಟ್ಟೆಗೆ ಅಥವಾ ಕೊರಳಿಗೆ ಮತ್ತು ಉಡುದಾರದಲ್ಲಿ ತಾಯತವನ್ನು ಕಟ್ಟಿಕೊಳ್ಳುತ್ತಾರೆ. ಆ ಮೂಲಕ 'ತಾಯತ' ಮಾನಸಿಕವಾಗಿ ಧೈರ್ಯವನ್ನು ನೀಡುತ್ತದೆ. ಮಾನಸಿಕವಾಗಿ ಧೈರ್ಯದಿಂದಿರುವುದೇ ಕಾಯಿಲೆ-ಭಯವನ್ನು ಹೋಗಲಾಡಿಸುವ ರೀತಿ. ತಾಯತ ಕಟ್ಟುವ ನಿಯಮ ರೂಢಿ ಕೊರಗರಂತೆ ಬಹುತೇಕ ಸಮುದಾಯಗಳಲ್ಲಿ ಕಂಡುಬರುತ್ತದೆ. ಎಷ್ಟೇ ಮುಂದುವರೆದ ಸಮುದಾಯವಾದರೂ ಈ ರೀತಿಯ ತಾಯತ, ನೂಲನ್ನು ಕಟ್ಟಿಕೊಂಡಿರುವುದನ್ನು ಹಳ್ಳಿ, ನಗರ ಪ್ರದೇಶಗಳಲ್ಲಿ ಇಂದಿಗೂ ಕಾಣಬಹುದಾಗಿದೆ.

**ಹರಕೆ ಹೊರುವುದು:** ಪ್ರತಿಯೊಂದು ಸಮಾಜ, ಸಮುದಾಯಗಳಲ್ಲಿ ನಂಬಿಕೆ ಮಹತ್ವ ಪಡೆದಿದೆ. ನಂಬಿಕೆಯ ಮೂಲಕವೇ ಸಂಪ್ರದಾಯ, ಆಚರಣೆ, ರೂಢಿ, ನಡವಳಿಕೆಗಳು ಜನ್ಮಪಡೆದಿವೆ ಎಂದರೆ ತಪ್ಪಾಗಲಾರದು. ತಾನು ಆರಾಧಿಸುವ ದೈವಶಕ್ತಿ, ನಿಸರ್ಗಶಕ್ತಿ, ಅತಿಮಾನುಷಶಕ್ತಿ ಮತ್ತು ಗತಿಸಿದ ಹಿರಿಯರ ಶಕ್ತಿ ಇರುವುದರಿಂದಲೇ ತಮ್ಮ ಬದುಕಿನಲ್ಲಿ ಏರುಪೇರುಗಳುಂಟಾಗುತ್ತವೆ ಎಂದು ಮಾನವ ನಂಬಿಕೊಂಡು ಬಂದಿದ್ದಾನೆ. ಇದಕ್ಕೆ ಕೊರಗರು ಹೊರತಾಗಿಲ್ಲ. ಈ ಎಲ್ಲ ಶಕ್ತಿಗಳನ್ನು ಸಂತೃಪ್ತಿಪಡಿಸಿದರೆ ತಮಗೆ ಒಳಿತಾಗುತ್ತದೆ ಎಂಬ ನಂಬಿಕೆಯಿಂದ ಹರಕೆ ಹೊರುವ ಸಂಪ್ರದಾಯ ಸಾವಿರಾರು ವರ್ಷಗಳಿಂದ ನಡೆದುಕೊಂಡು ಬಂದಿದೆ.

ಈ ಮೊದಲು ಪ್ರಸ್ತಾಪಿಸಿದಂತೆ ಕೊರಗ ತನಿಯ ಕೊರಗರ ಆರಾಧ್ಯ ದೈವ. ಕೊರಗರು ಕೊರಗ ತನಿಯನ ಹೆಸರಲ್ಲಿ ಹರಕೆ ಹೊರುತ್ತಾರೆ. ಮೀಸಲೆಡೆ ಇಟ್ಟು ಕೋಲ ಕೊಡುವ ಸಂದರ್ಭದಲ್ಲಿ ಕೋಲುಬತ್ತಿಯಲ್ಲದೆ ಇತರೆ ಬೇರೆ ದೀಪ ಬಳಸುವಂತಿಲ್ಲ. ಕೊರಗ ತನಿಯನಿಗೆ ಕಳ್ಳನ್ನು ನೈವೇದ್ಯವಾಗಿ ಇರಿಸುವ ಪದ್ಧತಿಯೂ ಇದೆ. ಯಾವುದೇ ರೀತಿಯ ಕಾಯಿಲೆ ಬಂದಾಗ ದೈವ ದೇವರನ್ನು ನೆನೆದು ನಾಣ್ಯಗಳನ್ನು ಕಟ್ಟಿಡುವ ರೂಢಿ ಕೊರಗರಂತೆ ಕರಾವಳಿಯ ಬಹುತೇಕ ಸಮುದಾಯಗಳಲ್ಲಿ ಕಂಡುಬರುತ್ತದೆ. ನಂತರ

ಪ್ರಶ್ನೆ ಹಾಕಿ ನೋಡಿ ಕಾಯಿಲೆ ಗುಣಪಡಿಸಿದ ಕೆಲವು ದಿನಗಳಲ್ಲಿ ಹರಕೆಯನ್ನು ತೀರಿಸುವ ಪದ್ಧತಿ ಕೊರಗರಲ್ಲಿದೆ. ದುಷ್ಟಶಕ್ತಿ ಅಥವಾ ದೈವ-ದೇವರುಗಳ ಮತ್ತು ಗತಿಸಿದವರ ಉಪದ್ರವ ಇದ್ದರೆ ಯಾವುದೇ ರೀತಿಯ ಔಷಧೋಪಚಾರ ಫಲಿಸುವುದಿಲ್ಲ ಎಂಬ ನಂಬಿಕೆ ಕೊರಗರಲ್ಲಿದೆ.

**ಮಾಟ ಕಳೆಯುವುದು:** ಮಾನವನ ಇತಿಹಾಸದಿಂದಲೂ ಅನೇಕ ರೀತಿಯ ನಂಬಿಕೆಗಳು ಜೊತೆಯಾಗಿ ಬಂದಿವೆ. ಯಾವುದೇ ರೀತಿಯ ರೋಗ-ರುಜಿನಗಳು ಬಂದಾಗ ಮೊದಲು ನೆನಪಾಗುವುದು ದೈವ-ದೇವರು, ನಂತರ ಪ್ರಕೃತಿ, ದುಷ್ಟಶಕ್ತಿ. ಕರಾವಳಿ ಕರ್ನಾಟಕ ಪ್ರದೇಶ ದೈವಾರಾಧನೆಗೆ ಹೆಸರುವಾಸಿ. ಕಾಡು ಪ್ರದೇಶಗಳಲ್ಲಿಯೇ ನೆಲೆಯನ್ನು ಕಂಡುಕೊಂಡಿದ್ದ ಕೊರಗರಿಗೆ ಸಹಜವಾಗಿಯೇ ದುಷ್ಟಶಕ್ತಿ, ಪ್ರಕೃತಿ ಶಕ್ತಿ ಮತ್ತು ದೈವಗಳ ಬಗೆಗಿನ ನಂಬಿಕೆ ಹೆಚ್ಚಾಗಿದೆ. ಇತರೆ ಸಮುದಾಯಗಳಲ್ಲೂ ಈ ರೀತಿಯ ನಂಬಿಕೆಗಳನ್ನು ಕಾಣಬಹುದು. ಕೊರಗರು ಮಾನಸಿಕ ಅಸ್ವಸ್ಥತೆ ಕಂಡುಬಂದಾಗ ಯಾವುದೇ ಭೂತ ಪ್ರೇತ ಹಿಡಿದಿದೆ ಎಂಬುದಾಗಿ ನಂಬುತ್ತಾರೆ. ಆ ಪ್ರೇತವನ್ನು ಹೋಗಲಾಡಿಸಲು ಅಥವಾ ಉಚ್ಚಾಟಿಸಲು ಮಾಂತ್ರಿಕ ಅಥವಾ ದರ್ಶನ ಪಾತ್ರಿಗಳ ಮೊರೆಹೋಗುತ್ತಾರೆ.

ರಾತ್ರಿ ಸಮಯದಲ್ಲಿ ನಡೆಯುವ ಈ ಆಚರಣೆಯಲ್ಲಿ ಕೋಳಿಯನ್ನು ಬಲಿ ಕೊಟ್ಟು ಅಥವಾ ಕುಂಬಳಕಾಯಿಯನ್ನು ಒಡೆದು ವಿಧಿ-ವಿಧಾನಗಳನ್ನು ಪೂರೈಸಲಾಗುತ್ತದೆ. ಕರಿನೀರು, ಓಕುಳಿ ನೀರು, ಬಟ್ಟೆ, ತೆಂಗಿನಕಾಯಿ, ಹಿಂಗಾರ(ಅಡಿಕೆ ಹೂ), ಕಿಸ್ಕರ(ಕೆಂಪುಲ ಹೂ) ಮತ್ತು ಇನ್ನಿತರ ವಸ್ತುಗಳಿಗೆ ದುಷ್ಟಶಕ್ತಿಯನ್ನು ಆಹ್ವಾನಿಸಿ ಹರಿಯುವ ನೀರಿಗೆ ಅಥವಾ ಮೂರು ದಾರಿ ಸೇರುವಲ್ಲಿ ಹೂತುಹಾಕುವ ವಿಧಿಕ್ರಿಯೆಗಳನ್ನು ನಡೆಸುತ್ತಾರೆ. ಆ ಮೂಲಕ ತಮಗೊದಗಿದ ಕಾಯಿಲೆಯನ್ನು ದೂರಮಾಡುತ್ತಾರೆ. ಮಾಟ ಮಾಡುವ ಮೂಲಕ ತಮಗಾಗದವರಿಗೆ ತೊಂದರೆ ಕೊಡುವ ತಾಂತ್ರಿಕ ವಿದ್ಯೆಯೂ ಪ್ರಚಲಿತದಲ್ಲಿದೆ. ದೇಹಕ್ಕೆ ದುಷ್ಟಶಕ್ತಿ ಒಳಹೊಕ್ಕು ಉಪದ್ರವ ನೀಡಿದಾಗಲೂ ಮಾಟ ಕಳೆಯುವ ವಿಧಾನವನ್ನು ಕೊರಗರು ಅನುಸರಿಸುತ್ತಾರೆ.

**ಕೊದಿ ತೆಗೆಯುವುದು:** ಹೊಟ್ಟೆ ಉಬ್ಬರಿಸಿದಾಗ, ವಿಪರೀತ ಭೇದಿಯಾದಾಗ ಮತ್ತು ಸತತ ಹೊಟ್ಟೆನೋವು ಉಂಟಾದಾಗ ಕೊದಿ ತೆಗೆಯುವ ಮೂಲಕ ನಿವಾರಿಸಿಕೊಳ್ಳುತ್ತಾರೆ. ಕೊರಗರು ಇದನ್ನು ಆಸೆಬಿದ್ದಿದೆ ಎಂಬುದಾಗಿ ಕರೆಯುತ್ತಾರೆ. ಮನೆ ಛಾವಣಿಯ ಮೂರು ಕಡೆಯ ಸ್ವಲ್ಪ ಸ್ವಲ್ಪ ಮುಳಿಹುಲ್ಲನ್ನು ತೆಗೆದುಕೊಳ್ಳುತ್ತಾರೆ. ಹಾಗೆಯೇ ಮೂರು

ದಾರಿಯಿಂದ ಎಡಗಾಲಿನಿಂದ ಮೂರು ಸಣ್ಣ ಸಣ್ಣ ಬಿಳಿ ಕಲ್ಲುಗಳನ್ನು ಹೆಕ್ಕಿಕೊಂಡು ನಂತರ ಮಣ್ಣಿನ ಕೊಡಪಾನ(ಬಿಂದಿಗೆ) ಮತ್ತು ಬಟ್ಟಲಿನಲ್ಲಿ ಗಂಜಿ ನೀರು, ಸ್ವಲ್ಪ ಉಪ್ಪು ಮತ್ತು ಕಾಳುಮೆಣಸನ್ನು ಒಟ್ಟು ಮಾಡುತ್ತಾರೆ. ಅನಾರೋಗ್ಯಕ್ಕೆ ಗುರಿಯಾದವನನ್ನು ಕರೆಸಿ ಉಪ್ಪು, ಮೆಣಸು, ಮೂರು ಕಲ್ಲನ್ನು ಅವನ ಕೈಯಲ್ಲಿ ಕೊಟ್ಟು, ಮಣ್ಣಿನ ಕೊಡದೊಳಗೆ ಮುಳಿಹುಲ್ಲನ್ನು ಹಾಕಿ ಬೆಂಕಿ ಹಚ್ಚುತ್ತಾರೆ. ಅದು ಉರಿಯುತ್ತಿರುವಾಗಲೇ ಕೊಡವನ್ನು ರೋಗಿಯ ತಲೆ ನೀವಾಳಿಸಿ ಕೈಯಲ್ಲಿ ಹಿಡಿದಿರುವ ಕಲ್ಲು, ಮೆಣಸು, ಉಪ್ಪನ್ನು ಎಂಜಲು ತಾಗಿಸಿ ಕೊಡದೊಳಗೆ ಹಾಕಿಸುತ್ತಾರೆ. ಮೂರು ಬಾರಿ ಹೀಗೆ ಮಾಡಿ ಕೊಡವನ್ನು ಗಂಜಿ ನೀರಿರುವ ಬಟ್ಟಲಿಗೆ ಕವುಚಿ ಹಾಕುತ್ತಾರೆ. ರೋಗಿಯನ್ನು ಕೊಡಕ್ಕೆ ಕಾಲಿನ ಹಿಂಭಾಗವನ್ನು ತಾಗಿಸಿ ವಿರುದ್ಧ ದಿಕ್ಕಿನಲ್ಲಿ ಮುಂದೆ ನಡೆಯುವಂತೆ ಸೂಚಿಸುತ್ತಾರೆ. ಬಿಸಿಯಾಗಿರುವ ಕೊಡ ಬಟ್ಟಲಿನ ನೀರನ್ನೆಲ್ಲ ಹೀರಿಕೊಳ್ಳುತ್ತದೆ. ಆ ಮೂಲಕ ಕೊದಿ(ಆಶೆ) ಬಿದ್ದಿರುವ ತೀವ್ರತೆಯನ್ನು ಗಮನಿಸುತ್ತಾರೆ. ಮುಂದೆ ಉಬ್ಬರಿಸಿ ನಿಂತ ಹೊಟ್ಟೆ ಪುನಃ ಯಥಾಸ್ಥಿತಿಗೆ ಬರುತ್ತದೆ. ಈ ರೀತಿಯ ವಿಧಾನ ಅಲ್ಪಸ್ವಲ್ಪ ವ್ಯತ್ಯಾಸದೊಂದಿಗೆ ಇತರೆ ಸಮುದಾಯಗಳಲ್ಲೂ ಕಂಡುಬರುತ್ತದೆ.

**ಭಯದಿಂದ ಉಂಟಾದ ಜ್ವರವನ್ನು ಕಡಿಮೆ ಮಾಡಿಸುವುದು:** ಕಾಡು, ಕಾಡಿನಂಚಿನಲ್ಲಿ ವಾಸಿಸುವ ಎಲ್ಲ ಸಮುದಾಯದವರಲ್ಲೂ ಭಯದಿಂದ ಜ್ವರ, ಬೆಚ್ಚಿ ಬೀಳುವುದು ಮತ್ತು ನಿಶ್ಶಕ್ತಿಯುಂಟಾಗುವ ಪ್ರಕರಣಗಳು ನಡೆಯುತ್ತಿರುತ್ತವೆ. ಎಡವಿ ಬಿದ್ದಾಗ ಏನನ್ನೋ ನೋಡಿ ಭಯಗೊಂಡರೂ ಜ್ವರ ಬರುವುದು ಸಹಜ. ಈ ರೀತಿ ಅನಾರೋಗ್ಯವಾದಾಗ ಕೊರಗರು ದೀವಟಿಗೆ ಮತ್ತು ಓಕುಳಿ ನೀರಿನ ಮೂಲಕ ನಿವಾರಿಸಿಕೊಳ್ಳುತ್ತಾರೆ. ಸಣ್ಣ ಗಾತ್ರದ ಮೂರು ದೀವಟಿಗೆ(ಕೋಲ್ತಿ)ಗಳನ್ನು ಮತ್ತು ಅರಶಿಣ, ಸುಣ್ಣ ಮಿಶ್ರಿತ ನೀರಿನ ಓಕುಳಿಯನ್ನು ತಯಾರು ಮಾಡಿಕೊಳ್ಳುತ್ತಾರೆ. ಅನಾರೋಗ್ಯಕ್ಕೆ ಪೀಡಿತನಾದವನನ್ನು ಮನೆಯ ಹೊಸ್ತಿಲಲ್ಲಿ ಕುಳ್ಳಿರಿಸಿ ದೀವಟಿಗೆಗಳನ್ನು ಉರಿಸುತ್ತಾರೆ. ಪ್ರಖರವಾಗಿ ಉರಿಯುತ್ತಿರುವ ದೀವಟಿಗೆಗಳಿಗೆ ಓಕುಳಿ ನೀರನ್ನು ಹಾಕಿ ನಂದಿಸುತ್ತಾರೆ. ಬೆಂಕಿಯ ಜ್ವಾಲೆ ಓಕುಳಿ ನೀರಿನಿಂದ ಸ್ತಬ್ಧವಾದ ನೋಟಕ್ಕೆ ಅನಾರೋಗ್ಯಕ್ಕೆ ತುತ್ತಾದ ವ್ಯಕ್ತಿ ಬೆಚ್ಚಿ ಬೀಳುತ್ತಾನೆ. ಇದರಿಂದ ಈ ಹಿಂದಿನ ಭಯ ಬಿಟ್ಟು ಹೋಗುತ್ತದೆ ಎಂಬ ನಂಬಿಕೆ ಕೊರಗರದು.

ಕೊರಗರು ಮೂಲತಃ ಪ್ರಕೃತಿಯಾರಾಧಕರು. ದೇಶದ ಬುಡಕಟ್ಟು ಸಮುದಾಯಗಳ ಮೂಲನೆಲೆ ದಟ್ಟ ಕಾನನ ಅಥವಾ ಕಾಡಿನಂಚು. ಬದಲಾದ ಕಾಲಘಟ್ಟದಲ್ಲಿ ಇವರ ನೆಲೆ

ಬದಲಾಗಲು ಕಾರಣ 'ನಾಗರಿಕ'ರೆಂದು ಕರೆಯಲ್ಪಡುವ ಜನಸಮುದಾಯಗಳ ದುರಾಸೆ. ಅನಾದಿಕಾಲದಿಂದಲೂ ಪ್ರಕೃತಿಯನ್ನು ವಾಸದ ನೆಲೆಯಾಗಿಸಿ, ಆರಾಧಿಸಿಕೊಂಡು ಬಂದಿರುವ ಮಾನವರು ಪ್ರಕೃತಿಯನ್ನೇ ಔಷಧಿಗಳನ್ನಾಗಿಸಿಕೊಂಡು ಬಂದಿರುವುದನ್ನು ಗಮನಿಸಬಹುದು. ಪ್ರಕೃತಿಯಲ್ಲಿ ದೊರೆಯುವ ಗಿಡಮೂಲಿಕೆಗಳೇ ಔಷಧಿಗಳು. ಆದಿಮ ಬುಡಕಟ್ಟುಗಳಲ್ಲಿ ಒಂದಾದ ಕೊರಗರು ಹಿಂದಿನಿಂದಲೂ ಅನೇಕ ರೋಗರುಜಿಗಳಿಗೆ ಪ್ರಕೃತಿಯನ್ನೇ ನೆಚ್ಚಿಕೊಂಡಿರುವುದು ಕಂಡುಬರುತ್ತದೆ. ಸಣ್ಣಪುಟ್ಟ ಕಾಯಿಲೆಗಳಿಗೆ ದಿನನಿತ್ಯ ಮಾಡುವ ಉಪಚಾರಗಳ ವಕ್ತೃಮಾಹಿತಿಗಳು ಹೀಗಿವೆ.

೧. **ಜ್ವರ:** ಜ್ವರ ಬಂದಾಗ ದೇಹಪೂರ್ತಿ ಬಿಸಿಯಾಗಿರುತ್ತದೆ. ಇದಕ್ಕೆ ಕೊರಗರು ತಣ್ಣೀರಿನ ಪಟ್ಟಿಯನ್ನು ತಲೆ, ಹಣೆ ಮೈಕೈ ಮೇಲೆ ಇಡುತ್ತಾರೆ. ಬಿಸಿಯಾದ ಗಂಜಿಗೆ ಮೆಣಸು(ಕಾಳುಮೆಣಸು) ಸೇರಿಸಿ ಊಟ ಮಾಡಿದರೆ ಜ್ವರ ಕಡಿಮೆಯಾಗುತ್ತದೆ.

೨. **ಕಾಲಿನ ಮೊಳೆ:** ಒಲೆಯ ಬದಿಗೆ ಮೊಳೆಯಾಗಿರುವ ಕಾಲಿನ ಭಾಗವನ್ನು ಒತ್ತಬೇಕು. ಹರಳುಪ್ಪನ್ನು ಮೊಳೆಯಾಗಿರುವ ಭಾಗಕ್ಕೆ ಇಟ್ಟು ಬಿಸಿ ಮಾಡಿದರೆ ಕಾಲಿನ ಮೊಳೆ(ಕಲ್ಲೊತ್ತು) ವಾಸಿಯಾಗುತ್ತದೆ.

೩. **ಕುರ:** ತುಳು ಭಾಷೆಯ 'ಉಪ್ಪಳಿಗೆ' ಎಂದು ಕರೆಯುವ ಮರದ ಮೇಣವನ್ನು ಕುರದ ಸುತ್ತ ಹಚ್ಚುವುದರಿಂದ ಕುರ ವಾಸಿಯಾಗುತ್ತದೆ.

೪. **ಕಫ:** ತುಂಬೆ ಮತ್ತು ಈರುಳ್ಳಿ ರಸಕ್ಕೆ ಐದಾರು ಕೆಂಪಿರುವೆಯ ರಸವನ್ನು ಸೇರಿಸಿ ಬೆಳಿಗ್ಗೆ-ಸಾಯಂಕಾಲ ಕುಡಿಸುವುದರಿಂದ ಕಫ ಕಡಿಮೆಯಾಗುತ್ತದೆ.

೫. **ನೆಗಡಿ(ಶೀತ):** ದನದ ಮೂಳೆಯನ್ನು ಬೇಯಿಸಿ ತೆಗೆದ ರಸಕ್ಕೆ ಮೆಣಸು(ಕಾಳುಮೆಣಸು) ಕಷಾಯ ಉಪ್ಪು ಸೇರಿಸಿ ಕುಡಿದರೆ ತಕ್ಷಣ ಕಡಿಮೆಯಾಗುತ್ತದೆ. ಅಥವಾ ಶುಂಠಿ, ಓಲೆಬೆಲ್ಲ(ತಾಳೆಬೆಲ್ಲ)ವನ್ನು ಸೇರಿಸಿ ಕುಡಿದರೂ ನೆಗಡಿ ಕಡಿಮೆಯಾಗುವುದು.

೬. **ಅಜೀರ್ಣ:** ಆಡಿನ ಹಾಲಿನಲ್ಲಿ ಸೀಬೆ ಗಿಡದ ಚಿಗುರೆಲೆಯನ್ನು ಸೇರಿಸಿ ದಿನ ಮೂರು ಹೊತ್ತು ಸೇವಿಸಬೇಕು. ಅಂಟುವಾಳದ ನೊರೆ ಬರಿಸಿ ಕುಡಿದರೂ ಅಜೀರ್ಣ ವಾಸಿಯಾಗುತ್ತದೆ. ಅಂಟುವಾಳದ ನೊರೆಯನ್ನು ಹೊಕ್ಕಳಿಗೆ ಮುಟ್ಟಿಸುವುದರಿಂದ ಅಜೀರ್ಣ ವಾಸಿಯಾಗುತ್ತದೆ.

೭. **ಬೆನ್ನು ನೋವು:** ತೆಂಗಿನೆಣ್ಣೆಯನ್ನು ಬಿಸಿ ಮಾಡಿ ಕಲ್ಲುಪ್ಪು ಹಾಕಿ ನೋವಿರುವ ಜಾಗಕ್ಕೆ ಹಚ್ಚಿದರೆ ಬೆನ್ನು ನೋವು ಕಡಿಮೆಯಾಗುವುದು.

೮. **ಉಗುರುಸುತ್ತು:** ತೆಂಗಿನೆಣ್ಣೆಯನ್ನು ಬಿಸಿ ಮಾಡಿ ಉಗುರಿಗೆ ಹಾಕಬೇಕು. ಗೋಡಂಬಿಯ ಸಿಪ್ಪೆಗೆ ಎಣ್ಣೆ ಹಾಕಿ ಬಿಸಿ ಮಾಡಿ ಉಗುರಿಗೆ ಹಾಕಿದರೆ ಮಾಂಸದೊಳಗೆ ಸೇರಿದ ಉಗುರು ಸಾಯುತ್ತದೆ.

೯. **ತಲೆನೋವು:** ಕೆಸುವಿನ ಎಲೆಯ ದಂಟನ್ನು ಕಾಯಿಸಿ ಬಿಸಿಯಿರುವಾಗಲೇ ತಲೆಗೆ ಮುಟ್ಟಿಸಿದರೆ ತಲೆನೋವು ವಾಸಿಯಾಗುತ್ತದೆ.

೧೦. **ಕೆಮ್ಮು, ದಮ್ಮು ಮತ್ತು ಉಬ್ಬಸ:** ಕಪ್ಪೆಯ ಎರಡು ಕಾಲುಗಳನ್ನು ಸುಟ್ಟು ತಿಂದರೆ ವಾಸಿಯಾಗುತ್ತದೆ. ಪಾರಿವಾಳ ಅಥವಾ ಕಾಗೆಯ ಕಲೆಜಾ(ಯಕೃತ್)ವನ್ನು ಕಾಯಿಸಿ ತಿಂದರೆ ಕೆಮ್ಮು, ದಮ್ಮು ಮತ್ತು ಉಬ್ಬಸ ಕಡಿಮೆಯಾಗುವುದು.

ಕುರಿ ಅಥವಾ ಆಡಿನ ಲಿವರ್(ಯಕೃತ್) ಬೇಯಿಸಿ ಮೆಣಸು ಮತ್ತು ಉಪ್ಪು ಸೇರಿಸಿ ತಿಂದರೂ ವಾಸಿಯಾಗುತ್ತದೆ.

೧೧. **ರಕ್ತ ಹೆಪ್ಪುಗಟ್ಟಲು:** ಗಾಯದ ಮೇಲೆ ಕಾಂಗ್ರೆಸ್ ಗಿಡದ ರಸವನ್ನು ಬಿಟ್ಟರೆ ರಕ್ತ ಬರುವುದು ನಿಲ್ಲುತ್ತದೆ. ಜತ್ರೋಪ ಎಲೆಯ ರಸವನ್ನು ರಕ್ತ ಸೋರುವಿಕೆಗೆ ಹಾಕಿದರೆ ರಕ್ತ ಹೆಪ್ಪುಗಟ್ಟುತ್ತದೆ. ಜೇಡರ ಬಲೆಯನ್ನು ಹರಡಿ ವಿಶ್ರಮಿಸಿದರೆ ರಕ್ತ ಸೋರುವುದಿಲ್ಲ. ಸ್ವ-ಮೂತ್ರವನ್ನು ಹಾಕಿದರೂ ರಕ್ತ ಹೆಪ್ಪುಗಟ್ಟುತ್ತದೆ.

೧೨. **ಕೆಂಗಣ್ಣು:** ಬೆಳಗಿನ ಮೊದಲ ಸಲದ ಮೂತ್ರದಿಂದ ಕಣ್ಣು ತೊಳೆದರೆ ಕೆಂಗಣ್ಣು ಕಡಿಮೆಯಾಗುತ್ತದೆ. ಬಿಸಿಲು ನೋಡದೆ ತಂಪು ಆಹಾರ ಸೇವಿಸಬೇಕು.

೧೩. **ಬಿಳಿಮಚ್ಚೆ:** ಆನೆ ತೊಗಟೆ ಎಲೆಯ ರಸವನ್ನು ಲೇಪಿಸಿದಂತೆ ಬಿಳಿಮಚ್ಚೆ(ಸುಟ್ಟು) ವಾಸಿಯಾಗುತ್ತದೆ.

೧೪. **ಹಾಸಿಗೆಯಲ್ಲಿ ಮೂತ್ರ ಮಾಡುವುದನ್ನು ತಡೆಗಟ್ಟಲು:** ಏಡಿ ಕಣ್ಣನ್ನು ಸುಟ್ಟು ತಿನ್ನಲು ಕೊಡಬೇಕು.

೧೫. **ಚೇಳು ಕಡಿತವಾದರೆ:** ಅರಿಶಿಣ ಕೊಂಬನ್ನು ಸುಟ್ಟು ಬಿಸಿ ಮಾಡಿ ಕಡಿತದ ಜಾಗಕ್ಕೆ ಹಚ್ಚಿದರೆ ನೋವು ಶಮನವಾಗುತ್ತದೆ.

ಹೀಗೆ ಪ್ರತಿದಿನ ಕೊರಗರು ತಮ್ಮ ಮನೆಯಲ್ಲಿರುವ ಮತ್ತು ಮನೆ ಸುತ್ತಮುತ್ತಲಿನ ಗಿಡಮೂಲಿಕೆ ಮತ್ತು ಇತರೆ ವಸ್ತು, ಪ್ರಾಣಿಗಳನ್ನು ಉಪಯೋಗಿಸಿಕೊಂಡು ತಮಗೆ ಬಂದ ರೋಗ-ರುಜಿನಗಳನ್ನು ಶಮನ ಮಾಡುತ್ತಾ ಬಂದಿರುವುದು ಕಂಡುಬರುತ್ತದೆ. ಬದಲಾದ ಕಾಲಘಟ್ಟದಲ್ಲಿ ಕಾಡುಗಳ ನಾಶ ಸಾವಿರಾರು ಗಿಡಮೂಲಿಕೆಗಳನ್ನು ಕಣ್ಮರೆ ಯಾಗಿಸಿವೆ. ಒಂದು ಕಾಲದಲ್ಲಿ ಕಾಡುಗಳಲ್ಲಿ-ಕಾಡಂಚುಗಳಲ್ಲಿ ಜೀವನ ಮಾಡುತ್ತಿದ್ದ ಕೊರಗರು ಅನಿವಾರ್ಯವಾಗಿ ಕಾಡಿನ ಹೊರಗೆ ಜೀವನ ಮಾಡಬೇಕಾಗಿದೆ. ಇದರಿಂದಾಗಿ ಅವರ ಸ್ವಚ್ಛಂದ ಜೀವನಕ್ಕೆ, ಸ್ವಾತಂತ್ರ್ಯಕ್ಕೆ ಧಕ್ಕೆಯಾಗಿದೆ. ಇದು ಅವರ ವೈದ್ಯ ಪದ್ಧತಿಯಲ್ಲಿ ರುಜುವಾತಾಗುತ್ತದೆ. ಇಂದಿನ ಯುವ ಪೀಳಿಗೆಯ ಕೊರಗರಲ್ಲಿ ಬಹುತೇಕರಿಗೆ ಯಾವುದೇ ರೀತಿಯ ನಾಟಿ ವೈದ್ಯ ಪದ್ಧತಿಗಳ ಬಗೆಗೆ ತಿಳಿದಿಲ್ಲ. ಸಹಜವೆಂಬಂತೆ ಆಸ್ಪತ್ರೆಗಳತ್ತ ಮುಖ ಮಾಡಿದ್ದಾರೆ. ಆದರೆ ಇಂದಿನ ಆಧುನಿಕ ಆಸ್ಪತ್ರೆಗಳಲ್ಲಿ ತಮಗೊದಗಿದ ರೋಗಗಳನ್ನು ವಾಸಿ ಮಾಡಿಕೊಳ್ಳುವಷ್ಟು ಆರ್ಥಿಕ ಸ್ಥಿತಿವಂತರಾಗಿಲ್ಲ ಎಂಬುದೇ ಪ್ರಶ್ನೆಯಾಗಿದೆ. ಒಂದು ಕಡೆ ಪಾರಂಪರಿಕ ಕುಲಕಸುಬು ಅಸ್ತಿತ್ವವನ್ನು ಕಳೆದುಕೊಂಡರೆ ಇನ್ನೊಂದು ಕಡೆ ವಾಸದ ನೆಲೆಯೇ ಅಲುಗಾಡಿತು. ಈ ರೀತಿಯ ಸಂದಿಗ್ಧ ಸ್ಥಿತಿಯಲ್ಲಿ ಕೊರಗರ ಬದುಕು ಮೂರಾಬಟ್ಟೆಯಾಗಿರುವುದು ನಿಜ.

### ೩.೫. ಕೊರಗರ ನ್ಯಾಯ ಪದ್ಧತಿ

ಆಸ್ತಿ ಎಂಬುದು ಯಾವಾಗ ಅಸ್ತಿತ್ವವನ್ನು ಕಂಡುಕೊಂಡಿತೋ ಅಂದಿನಿಂದಲೇ ನ್ಯಾಯ ಪದ್ಧತಿ ಆರಂಭವಾಯಿತು ಎಂಬುದು ತಜ್ಞರ ಅಭಿಮತ. ಆಸ್ತಿಯ ಅಸ್ತಿತ್ವದಿಂದ ನೂರಾರು ವ್ಯವಹಾರಗಳು ಹೆಚ್ಚುತ್ತ ಹೋದವು. ಅದರ ಮುಂದುವರಿದ ಭಾಗವಾಗಿ ಆಕ್ರಮಣಗಳು, ಜಗಳಗಳು, ವಾದವಿವಾದಗಳು ಜಾಗವನ್ನು ಆಕ್ರಮಿಸಿಕೊಂಡಿರುವುದರಿಂದಲೇ ನ್ಯಾಯ ಪದ್ಧತಿ ಅನಿವಾರ್ಯವಾಯಿತು. ಸಕುಟುಂಬಿಕರು ಒಂದೆಡೆ ಕಲೆತು ಉಂಟಾದ ತಪ್ಪು-ಒಪ್ಪುಗಳನ್ನು ಪರಿಹರಿಸುತ್ತ ಬಂದರು. ಅದು ಮುಂದೆ ನ್ಯಾಯ ಪದ್ಧತಿಗೆ ಕಾರಣವಾಯಿತು ಎಂದು ಹೇಳಬಹುದು. ಜಗತ್ತಿನ ಯಾವುದೇ ಸಮಾಜ ಕೂಡ ನ್ಯಾಯ ಪದ್ಧತಿಯಿಂದ ಹೊರತಾಗಿಲ್ಲ.

"ಕೊರಗರಲ್ಲಿ ಅಕ್ರಮ ಪ್ರಣಯ ವ್ಯವಹಾರ ನಡೆದರೆ ಪ್ರಿಯನು ಅವಳನ್ನು ಮದುವೆ ಮಾಡಿಕೊಳ್ಳಬೇಕೆಂದು ಒತ್ತಾಯ ಮಾಡಲಾಗುತ್ತದೆ. ಅವಳಂತೆಯೇ ಅವನೂ ಕೀಳು ಜಾತಿಯವನಾದರೆ ಈ ರೀತಿ ನಡೆಯುತ್ತದೆ"[೮] ಎಂದು ಅಕ್ಕಮಹಾದೇವಿ ಅವರು

ಉಲ್ಲೇಖಿಸಿದ್ದಾರೆ. ಪುರುಷೋತ್ತಮ ಬಿಳಿಮಲೆ ಅವರು ಕೊರಗರ ನ್ಯಾಯ ಪದ್ಧತಿ ಬಗ್ಗೆ ಹೀಗೆ ವಿವರಿಸುತ್ತಾರೆ. "ಕೊರಗರ ಒಳಾಡಳಿತದಲ್ಲಿ 'ಮುಕಾರಿ' ಅಥವಾ 'ಮುಕಾರ್ವೆ' ಅತ್ಯಂತ ಉನ್ನತವಾದ ಸ್ಥಾನವನ್ನು ಪಡೆದಿದ್ದಾನೆ. ಇವನಿಗೆ ಸಾಮಾನ್ಯವಾಗಿ 'ಮೂಂಡಿಕರೆ' ಎಂಬ ಸಹಾಯಕನಿರುತ್ತಾನೆ. ಇವರಿಬ್ಬರೂ ಕೊರಗರ ಮಧ್ಯೆ ನ್ಯಾಯ ತೀರ್ಮಾನ ಮಾಡುವ ಅಧಿಕಾರವನ್ನು ಹೊಂದಿದ್ದಾರೆ. ಮದುವೆ ಅಥವಾ ಭೂತದ ಕೋಲದ ಸಂದರ್ಭದಲ್ಲಿ ಈ ಬಗೆಯ ನ್ಯಾಯ ತೀರ್ಮಾನ ನಡೆಯುತ್ತದೆ. ನ್ಯಾಯ ತೀರ್ಮಾನಗಳು ಬಹುಮಟ್ಟಿಗೆ ನಂಬಿಕೆ ಮತ್ತು ಸಂಪ್ರದಾಯವನ್ನು ಆಧರಿಸಿಕೊಂಡಿರುತ್ತವೆ."[೯]

ಭಾರತದ ಬಹುತೇಕ ಬುಡಕಟ್ಟುಗಳಲ್ಲಿ ನಂಬಿಕೆಯ ಮೇಲೆಯೇ ನ್ಯಾಯ-ತೀರ್ಮಾನ ನಿಂತಿರುವುದನ್ನು ಗಮನಿಸಬಹುದು. ಸಾಂಪ್ರದಾಯಿಕವಾದ ಜೀವನ ವಿಧಾನದಲ್ಲಿ ಪರಂಪರಾಗತವಾಗಿ ಬಂದಿರುವ ನಂಬಿಕೆ-ನಿಷೇಧಗಳೇ ಅನೇಕ ಸಾರಿ ತೀರ್ಮಾನಗಳನ್ನೇ ನೀಡುತ್ತವೆ. ಒಂದು ವೇಳೆ ಅತಿರೇಕಕ್ಕೆ ಹೋದಾಗ ಮಾತ್ರ ನ್ಯಾಯಾಲಯದ ಕಟ್ಟೆ ಏರುವುದು ಕಂಡುಬರುತ್ತದೆ.

ಕೊರಗರ ನ್ಯಾಯ ತೀರ್ಮಾನ ನಡೆಯುವುದು ಜಮ್ಮಾ ಅಥವಾ ಮೂಲ ಸ್ಥಾನದಲ್ಲಿ. ಮನೆತನದ ಗುರಿಕಾರ ಮತ್ತು ದೈವದ ದರ್ಶನ ಪಾತ್ರಿ(ಪೂಜಾರಿ) ಇತ್ಯಾದಿ ಪ್ರಮುಖರು ಕುಟುಂಬದ ಮನೆಯಲ್ಲಿ ಸೇರುತ್ತಾರೆ. ಎಲ್ಲರ ಸಮ್ಮುಖದಲ್ಲಿ ದೈವಗಳಿಗೆ ತಂಬಿಲ ಅಥವಾ ಕಳ್ಳು ಇಟ್ಟು ಪ್ರಾರ್ಥನೆ ಮಾಡುತ್ತಾರೆ. ನಂತರದಲ್ಲಿ ನ್ಯಾಯಕ್ಕೆ ಸಂಬಂಧಿಸಿದಂತೆ ಸುದೀರ್ಘವಾದ ವಿಚಾರಣೆ ಮತ್ತು ಚರ್ಚೆ ನಡೆಯುತ್ತದೆ. ಕಠಿಣವಾದ ಅಥವಾ ಸಂಕೀರ್ಣತೆಯಿಂದ ಕೂಡಿದ ವಿಷಯಗಳಾದರೆ ದಿನಗಟ್ಟಲೆ ವಿಚಾರಣೆ ನಡೆದ ಸಂದರ್ಭಗಳೂ ಕೊರಗರಲ್ಲಿ ಆಗಿರುವುದನ್ನು ವಕ್ತೃಗಳು ನೆನಪಿಸಿಕೊಳ್ಳುತ್ತಾರೆ. "ಹೀಗೆ ನಡೆಯುವ ಸಮುದಾಯದ ನ್ಯಾಯ ಕಟ್ಟೆಯಲ್ಲಿ ಆಗುವ ತೀರ್ಪು ಗುರಿಕಾರನ ಕ್ಷಮತೆ ಮತ್ತು ಪಾತ್ರಿಯ ದೂರದೃಷ್ಟಿ ಬುದ್ಧಿಮತ್ತೆಯ ಮೇಲೆ ಅವಲಂಬಿತವಾಗಿರುತ್ತದೆ. ನಮ್ಮ ನ್ಯಾಯ ತೀರ್ಪು ಕಳ್ಳಿನ ಪ್ರಭಾವದ ಮೇಲೆಯೇ ಹೆಚ್ಚಾಗಿ ತೀರ್ಮಾನಗೊಳ್ಳುತ್ತಿತ್ತು ಎಂದು ಪುತ್ತೂರಿನ ೭೦ ವರ್ಷ ಪ್ರಾಯದ ಬಳ್ಳು ಕೊರಗ ಅವರು ಅಭಿಪ್ರಾಯಪಡುತ್ತಾರೆ."(ಪು.೧೨೫, ೨೦೧೩) ಎಂದು ಗುಣಪಾಲ ಶೆಟ್ಟಿಯವರು ಉಲ್ಲೇಖಿಸಿದ್ದಾರೆ.

ಕೊರಗರ ನ್ಯಾಯ ಪದ್ಧತಿಯನ್ನು ವಿಶ್ಲೇಷಿಸಿರುವ ಅರವಿಂದ ಮಾಲಗತ್ತಿ ಮತ್ತು ಒಡೆಯರ್ ಸಿ. ಹೆಗ್ಗಡೆಯವರು ವಿಚಾರಣೆಗೊಳಪಡುವ ವಿಷಯಗಳನ್ನು ಈ ರೀತಿ ನೀಡಿದ್ದಾರೆ.

೧. ಊಟ ಮಾಡುವಾಗ ಒಬ್ಬನ ಎಲೆಯ ಅಗುಳು ಇನ್ನೊಬ್ಬನ ಎಲೆಗೆ ಬೀಳುವುದು.

೨. ಕಳ್ಳು ಸುರಿಯುವವನು ಕೈ ತಪ್ಪಿ ನೆಲಕ್ಕೆ ಚೆಲ್ಲುವುದು.

೩. ಹೆಂಡತಿಯ ಒಪ್ಪಿಗೆಯಿಲ್ಲದೆ ಮರುಮದುವೆ ಮಾಡಿಕೊಳ್ಳುವುದು.

೪. ಗಂಡು ಅಥವಾ ಹೆಣ್ಣು ವ್ಯಭಿಚಾರದಲ್ಲಿ ತೊಡಗುವುದು.

೫. ಕೊರಗ ತನಿಯನ ಕೋಲ ನಡೆಸದಿರುವುದು.

೬. ಸಮೂಹ ನೃತ್ಯದಲ್ಲಿ ಭಾಗವಹಿಸದಿರುವುದು.

೭. ಭಿಕ್ಷೆಗಾಗಿ ಅಥವಾ ಎಂಜಲನ್ನಕ್ಕಾಗಿ ಹಂಚಿಕೊಂಡ ಮನೆಯನ್ನು ಉಲ್ಲಂಘಿಸುವುದು.

೮. ಮುಕಾರಿ ಹೇಳಿದ ಯಾವುದೇ ಕೆಲಸವನ್ನು ಮಾಡದಿರುವುದು.

(ಪುರುಷೋತ್ತಮ ಬಿಳಿಮಲೆ, ಪು. ೪೭, ೧೯೯೩)

ಇಲ್ಲಿನ ಘಟನೆಗಳನ್ನು ಗಮನಿಸಿದಾಗ ಬಹುತೇಕ ಘಟನೆಗಳ ಕಾಲಘಟ್ಟ ಸ್ವಾತಂತ್ರ್ಯ ಪೂರ್ವಕ್ಕೆ ಸೇರುತ್ತದೆ ಎಂಬುದು ಮನವರಿಕೆಯಾಗುತ್ತದೆ. ಇತ್ತೀಚಿನ ದಿನಗಳಲ್ಲಿ ನ್ಯಾಯ ಕಟ್ಟೆಗೆ ಬರುವ ಘಟನೆಗಳು ಬೇರೆ ರೀತಿಯಲ್ಲಿವೆ.

ಕೊರಗರ ನ್ಯಾಯ ತೀರ್ಮಾನಗಳು ಬಹುತೇಕ ಮೌಖಿಕವಾಗಿರುತ್ತವೆ. ಅನಕ್ಷರಸ್ಥರಾಗಿದ್ದ ಎಲ್ಲ ಬುಡಕಟ್ಟುಗಳಲ್ಲಿ ಈ ರೀತಿಯ ಮೌಖಿಕ ಕರಾರುಗಳೇ ನಡೆದಿರುವುದು. ಪಾಲನೆ ಯಾಗಿರುವುದು ಸಹಜವೆಂಬಂತೆ ತೋರುತ್ತದೆ. ದೈವ-ದೇವರುಗಳ ಬಗೆಗಿನ ಅತೀವ ಭಯ-ಭಕ್ತಿಗಳೇ ನ್ಯಾಯಪಾಲನೆಗೆ ಕಾರಮಗಳಾಗುತ್ತವೆ. ಕುಟುಂಬದ ದೈವ-ದೇವರುಗಳೇ ಸಾಕ್ಷಿಗಳಾಗುತ್ತವೆ. ಅಷ್ಟಕ್ಕೂ ಬುಡಕಟ್ಟು ಸಮುದಾಯಗಳು ಮಾನವೀಯತೆಗಳನ್ನು ಒಳಗೊಂಡಿರುವುದರೆಂದು, ಕಷ್ಟ ಸಹಿಷ್ಣುಗಳೆಂದೂ, ಸಮಾಜದ ವಿಧಿನಿಷೇಧಗಳನ್ನು ಸಲೀಸಾಗಿ ಮೀರಲಾರದವರೆಂದೂ ವಿದ್ವಾಂಸರ ಅಭಿಮತ. ಮೂಲತಃ ಪ್ರಕೃತಿಯಾರಾಧಕರಾದ, ಕೊರಗರು ಪ್ರಕೃತಿಗೆ ವಿರುದ್ಧ ನಡೆದವರಲ್ಲ. ಈ ಹಿನ್ನೆಲೆಯಲ್ಲಿ ಕಠಿಣ ಶಿಕ್ಷೆಗಳ ಸಂದರ್ಭಗಳು ಉದ್ಭವಿಸುವುದಿಲ್ಲ. ಒಂದು ವೇಳೆ ನ್ಯಾಯ ತೀರ್ಮಾನದ ತೀರ್ಪಿಗೆ ವಿರುದ್ಧವಾಗಿ ನಡೆದರೆ ಕುಟುಂಬದಿಂದ ಬಹಿಷ್ಕರಿಸುವ ಅಂತಿಮ ಶಿಕ್ಷೆ ವಿಧಿಸಲಾಗುತ್ತಿತ್ತು. ಕುಟುಂಬದಿಂದ ಹೊರಹೋಗಬೇಕಾಗುತ್ತಿತ್ತು. ಯಾವುದೇ ಶುಭ-ಸಮಾರಂಭಗಳಲ್ಲಿ ಭಾಗವಹಿಸುವಂತಿರಲಿಲ್ಲ. ದಂಡದ ರೂಪದಲ್ಲಿ ಹಣ ಅಥಾ ಕಳ್ಳು ಕುಡಿಸಬೇಕಾಗಿತ್ತು. ಬಹಿಷ್ಕಾರದಂತಹ ಶಿಕ್ಷೆಯಿಂದ ಕುಟುಂಬದಿಂದ ಹೊರಹೋಗುವವರ ಸಂಖ್ಯೆ ವೃದ್ಧಿಯಾಗಿ ಕುಟುಂಬದ ಸದಸ್ಯರ

ಸಂಖ್ಯೆ ಇಳಿಮುಖವಾಗಿರುವುದನ್ನೂ ಇಲ್ಲಿ ಗಮನಿಸಬಹುದಾಗಿದೆ. ಬಹಿಷ್ಕಾರಗೊಂಡವರು ನಂತರದ ದಿನಗಳಲ್ಲಿ ಗುರಿಕಾರರ ಕುಟುಂಬದ ಹಿರಿಯರಿಂದ ಸಂಪೂರ್ಣ ದೂರವಾದ ಪ್ರಕರಣಗಳೂ ನಡೆದಿರುವುದನ್ನು ಕೆಲವು ವಕ್ತೃಗಳು ತಿಳಿಸುತ್ತಾರೆ.

ಬದಲಾದ ಕಾಲಘಟ್ಟದಲ್ಲಿ ನ್ಯಾಯಪದ್ಧತಿಯ ಕೆಲಸ ಕಾರ್ಯಗಳು ಬದಲಾಗಿರುವುದನ್ನು ಗಮನಿಸಬಹುದು. ವಾಸದ ನೆಲೆ ಬದಲಾದಂತೆಯೇ ಕುಲ ಕಸುಬುಗಳೂ ಬದಲಾಗಿರುವುದನ್ನು ಕೊರಗರಲ್ಲಿ ಕಾಣುತ್ತೇವೆ. ಶಿಕ್ಷಣ ಪಡೆದುದರಿಂದ ಆಲೋಚನಾ ಶಕ್ತಿ, ದೃಷ್ಟಿಕೋನ ಬದಲಾಗಿದೆ. ಪಾರಂಪರಿಕ ನ್ಯಾಯಪದ್ಧತಿಯನ್ನು ಒಪ್ಪಿಕೊಳ್ಳುವಲ್ಲಿ ಹಿಂದೇಟು ಹಾಕುತ್ತಿದ್ದಾರೆ ಕೊರಗರು. ಸಮುದಾಯದಿಂದ ಬಹಿಷ್ಕಾರ ಹಾಕುವ ಪದ್ಧತಿಯನ್ನು, ಶಿಕ್ಷೆಯನ್ನು ಪ್ರಶ್ನಿಸುತ್ತಿದ್ದಾರೆ. ಈ ಕಾರಣಕ್ಕಾಗಿ ಕೊರಗ ಸಮುದಾಯದ ಸಂಘಟನೆಗಳೆಲ್ಲ ಸೇರಿ ನ್ಯಾಯ ಪದ್ಧತಿಯನ್ನು ಪುನರ್‌ರೂಪಿಸುವ ಕಾರ್ಯಕ್ಕೆ ಕೈಹಾಕಿದ್ದಾರೆ. 'ನಮ್ಮ ನ್ಯಾಯ ಕೂಟ' ಎಂಬ ನ್ಯಾಯ ವ್ಯವಸ್ಥೆಯೊಂದನ್ನು ಹುಟ್ಟುಹಾಕುವಲ್ಲಿ ಸಫಲರಾಗಿದ್ದಾರೆ. ಮುಖ್ಯಸ್ಥರನ್ನೊಳಗೊಂಡಂತೆ ಪ್ರದೇಶಗಳ ಪಂಚರ ತಂಡವೊಂದು ಪ್ರತಿತಿಂಗಳು ನಿರ್ದಿಷ್ಟ ಸ್ಥಳದಲ್ಲಿ ಸಭೆ ಸೇರುವಂತೆ ವ್ಯವಸ್ಥೆಗೊಳಿಸಿದ್ದಾರೆ. ಆ ಮೂಲಕ ಸಾಮುದಾಯಿಕ ನ್ಯಾಯ ವ್ಯವಸ್ಥೆಯನ್ನು ಉನ್ನತಿಗೇರಿಸಿಕೊಂಡಿದ್ದಾರೆ ಕೊರಗರು.

**೩.೬. ನಂಬಿಕೆ–ನಿಷೇಧಗಳು**

ನಿಸರ್ಗದ ಕೂಸಾದ ಮಾನವ ತನ್ನ ಹುಟ್ಟಿನಿಂದಲೇ ಪ್ರಕೃತಿ ವೈಚಿತ್ರ್ಯಗಳಿಗೆ ಬೆರಗಾಗಿದ್ದಾನೆ. ಪ್ರಕೃತಿಯ ಮುಂದೆ ಸೆಣಸಾಡಿದ್ದಾನೆ, ಸೆಣಸಾಡುತ್ತಿದ್ದಾನೆ. ಆದರೂ ಕೆಲವೊಮ್ಮೆ ಪ್ರಕೃತಿಯ ಮುಂದೆ ತನ್ನದೇನೂ ಇಲ್ಲ ಎಂದು ಮಣಿದಿದ್ದಾನೆ. ಸೆಣಸಾಡಿ ಸೋತಾಗ ಒಲಿಸಿಕೊಳ್ಳುವ ತಂತ್ರವನ್ನು ಬೆಳೆಸಿಕೊಂಡ ದಾರಿಯಲ್ಲಿ ನಂಬಿಕೆಗಳನ್ನು–ನಿಷೇಧಗಳನ್ನು ಹುಟ್ಟುಹಾಕಿದ್ದಾನೆ. ಅವುಗಳೇ ಮುಂದೆ ನಡಾವಳಿಗಳಾಗಿ, ಕಟ್ಟುಕಟ್ಟಳೆಗಳಾಗಿ, ರೀತಿ–ರಿವಾಜುಗಳಾಗಿ ಹೆಸರು ಪಡೆದು ಪರಂಪರಾಗತವಾಗಿ ಮುಂದುವರಿದುಕೊಂಡು ಬಂದಿವೆ.

ಕೊರಗರಲ್ಲಿಯೂ ಅನೇಕ ನಂಬಿಕೆಗಳು–ನಿಷೇಧಗಳು ಜೀವನ ವಿಧಾನದಲ್ಲಿ ಹಾಸು ಹೊಕ್ಕಾಗಿದೆ. ಎ.ವಿ.ನಾವಡ ಅವರು "ಕೊರಗ ಸಮುದಾಯದ ನಡುವೆ ಚಾಲನೆ ಯಲ್ಲಿರುವ ಕೆಲವು ನಂಬಿಕೆಗಳು ಅವರ ಬದುಕಿಗೆ ಪೂರಕವಾಗಿದ್ದರೆ ಇನ್ನು ಕೆಲವು ಅವರ ಜೀವ ಚೈತ್ಯತನ್ಯ ಅಥವಾ ಸ್ವಾಭಿಮಾನವನ್ನು ಹತ್ತಿಕ್ಕುವಂತಹವುಗಳು. ಇಂತಹವುಗಳಲ್ಲಿ

ಕೆಲವು ಬೇರೆಯವರು ಈ ಸಮಾಜದ ಮೇಲೆ ಹೇರಿದ ವಿಧಿಗಳು ಇಂದು ಅವರಿಗೆ ನಂಬಿಕೆಗಳಾಗಿ ಒಪ್ಪಿತವಾಗಿರಬೇಕು. ಅಂದರೆ ಅವು ಮೇಲುವರ್ಗದವರಿಗೆ ಅನುಕೂಲಕರ ವಾಗಿರುವವುಗಳು"(ಪು.೨೬೫, ೨೦೧೩) ಎಂದು ವಿಶ್ಲೇಷಿಸಿದ್ದಾರೆ. ಸ್ವಚ್ಛಂದವಾಗಿ ಕಾಡುಗಳಲ್ಲಿ ತಮ್ಮ ಪಾಡಿಗೆ ತಾವು ಜೀವನ ಮಾಡುತ್ತಿದ್ದ ಕೊರಗರು ಕಾಲಾಂತರದಲ್ಲಿ ಕಾಡನ್ನು ಬಿಡಬೇಕಾಯಿತು. ಉಳ್ಳವರ, ಮೇಲ್ವರ್ಗದವರ ತೋಟ-ಗದ್ದೆಗಳಲ್ಲಿ ಗುಲಾಮರಂತೆ, ಜೀತಗಾರರಂತೆ ಜೀವನ ನಡೆಸಬೇಕಾಗಿ ಬಂದಿರುವುದು ವಿಷಾದನೀಯ. ಪ್ರತಿಭಟಿಸಲು, ನಿರಾಕರಿಸಲು ಆಗದಂಥ ಮುಗ್ಧ ಕೊರಗ ಜನರನ್ನು ಮೇಲ್ವರ್ಗದವರು ತುಳಿಯುತ್ತಾ ನೀನು ಹೀಗಿರಬೇಕು ಎಂದು ಕಟ್ಟಪ್ಪಣೆ ಮಾಡುವಲ್ಲಿಗೆ ಬಂದುನಿಂತಿದ್ದು ವಿಪರ್ಯಾಸವೇ ಸರಿ.

ಈ ರೀತಿಯ ದಬ್ಬಾಳಿಕೆ, ಆಕ್ರಮಣಗಳಿಂದಲೇ ಕೊರಗರನ್ನು ಎಲ್ಲ ಇತರೆ ಜನ ಸಮುದಾಯವರು ದೂರೀಕರಿಸಿದರು ಎಂದರೆ ಅತಿಶಯೋಕ್ತಿಯಾಗಲಾರದು. ಮೂಲ ನಿವಾಸಿಗಳೆಂದು, ಆದಿಮ ಬುಡಕಟ್ಟೆಂದು ಕರೆಯಲ್ಪಟ್ಟ ಕೊರಗರು ತಮ್ಮ ಮೂಲನೆಲೆಯಲ್ಲಿಯೇ ಪರಕೀಯರಾಗಿ ಬದುಕಿದುದು ಅತ್ಯಂತ ನೋವಿನ ಸಂಗತಿ. ಅನೇಕ ರೀತಿಯ ನಂಬಿಕೆ-ನಿಷೇಧಗಳನ್ನು ಕೊರಗರಿಗೆ ಆರೋಪಿಸಲಾಯಿತು. ಅದರಂತೆ ಕೊರಗರು ನಡೆದುಕೊಳ್ಳಬೇಕೆಂದು ಆದೇಶಿಸಲಾಯಿತು. ಅದರಂತೆ ನಡೆದುಕೊಂಡು ಅತ್ಯಂತ ಹೀನಾಯ ಸ್ಥಿತಿಯಲ್ಲಿ ಜೀವನ ಮಾಡಿದ ಮುಗ್ಧ ಕೊರಗರು ಎಲ್ಲವನ್ನು ವಿನಯದಿಂದಲೇ ಸ್ವೀಕರಿಸಿರುವುದು ಅವರ ಮುಗ್ಧತೆಯನ್ನು ತಿಳಿಸುತ್ತದೆ. ಮಾನವೀಯತೆಯನ್ನು ಪ್ರದರ್ಶಿಸದ ಮೇಲ್ವರ್ಗದ ಜನಸಮುದಾಯ ತಮ್ಮ ರಾಕ್ಷಸಿ ಗುಣವನ್ನೇ 'ನಾಗರಿಕ'ವೆಂದು ಕರೆಯಿತು. ಆಕ್ರಮಣಕಾರಿ ಧೋರಣೆಯಿಂದಲೇ ತಮ್ಮ ಬೆನ್ನನ್ನು ತಾವೇ ತಟ್ಟಿಕೊಂಡು ಶಹಬ್ಬಾಸ್‌ಗಿರಿ ಕೊಟ್ಟುಕೊಂಡಿರುವುದು ಮಾನವೀಯತೆಗೆ ಮಾಡಿದ ದ್ರೋಹವೆಂದು ಬಗೆಯಬೇಕು.

ಕೊರಗರಿಗೆ ಆರೋಪಿಸಲ್ಪಟ್ಟ, ನಿರ್ದೇಶಿಸಲ್ಪಟ್ಟ ನಂಬಿಕೆ-ನಿಷೇಧಗಳ ಬಗ್ಗೆ ನೋಡೋಣ.

೧. ಕೊರಗರು ನೆಲದ ಮೇಲೆ ಉಗಿಯಬಾರದು. ಕುತ್ತಿಗೆಗೆ ಕಟ್ಟಿಕೊಂಡ ಅಂಡೆಯೊಳಗೆ ಎಂಜಲು ಉಗಿಯಬೇಕು.

೨. ಕೊರಗರು ಊರೊಳಗೆ ಬರುವಾಗ ಕೋಲಿನಿಂದ ಶಬ್ದ ಮಾಡುತ್ತಾ ಬರಬೇಕು.

೩. ಕೊರಗರು ತಮ್ಮವರ ಶವವನ್ನು ಇತರೆ ಸಮುದಾಯದವರ ಕಣ್ಣಿಗೆ ಕಾಣದಂತೆ ಹೊರಗೆ ಒಯ್ಯಬೇಕು.

೪. ಕೊರಗರ ಹೆಸರುಗಳನ್ನು ರಾತ್ರಿ ಸಮಯದಲ್ಲಿ ಹೇಳಬಾರದು. ಹೇಳಲೇಬೇಕಾದರೆ ಕಪ್ಪು ಕಾಲಿನವರು ಎಂದು ಹೇಳಬೇಕು.

೫. ನವರಾತ್ರಿಯ ವೇಳೆ ಕೊರಗ ವೇಷತೊಟ್ಟು ಭಿಕ್ಷಾಟನೆ ಮಾಡದಿದ್ದರೆ ಖಾಯಿಲೆ ಬರುತ್ತದೆ.

೬. ವಿವಿಧ ರೀತಿಯ ಬುಟ್ಟಿಗಳನ್ನು ಹೆಣೆದುಕೊಡುವ ಕೆಲಸವನ್ನು ಕೊರಗರಿಗೆ ದೇವರು ಹೇಳಿದ್ದು.

೭. ಕೊರಗರು ಬಟ್ಟೆ ತೊಡಬಾರದು. ತೊಟ್ಟರೆ ಕಪ್ಪು ಬಣ್ಣದ ಬಟ್ಟೆ ಧರಿಸಬೇಕು. ಮೊಳಕಾಲಿನಿಂದ ಕೆಳಗೆ ಬಟ್ಟೆ ಉಡಬಾರದು.

೮. ಸೀಮಂತದ ದಿನ ಮೇಲ್ಜಾತಿಯ ಗರ್ಭಿಣಿ ಸ್ತ್ರೀ ಉಂಡು ಬಿಟ್ಟ ಎಂಜಲೆಲೆಯನ್ನು ಕೊರಗ ಸ್ತ್ರೀ ಉಂಡರೆ ಗರ್ಭಿಣಿಗೆ ಸುಖ ಪ್ರಸವವಾಗುತ್ತದೆ.

೯. ಮೇಲ್ಜಾತಿಯವರ ಮಕ್ಕಳು ನಿರಂತರ ಕಾಯಿಲೆಗೆ ತುತ್ತಾಗುತ್ತಿದ್ದರೆ ಮಗುವನ್ನು ಕೊರಗ ಸ್ತ್ರೀಯ ಕೈಗೆ ನೀಡಿ ಆಕೆಯಿಂದ ಮೊಲೆಯುಡಿಸಬೇಕು. ಆಕೆ ಮಗುವಿಗೆ ತಮ್ಮ ಜಾತಿಸೂಚಕ ಹೆಸರಿಡಬೇಕು.

೧೦. ಮೇಲ್ಜಾತಿಯವರು ಮದುವೆಯ ಸಂದರ್ಭದಲ್ಲಿ ಖರೀದಿಸಿದ ಸೀರೆ ಆಭರಣಗಳನ್ನು ಕೊರಗ ಸ್ತ್ರೀಯಿಂದ ಮುಟ್ಟಿಸಿಕೊಂಡರೆ ಮದುಮಗಳಿಗೆ ಕ್ಷೇಮ.

ಮೇಲ್ಕಾಣಿಸಿದ ನಂಬಿಕೆಗಳಾವುವೂ ಇಂದು ಕೊರಗರಲ್ಲಿ ಇಲ್ಲ. ಶಿಕ್ಷಣ, ಉನ್ನತೀಕರಣ ಮತ್ತು ಇತರೆ ಪ್ರಭಾವಗಳಿಂದ ಈ ರೀತಿಯ ಯಾವ ನಂಬಿಕೆಗಳೂ ಕೊರಗರಲ್ಲಿ ಉಳಿದಿಲ್ಲ. ಈ ನಂಬಿಕೆ–ನಿಷೇಧಗಳ ಬಗ್ಗೆ ಗಮನಹರಿಸುವುದಾದರೆ ಬಹುತೇಕ ನಂಬಿಕೆಗಳನ್ನು ಕೊರಗರಿಗೆ ಆರೋಪಿಸಿ ಹುಟ್ಟುಹಾಕಿದವರು ಮೇಲ್ವರ್ಗದವರು ಎಂಬುದರಲ್ಲಿ ಸಂಶಯವಿಲ್ಲ. ಕಾಡು–ಕಾಡಂಚಿನ ಪ್ರದೇಶಗಳಲ್ಲಿ ಶತಶತಮಾನಗಳಿಂದ ಬಾಳಿ ಬದುಕಿದ ಕೊರಗರಿಗೆ ಒಂದೆರಡು ಎಕರೆ ಜಮೀನು ಸಂಪಾದಿಸಲು ಸಾಧ್ಯವಾಗಲಿಲ್ಲ ಎಂಬುದೇ ತಪ್ಪು ಕಲ್ಪನೆ. ಯಾಕೆಂದರೆ ಕರಾವಳಿ ಕರ್ನಾಟಕದಲ್ಲಿರುವ ಅನೇಕ ಬಡವರ್ಗದ ಜನ ಸಮುದಾಯಗಳು ಕಾಡು ಕಡಿದು ಕೃಷಿ ಭೂಮಿಯನ್ನಾಗಿ ಮಾಡಿಕೊಂಡಿದ್ದರೂ ಅವುಗಳನ್ನೆಲ್ಲ ಮೇಲ್ವರ್ಗದ ಜನರು "ಮಾನವೀಯತೆಯನ್ನು ಹೊಂದಿರುವ ಜನರು" ಕಸಿದುಕೊಂಡರು ಎಂದು ಹೇಳುವುದೇ ಸರಿ. ಮಾನವೀಯತೆಯನ್ನು ಯಾಕೆ ಪ್ರಸ್ತಾಪಿಸುತ್ತಿದ್ದೇನೆಂದರೆ ಮೇಲ್ವರ್ಗದ

ಮಕ್ಕಳು, ಜನರಿಗೆ ಖಾಯಿಲೆ ಬಂದಾಗ ಆ ಖಾಯಿಲೆಯನ್ನು ಕೊರಗರಿಗೆ ದಾಟಿಸುವ ಕೆಲಸ ಮಾಡುತ್ತಿದ್ದುದರಿಂದ ಹಾಗೆಯೇ ಎಂಜಲೆಲೆಯನ್ನು ತಿನ್ನಬೇಕೆಂದು ಅಪೇಕ್ಷಿಸುವ ಮೇಲ್ವರ್ಗದ ಜನರ ಮನಸ್ಥಿತಿಗೆ ಏನು ಹೇಳೋಣ?

"ಬಡಿಗೆ ಹಿಡಿಯುವ ನಿಜವಾದ ಉದ್ದೇಶ ಬೇಟೆ, ಮೊಲ-ಪಕ್ಷಿಯಂತಹ ಯಾವುದೇ ಜೊತೆಗೆ ಬೇಟೆಗೆ ನೆರವಾಗುತ್ತದೆ ಎಂದು ಕೋಲು ಹಿಡಿಯುತ್ತಾರೆ. ಇವರ ಕೈಯಲ್ಲಿ ಒಂದು ಕತ್ತಿ ಕೂಡಾ ಇರುತ್ತದೆ. ನಾಗಬನಗಳಲ್ಲಿ ತೇವ ಹೆಚ್ಚು; ಇಲ್ಲಿ ಆಮೆ ಹೆಚ್ಚಾಗಿ ಇರುತ್ತದೆ. ಇಂತಹ ಜಾಗಕ್ಕೆ ಹೋಗುವಾಗ ಕೊರಗರು ಕೈಯಲ್ಲಿ ಇರುವ ಕೋಲನ್ನು ನೆಲಕ್ಕೆ ಊರುತ್ತಾ ಆಮೆಯ ಇರವನ್ನು ಪತ್ತೆ ಹಚ್ಚುವುದರಲ್ಲಿ ನಿಸ್ಸೀಮರು; ನಾನು ಕಂಡ ಕೊರಗರ ಬಡಿಗೆ ಊರುವ ಬಡಿಗೆಯಲ್ಲ. ಹೊಡೆಯುವ ಬಡಿಗೆ. ಅದು ಪರಂಪರೆಯ ಪವಿತ್ರ ಬಡಿಗೆ(ಪು.೧೨, ೨೦೦೭) ಎಂದು ಇಂದಿರಾ ಹೆಗ್ಗಡೆ ಅವರು ಕೊರಗರ ನಂಬಿಕೆಯ ಬಗ್ಗೆ ವಿವರಿಸುತ್ತಾರೆ. ಆದರೆ ಇತರ ನಂಬಿಕೆ-ನಿಷೇಧಗಳ ಬಗೆಗೆ ಹೆಗ್ಗಡೆಯವರು ಯಾವುದೇ ತೀರ್ಮಾನಕ್ಕೆ ಬರದಿರುವುದು ವಿಷಾದನೀಯ. ಏನೇ ಆಗಿರಲಿ ಶತಶತಮಾನ ದಿಂದ ನಿಷ್ಕೃಷ್ಟ ಜೀವನ ಅನುಭವಿಸಿ ಗತಿಸಿದ ಕೊರಗರೆಷ್ಟೋ? ಕೊರಗಿ ಕೊರಗಿ ಕೊನೆಯುಸಿರೆಳೆದ ಕೊರಗರೆಷ್ಟೋ? ಕಾಲ ಎಲ್ಲವನ್ನೂ ಮರೆಸುತ್ತದೆ.

**ಕೊನೆ ಟಿಪ್ಪಣಿಗಳು**

೧. ಮಾ.ಭ. ಪೆರ್ಲ, ಪು.೨, ೨೦೦೦

೨. ಪುರುಷೋತ್ತಮ ಬಿಳಿಮಲೆ, ಪು. ೧೦೦, ೧೯೯೦, ಕರಾವಳಿ ಜಾನಪದ.

೩. ಎಂ. ನಂಜಮ್ಮಣ್ಣಿ, ಪು. ೩೦೨, ೧೯೮೨.

೪. ಪುರುಷೋತ್ತಮ ಬಿಳಿಮಲೆ, ಪು. ೪೩, ೧೯೯೩

೫. ಎ.ವಿ. ನಾವಡ, ಪು. ೨೭೫, ೨೦೧೩

೬. ಅದೇ, ಪು. ೨೭೮

೭. ಪುರುಷೋತ್ತಮ ಬಿಳಿಮಲೆ, ಪು. ೩೪, ೧೯೯೩

೮. ಗುಣಪಾಲ್ ಶೆಟ್ಟಿ, ಮೌನ ಮಾತಾದಾಗ, ಪು. ೧೨೫

## ಅಧ್ಯಾಯ ನಾಲ್ಕು

# ಕೊರಗರ ಆರ್ಥಿಕ ಸ್ಥಿತಿಗತಿ

೪.೧. ಕೊರಗರ ಕುಲಕಸುಬು

೪.೨. ಇತರೆ ಉದ್ಯೋಗಗಳು

೪.೩. ಸರ್ಕಾರದ ಯೋಜನೆಗಳು

೪.೪. ಕೃಷಿ ಮತ್ತು ಭೂಮಿ

ಅಧ್ಯಾಯ ನಾಲ್ಕು

## ಕೊರಗರ ಆರ್ಥಿಕ ಸ್ಥಿತಿಗತಿಗಳು

ನೈಸರ್ಗಿಕ ಜೀವನಕ್ಕೆ, ನಿಸರ್ಗಪೂರಕ ಜೀವನಕ್ಕೆ ಮತ್ತೊಂದು ಹೆಸರು ಬುಡಕಟ್ಟು ಜನರು ಅಥವಾ ಬುಡಕಟ್ಟು ಸಮುದಾಯಗಳು. ಇವು ನಿಸರ್ಗದಲ್ಲಿಯೇ ಹುಟ್ಟಿ, ಬಾಳಿ, ಗತಿಸಿ ಹೋಗುವಂಥವು. ಯಾವುದೇ ಅತಿಯಾಸೆ ಪಡದೇ ತಮಗೆ ದಕ್ಕಬೇಕಾದದ್ದು ದಕ್ಕಿದೆ ಎಂಬುದರಲ್ಲಿಯೇ ಸಂತೃಪ್ತಿಯನ್ನು ಹೊಂದಿ ಬಾಳಿದವರು ಬುಡಕಟ್ಟು ಜನರು. ಆದರೆ ಹಂತವನ್ನು ಅನುಭವಿಸಿ ಗತಿಸಿದ ಬುಡಕಟ್ಟು ತಲೆಮಾರಿನ ಹಿರಿಯರೇ ಧನ್ಯರು. ನಂತರದ ಇಂದಿನ ಯುವ ಪೀಳಿಗೆಗೆ ಆ ರೀತಿಯ ಅನುಭವ ಪಡೆಯುವುದು ಕಷ್ಟಸಾಧ್ಯ. ಕಾರಣ ದಿನದಿಂದ ದಿನಕ್ಕೆ ಎಲ್ಲಾ ರೀತಿಯಲ್ಲೂ ಬದಲಾಗುತ್ತಿರುವ ಸಮಾಜ, ಸಮುದಾಯ; ಒಟ್ಟಂದದಲ್ಲಿ ವಿಶಾಲ ಜಗತ್ತು ಇಂದು ಪುಟ್ಟ ಗ್ರಾಮವಾಗಿದೆ. ಜಾಗತೀಕರಣ, ಖಾಸಗೀಕರಣ, ಉದಾರೀಕರಣ ಹೀಗೆ ನಾನಾ ರೀತಿಯ ನಾನಾ ಮುಖವಾಡಗಳನ್ನು ಹೊತ್ತ 'ಕರಣ'ಗಳು ಯಾರನ್ನೂ, ಯಾವಾಗಲೂ ನೆಮ್ಮದಿಯಾಗಿ ಜೀವನ ಮಾಡಲು ಬಿಡುವುದಿಲ್ಲ. ತಮ್ಮ ಪಾಡಿಗೆ ತಾವು ಕಾಡು-ಕಾಡಂಚುಗಳಲ್ಲಿ ಇರುತ್ತೇವೆ ಎಂದರೆ ನಮ್ಮನ್ನಾಳುವವರು, ಮೇಲ್ವರ್ಗದವರು, ಬಂಡವಾಳಶಾಹಿಗಳು ಬಿಡುವುದಿಲ್ಲ. ಕಾಡುಗಳನ್ನು ಬರಿದು ಮಾಡುತ್ತಾ ಬಂದ ಕಾರ್ಖಾನೆಗಳು ಇದೀಗ ಮಣ್ಣನ್ನು ಬರಿದು ಮಾಡುತ್ತಿವೆ. ಇದರಿಂದ ಭಾರತದಾದ್ಯಂತ ಲಕ್ಷಾಂತರ ಬುಡಕಟ್ಟು ಜನರು ನೀರಿನಿಂದ ತೆಗೆದ ಮೀನಿನ ಸ್ಥಿತಿಯಂತಾಗಿರುವುದು ದುರದೃಷ್ಟಕರ ಸಂಗತಿ.

ಸಾವಿರಾರು ವರ್ಷಗಳಿಂದ ಸಮೃದ್ಧ ಕಾಡುಗಳಲ್ಲಿ ರಕ್ಷಿಸಿಕೊಂಡು ಬಂದ ಬುಡಕಟ್ಟುಗಳನ್ನು 'ಕಾಡನ್ನು ನಾಶ ಮಾಡಿದರೆಂದು' ಒಕ್ಕಲೆಬ್ಬಿಸುವ ಅರಣ್ಯ ಇಲಾಖೆ, ಸರ್ಕಾರಗಳು ಅಭಿವೃದ್ಧಿ ಎಂಬ ಮಂತ್ರದ ಮೂಲಕ ಎಲ್ಲರನ್ನೂ ಸಂತೋಷವಾಗಿರಿಸುತ್ತಿದ್ದೇವೆ ಎಂಬ ಘೋಷಣೆಯೇ ಸಾಕಾಗಿದೆ. ಕಾಡನ್ನು, ಕಾಡುಪ್ರಾಣಿಗಳನ್ನು ರಕ್ಷಿಸಿಕೊಂಡು ಬಂದ ಬುಡಕಟ್ಟು ಜನರು ಕಾಣುತ್ತಿದ್ದಾರೆಯೇ ವಿನಃ ಕಾಡನ್ನು ಲೂಟಿ ಮಾಡಿದ ಕಾಡುಗಳ್ಳರು, ಖನಿಜಗಳ್ಳರು ಕಾಣುವುದೇ ಇಲ್ಲ; ಇದು ನಮ್ಮ ವಿಪರ್ಯಾಸ. ಎಲ್ಲವನ್ನೂ ನಾಶ ಮಾಡಿ ಅಭಿವೃದ್ಧಿ ಸಾಧಿಸುತ್ತೇವೆ. ಶಿಕ್ಷಣ ಕೊಡಿಸುತ್ತೇವೆ ಎಂದು ಬೊಗಳೆ ಬಿಡುವ ಪ್ರಜಾಪ್ರಭುತ್ವದ ಜನಪ್ರತಿನಿಧಿಗಳು ಐದು ವರ್ಷಕ್ಕೆ ಒಂದು ಸಾರಿ ಕಾಣುತ್ತಾರೆ. ವಸತಿ, ಕಾಲನಿ, ರಸ್ತೆ, ವಿದ್ಯುಚ್ಛಕ್ತಿ, ಶಾಲೆ, ಆಸ್ಪತ್ರೆ ಇನ್ನಿತರ ಮೂಲಭೂತ ಸೌಕರ್ಯಗಳನ್ನು ಒದಗಿಸದ ಸರ್ಕಾರ ಬುಡಕಟ್ಟು ಜನರಿರುವ ಪ್ರದೇಶಗಳಲ್ಲಿ ಮದ್ಯದಂಗಡಿಗಳನ್ನು ಆರಂಭಿಸಲು ಪರವಾನಗಿಗಳನ್ನು ಬಹುಬೇಗನೆ ನೀಡುತ್ತದೆ. ಇದರಿಂದಾಗಿ ಅಭಿವೃದ್ಧಿ ಸರ್ಕಾರದ ಬೊಕ್ಕಸಕ್ಕಾಯಿತೇ ಹೊರತು ಬುಡಕಟ್ಟು ಜನರಿಗಾಗಲಿಲ್ಲ. ಕೂಲಿ–ನಾಲಿ ಮಾಡಿದ ದುಡ್ಡು ಮನೆ ಸೇರುವ ಬದಲು ಮದ್ಯದಂಗಡಿಗಳಿಗೆ ಸೇರಿತು.

ಜಗತ್ತಿನ ಬಹುತೇಕ ಕಡೆ ದುಡಿಯುವ ವರ್ಗ ಮತ್ತು ದುಡಿಸಿಕೊಳ್ಳುವ ವರ್ಗ ಎಂಬ ಎರಡು ವರ್ಗಗಳು ಕಂಡುಬರುತ್ತವೆ. ದುಡಿಸಿಕೊಳ್ಳುವ ವರ್ಗ ಸಮಾಜದ ಮೇಲುಸ್ತರದಲ್ಲಿದ್ದು ತಮ್ಮ ಸೇವೆ ಮಾಡುವುದಕ್ಕೆ ದುಡಿಯುವ ವರ್ಗವನ್ನು ಸೃಷ್ಟಿಸಿ ದಾಸ್ಯ ಭಾವನೆಯಿಂದ ನೋಡುವ ಪರಿಪಾಠವಿದೆ. ಆದರೆ ದುಡಿಯುವ ವರ್ಗವು ಆಧುನಿಕ ಜಾಗತೀಕರಣದ ಸಂದರ್ಭಕ್ಕೆ ಹೊಂದಿಕೊಳ್ಳದೆ ಹಿಂದಿನ ತಲೆಮಾರಿನ ದುಡಿತದ ನೀತಿಯಲ್ಲಿ ಮುಂದುವರೆಯುತ್ತಿದೆ. ಇಂತಹ ಶ್ರಮಿಕ ವರ್ಗದವರು ಸಾಮಾನ್ಯವಾಗಿ ಅನಕ್ಷರಸ್ಥರಾಗಿದ್ದಾರೆ. ಇದನ್ನು ಬಂಡವಾಳ ಮಾಡಿಕೊಂಡ ಆಳುವ; ದುಡಿಸಿಕೊಳ್ಳುವ ವರ್ಗವು ಶ್ರಮಿಕ ವರ್ಗದವರನ್ನು ಕಡಿಮೆ ಆದಾಯಕ್ಕೆ ದುಡಿಸಿಕೊಂಡು ಶೋಷಿಸುತ್ತಿರುವ ಪರಿಸ್ಥಿತಿ ಮುಂದುವರಿಯುತ್ತಿದೆ. ಜಾಗತೀಕರಣ ಮತ್ತು ಖಾಸಗೀಕರಣಗಳು ಒಮ್ಮೆಲೆ ತಮ್ಮ ವೇಷ ಬದಲಿಸಿಕೊಂಡು ಬೇರೆ ರೀತಿಯಲ್ಲಿಯೇ ಶೋಷಣೆಗೆ ನಿಂತಿರುವುದು ದುರಂತವೇ ಸರಿ. ಅಭಿವೃದ್ಧಿ, ನಗರೀಕರಣ, ನಾಗರಿಕತೆ ಎಂಬ ನಾನಾ ರೀತಿಯ ಕಬಂದಬಾಹುಗಳನ್ನು ಅವು ಚಾಚಿದ್ದು ಅದಕ್ಕೆ ಮೊದಲು ಬಲಿಯಾಗುವುದೇ ಬುಡಕಟ್ಟು ಗಿರಿಜನರು.

## ೪.೧. ಕೊರಗರ ಕುಲಕಸುಬು

ಸಾವಿರಾರು ವರ್ಷಗಳಿಂದ ಕಾಡು–ಕಾಡಂಚುಗಳಲ್ಲಿಯೇ ಜೀವನ ನಡೆಸಿದ ಕೊರಗರಿಗೆ ಕಾಡಿನ ಉಪಉತ್ಪನ್ನಗಳೇ ಜೀವನಾಧಾರವಾಗಿದ್ದವು. ಗಿಡಮರಗಳ ಬಳ್ಳಿ–ಬೇರುಗಳನ್ನು ಉಪಯೋಗಿಸಿಕೊಂಡು ತಮಗೆ ಬೇಕಾದ ಉತ್ಪನ್ನಗಳನ್ನು ತಾವೇ ತಯಾರಿಸಿಕೊಂಡರು. ಮುಂದೆ ಇದುವೇ ಅವರ ವೃತ್ತಿಯಾಗಿ ಬದಲಾಯಿತು. ವಿವಿಧ ಬಳ್ಳಿ–ಬೇರುಗಳನ್ನು ಉಪಯೋಗಿಸಿ ಕಲಾತ್ಮಕವಾಗಿ ಬುಟ್ಟಿಗಳನ್ನು ಹೆಣೆದು ಮಾರಿ ಸರಳ ಜೀವನ ಸಾಗಿಸುತ್ತಾ ಬಂದವರು ಕೊರಗರು.

"ಕೊರಗ ಸಮುದಾಯ ಊರಹೊರಗೆ ಕಾಡ ಅಂಚುಗಳಲ್ಲಿ ವಾಸ ಮಾಡುತ್ತಾ ಅಲ್ಲಿ ದೊರೆವ ಬಿಳಲು, ಬಿದಿರುಗಳನ್ನು ಬಳಸಿಕೊಂಡು ಜೀವನ ನಿರ್ವಹಣೆಗೆ ತೊಡಗಿತು. ಕೊಜಂಬೆ, ಎಲೆಬೂರು, ಇಲ್ಲಬೂರು, ಚೆನ್ನಬೂರು, ಅಡ್ಕೆಬೂರು, ಮಾದೇರಿಬೂರು ಮುಂತಾದ ಬಿಳಲುಗಳಿಂದ ವಿವಿಧ ಗಾತ್ರದ ಬುಟ್ಟಿಗಳು, ಮೀನು ಹಿಡಿಯುವ ಕುತ್ತರಿ, ಭತ್ತ ತುಂಬಿಸುವ ಕದಿಕೆ, ಪೆಟಾರಿ, ತೊಟ್ಟಿಲು ತಯಾರಿ ಇವರ ವಂಶಪಾರಂಪರ್ಯ ವೃತ್ತಿ. ಜೊತೆಗೆ ಜೇನು, ಔಷಧೀಯ ಬೇರು, ನಾರು, ತೊಗಟೆಗಳ ಸಂಗ್ರಹ ಇವರ ಉಪಕಸುಬು."(ಪು.೩೦೧, ೨೦೧೩) ಎಂದು ಕೊರಗರ ಕುಲಕಸುಬು ಬಗ್ಗೆ ಎ.ವಿ. ನಾವಡ ಅವರು ವಿವರಿಸುತ್ತಾರೆ. ಈ ಮೊದಲು ಪ್ರಸ್ತಾಪಿಸಿದಂತೆ 'ಅಭಿವೃದ್ಧಿ' ಎಂಬ ಮೂಲಮಂತ್ರ ಕೊರಗರನ್ನು ನಿರ್ಗತಿಕರನ್ನಾಗಿಸಿತು. ಕುಲಕುಸುಬಾದ ಬುಟ್ಟಿ ಹೆಣೆದು ಕೊಡುವ ಕೊರಗರಿಂದ ಊರಿನ ಎಲ್ಲಾ ಸಮುದಾಯಗಳು ಅನುಕೂಲತೆಗಳನ್ನು ಪಡೆದವು. ಬೆಳೆದ ಬೆಳೆಗಳನ್ನು ಸಂಗ್ರಹಿಸಲು, ಕಾಪಿಡಲು, ಮಾರಾಟ ಮಾಡಲು ಬೇಕಾದ ಸಲಕರಣೆಗಳನ್ನು ಕೊರಗರಿಂದ ಪಡೆದು ಅವರಿಗೆ ದವಸಧಾನ್ಯಗಳನ್ನು ಹಣದ ರೂಪದಲ್ಲಿ ನೀಡುತ್ತಾ ಬಂದರು. 'ಬಂದದ್ದು ನಮ್ಮ ಪಾಲಿನ ಪಂಚಾಮೃತ' ಎಂಬಂತೆ ಎರಡು ಮಾತನಾಡದೇ ಸ್ವೀಕರಿಸಿದ ಕೊರಗರು ಸಂತೃಪ್ತ ಜೀವನ ನಡೆಸಿದರು. ಈ ಹಿನ್ನೆಲೆಯಲ್ಲಿ ಕರಾವಳಿ ಕರ್ನಾಟಕದ ಕೃಷಿ ಜಗತ್ತಿಗೂ ಕೊರಗರ ಕುಲಕಸುಬಿಗೂ ಅವಿನಾಭಾವ ಸಂಬಂಧ ಏರ್ಪಟ್ಟಿದ್ದನ್ನು ಮರೆಯುವಂತಿಲ್ಲ. ಇಂತಿಷ್ಟೇ ಬೆಳೆ ಕೊಡಬೇಕೆಂಬ ಬೇಡಿಕೆಯನ್ನು ಮುಂದಿಟ್ಟವರಲ್ಲ ಎಂದು ಕೊರಗರ ಬಗೆಗಿನ ಅಭಿಪ್ರಾಯಗಳು ಇಲ್ಲಿ ಗಮನೀಯ ಸಂಗತಿ.

ಕೊರಗರಿಗೆ ಮೂಲ ಕುಲಕಸುಬಿನಿಂದ ನಿರಂತರವಾದ ಆದಾಯವನ್ನು ಪಡೆಯಲು ಸಾಧ್ಯವಾಗಲಿಲ್ಲ. ಕಾರಣ ರೈತರು, ಕೃಷಿಕರು ಒಂದು ಸಾರಿ ಖರೀದಿಸಿದರೆ ಮುಂದೆ ಆರೇಳು ತಿಂಗಳುಗಳ ಕಾಲ ನಿರಾಳರಾಗುತ್ತಾರೆ. ಇದರಿಂದಾಗಿ ಕೊರಗರಿಗೆ ಹೊಟ್ಟೆ ತುಂಬಿಸಿಕೊಳ್ಳಲು ಇತರೆ ಉದ್ಯೋಗಗಳನ್ನು ಮಾಡಬೇಕಾದ ಅನಿವಾರ್ಯತೆಯುಂಟಾಯಿತು. ತಮ್ಮ ಆಹಾರದ ಬೇಡಿಕೆಯನ್ನು ಪೂರೈಸಿಕೊಳ್ಳಲು ಅಡಿಕೆ ತೋಟಗಳಲ್ಲಿ ಕೂಲಿಯಾಳುಗಳಾಗಿ ದುಡಿಯಲು ಆರಂಭಿಸಿದರು. ಬೇಟೆಯಾಡುವುದರಲ್ಲಿ ತೊಡಗಿಸಿಕೊಂಡರು. ತಾವು ಪರಂಪರಾಗತವಾಗಿ ಕಲಿತುಕೊಂಡು ಬಂದಿದ್ದ ಡೋಲು ವಾದನವನ್ನು ಮೇಲ್ವರ್ಗದ ಮನೆಯವರ ಎದುರು ಪ್ರದರ್ಶಿಸಿ ದವಸ ಧಾನ್ಯಗಳನ್ನು ಪಡೆಯಲು ಆರಂಭಿಸಿದರು. ಈ ರೀತಿಯ ಕೊಡು–ಕೊಳ್ಳುವಿಕೆಯಲ್ಲಿ ಯಾವುದೇ ರೀತಿಯ ಮೇಲು ಕೀಳೆಂಬ ತಾರತಮ್ಯವನ್ನು ಯಾವತ್ತೂ ಗಣಿಸಿದವರಲ್ಲ. ಇತರೆ ಮೇಲ್ವರ್ಗದವರ ಮನೋಸ್ಥಿತಿಗೂ ಕೊರಗರ ಮನೋಸ್ಥಿತಿಗೂ ಅಜಗಜಾಂತರ. ಉಳ್ಳವರು. ಮೇಲ್ವರ್ಗದವರು ಕೊರಗರನ್ನು ಕೀಳೆಂದು ತರತಮ ಭಾವಿಸಿದರೆ, ಕೊರಗರು ಇದಾವುದರ ಬಗೆಗೆ ಯೋಚನೆ ಮಾಡಿದವರಲ್ಲ.

ಕಾಡಿನಲ್ಲಿ ದೊರಕುವ ಗಿಡ–ಮರ–ಬಳ್ಳಿಗಳಿಂದ ಕಲಾತ್ಮಕವಾದ ಪರಿಕರಗಳನ್ನು ತಯಾರಿಸುವುದೆಂದರೆ ಸುಲಭದ ಕಾರ್ಯವಲ್ಲ. ಬಿಸಿಲು ಮಳೆ ಚಳಿಯೆನ್ನದೇ ಕಾಡುಗಳಲ್ಲಿ ಅಲೆದಾಡಿ ಬಳ್ಳಿ–ಬಿದಿರು–ನಾರುಗಳನ್ನು ಸಂಗ್ರಹಿಸಬೇಕಾಗುತ್ತದೆ. ಇಂತಿಷ್ಟೇ ಸಮಯವಿಲ್ಲದೇ ಅನ್ನಾಹಾರವನ್ನು ಬಿಟ್ಟು ಅಲೆದಾಡಿ ಸಂಗ್ರಹಿಸಬೇಕು. ಅವುಗಳನ್ನು ಹೊತ್ತುಕೊಂಡು ಬಂದು ನೀರಲ್ಲಿ ನೆನೆಸುವುದನ್ನು ನೀರಲ್ಲಿ ಹಾಕಿಡಬೇಕು. ಬಿಸಿಲಲ್ಲಿ ಒಣಗಿಸುವುದನ್ನು ಬಿಸಿಲಲ್ಲಿ ಒಣಗಿಸಬೇಕಾಗುತ್ತದೆ.

**ಕೊರಗರ ಶ್ರಮಶಕ್ತಿ ಹಾಗೂ ಕಸುಬುಗಳು**

ಬುಡಕಟ್ಟುಗಳ ಮುಖ್ಯ ಉತ್ಪಾದನಾ ಮೂಲವಾದ ಶ್ರಮ ಮತ್ತು ಕಸುಬುಗಳನ್ನು ಅವಲೋಕಿಸುವುದು ಸೂಕ್ತವಾಗಿದೆ. ಇಲ್ಲಿ ಶ್ರಮವೆಂದರೆ ಕಷ್ಟಪಟ್ಟು ದುಡಿಯುವುದಷ್ಟೇ ಹಾಗೂ ಜನಸಂಖ್ಯಾವಾರು ವಯೋಮಾನ ಪ್ರಮಾಣ ಎಷ್ಟು? ದುಡಿಯುವವರ ಸಂಖ್ಯೆ ಎಷ್ಟು ಹಾಗೂ ಅವಲಂಬಿತರೆಷ್ಟು ಎನ್ನುವುದಾಗಿದೆ.

ಕಾನೂನಿನ ಪ್ರಕಾರ ೦–೧೭ ವಯೋಮಾನದ ಒಳಗಿನವರು ಯಾವುದೇ ವೃತ್ತಿಯನ್ನು ಮಾಡದ, ೬೧ರ ಮೇಲ್ಪಟ್ಟವರು ದೈಹಿಕ ದೌರ್ಬಲ್ಯದಿಂದಾಗಿ ಶ್ರಮಿಕವರ್ಗಕ್ಕೆ ಅಸಮರ್ಥರೆಂದು ಭಾವಿಸಲಾಗಿದೆ. ಹೀಗಾಗಿ ಈ ವಯೋಮಾನದವರನ್ನು ಅವಲಂಬಿತರೆಂದು ಭಾವಿಸಲಾಗಿದೆ.

ಆದರೆ ಕೊರಗ ಸಮುದಾಯದಲ್ಲಿ ಇದು ಅಪವಾದವೆಂಬಂತೆ ತೋರುತ್ತದೆ. ಶಿಕ್ಷಣ ಪಡೆಯಬೇಕಿದ್ದ ಮಕ್ಕಳು ಹಾಗೂ ವೃದ್ಧರು ಒಂದಿಲ್ಲೊಂದು ಕಾಯಕದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದರಿಂದ ನಿರುದ್ಯೋಗಿಗಳು ಕಾಣಸಿಗರು. ಮತ್ತು ಕಾಯಕಾರ್ಹರಿಗಿಂತ ಹೆಚ್ಚಿನ ಕೆಲಸ ಮಾಡುವುದನ್ನು ಗಮನಿಸಬಹುದು. ಕುಟುಂಬ ನಿರ್ವಹಣೆಗೆ ಲಿಂಗಭೇದ ಮತ್ತು ವಯೋಮಿತಿಯ ಭೇದವಿಲ್ಲದೆ ಇವರು ವೃತ್ತಿಯಲ್ಲಿ ತೊಡಗುವುದು ಸಹಜ. ದುಡಿಯುವ ವರ್ಗದೊಂದಿಗೆ ಕೈಜೋಡಿಸಿ ಕಾಯಕಾರ್ಹರಲ್ಲದ ವಯೋಮಾನದವರು ಸಹ ಗಣನೀಯವಾಗಿ ಕೆಲಸ ನಿರ್ವಹಿಸುತ್ತಿರುವುದು ಕಂಡುಬರುತ್ತದೆ.

ಒಟ್ಟಾರೆ ಮಂಗಳೂರು, ಬಂಟ್ವಾಳ, ಪುತ್ತೂರು, ಬೆಳ್ತಂಗಡಿ ಹಾಗೂ ಸುಳ್ಯ ತಾಲೂಕು ವ್ಯಾಪ್ತಿಯ ಕೊರಗ ಸಮುದಾಯಗಳ ಕಾಯಕಾರ್ಹರಲ್ಲಿ ಲಿಂಗವಾರು ಪ್ರಮಾಣವನ್ನು ಗಮನಿಸಿದಾಗ ಪುರುಷರು ಮತ್ತು ಮಹಿಳೆಯರು ಸಮಾನ ಸ್ಥಾನಮಾನದಲ್ಲಿರುವುದು ಕಂಡುಬರುತ್ತದೆ. ಕೌಟುಂಬಿಕ ಜೀವನೋಪಾಯಕ್ಕಾಗಿ ಮೇಲೆ ತಿಳಿಸಿದಂತೆ ದುಡಿಯುವ ಹಾಗೂ ಅವಲಂಬಿತ ವರ್ಗವು ಸೇರಿಕೊಂಡಿರುವುದರಿಂದ ಇಲ್ಲಿ ಕಾಯಕಾರ್ಹರ ಪ್ರಮಾಣಕ್ಕಿಂತ ಕಾಯಕಸ್ಥರ ಪ್ರಮಾಣ ಹೆಚ್ಚಾಗಿರುವುದು ಕಂಡುಬರುತ್ತದೆ. ಈ ಒಂದು ಅಂಕಿ–ಅಂಶವು ಸಮುದಾಯದಲ್ಲಿ ಎಲ್ಲರೂ ಸೇರಿ ಕೆಲಸ ಮಾಡಿದರೆ ಮಾತ್ರ ತುತ್ತಿನ ಚೀಲಕ್ಕೆ ಸಾಕಾಗುವಷ್ಟು ಹಣ ದುಡಿಯಬಹುದು ಇಲ್ಲದಿದ್ದರೆ ಅರೆಹೊಟ್ಟೆಯಲ್ಲಿ ಬದುಕು ಸಾಗಿಸಬೇಕಾಗುತ್ತದೆ ಎಂಬುದನ್ನು ತೋರಿಸುತ್ತದೆ. ಇದು ಕೊರಗ ಸಮುದಾಯದ ಆರ್ಥಿಕ ವ್ಯವಸ್ಥೆಯನ್ನು ಪ್ರತಿಬಿಂಬಿಸುವಲ್ಲಿ ಪ್ರಮುಖವಾದ ಆಧಾರವಾಗಿದೆ. ಕೋಷ್ಟಕದಿಂದ ತಿಳಿದುಬರುವ ಮುಖ್ಯವಾದ ಅಂಶವೆಂದರೆ ಜೀವನ ನಿರ್ವಹಣೆಯಲ್ಲಿ ಶ್ರಮದ ಅನಿವಾರ್ಯತೆ ಹಾಗೂ ಪ್ರಾಮುಖ್ಯತೆಯನ್ನು ಹಾಗೂ ಕೂತು ಉಣ್ಣುವ ಸಂಸ್ಕೃತಿ ಕೊರಗರಲ್ಲಿ ಇಲ್ಲದಿರುವುದನ್ನು ಇದು ಪ್ರತಿಫಲಿಸುತ್ತದೆ. ಬುಡಕಟ್ಟಿನ ಆರ್ಥಿಕ ಮೂಲ ಶ್ರಮಿಕ ಸಂಸ್ಕೃತಿ ಎಂಬುದನ್ನು ತೋರಿಸುತ್ತದೆ. ಒಟ್ಟಾರೆ ಕಾಯಕಾರ್ಹರ ಪ್ರಮಾಣ ಶೇ. ೯೬.೯೫ರಷ್ಟಿದ್ದಾರೆ. ಲಿಂಗವಾರು ಗಮನಿಸಿದಾಗ ಪುರುಷರು ಶೇ. ೫೨ರಷ್ಟು, ಮಹಿಳೆಯರು ಶೇ. ೪೮ರಷ್ಟಿದ್ದಾರೆ. ಅವಲಂಬಿತ ವರ್ಗದ ಪ್ರಮಾಣ ಶೇ. ೦೩.೦೫ರಷ್ಟಿರುವುದು ಕಂಡುಬರುತ್ತದೆ.

**ಕೊರಗರು ಅವಲಂಬಿಸಿದ ವೃತ್ತಿಗಳು**

ಪ್ರಸ್ತುತ ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು, ಬಂಟ್ವಾಳ, ಪುತ್ತೂರು, ಬೆಳ್ತಂಗಡಿ ಹಾಗೂ ಸುಳ್ಯ ತಾಲೂಕಿನ ಗ್ರಾಮ ಪಂಚಾಯತ್‌ವಾರು ಕೊರಗ ಸಮುದಾಯವು ತಮ್ಮ

ಜೀವನ ನಿರ್ವಹಣೆಗೆ ಪರಂಪರಾಗತವಾದ ಮತ್ತು ಆಧುನಿಕವಾದ ಹಲವು ಬಗೆಯ ವೃತ್ತಿಗಳನ್ನು ಅಳವಡಿಸಿಕೊಂಡಿರುವುದನ್ನು ಇಲ್ಲಿ ಗಮನಿಸಬಹುದಾಗಿದೆ. ಬದಲಾದ ಆರ್ಥಿಕ ಪರಿಸ್ಥಿತಿಯಲ್ಲಿ ಇವರ ಜೀವನಕ್ರಮವು ಬದಲಾವಣೆಗೆ ಒಳಪಡುತ್ತಿದೆ. ಇತ್ತೀಚಿನ ದಿನಮಾನದಲ್ಲಿ ಸ್ವಲ್ಪ ಪ್ರಜ್ಞಾವಂತರಾದ ಕೊರಗರಲ್ಲಿ ಸಾಮಾನ್ಯವಾಗಿ ಕಂಡುಬರುವ ವೃತ್ತಿಗಳು ಕೃಷಿಕೂಲಿ, ಕೃಷಿ, ಜಾಡಮಾಲಿಗಳಾಗಿ, ತೋಟಕಾವಲು, ಬುಟ್ಟಿ ಹೆಣೆಯುವುದು, ಕೆಲಸ ಕಾರ್ಯಗಳಲ್ಲಿ ತೊಡಗಿಸಿಕೊಂಡಿರುವುದು ಕಂಡುಬರುತ್ತದೆ.

ಕೃಷಿಯೊಂದಿಗೆ ಇತರೆ ವೃತ್ತಿಗಳಾದ ಗಾರೆಕೆಲಸ, ಇಟ್ಟಿಗೆಭಟ್ಟಿ, ಹಂಚು ತಯಾರಿಕೆ ಹಾಗೂ ಇತರೆ ಕೆಲಸಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಹಾಗೆಯೇ ಗೃಹಕೃತ್ಯ ಮುಂತಾದವುಗಳಲ್ಲಿ ಮಹಿಳೆಯರು ತೊಡಗಿರುವುದನ್ನು ಕಾಣುತ್ತೇವೆ. ಒಟ್ಟಾರೆಯಾಗಿ ಈ ಕೆಳಗೆ ತಾಲೂಕುವಾರು ಮತ್ತು ದಕ್ಷಿಣ ಕನ್ನಡ ಹಾಗೂ ಉಡುಪಿ ಜಿಲ್ಲೆಯನ್ನೊಳಗೊಂಡಂತೆ ಗ್ರಾಮ ಪಂಚಾಯಿತಿವಾರು ಕೊರಗರು ಅವಲಂಬಿಸಿದ ವೃತ್ತಿಗಳು ಯಾವುವು ಎಂಬುದನ್ನು ಕೋಷ್ಟಕದಲ್ಲಿ ನೀಡಲಾಗಿದೆ.

**ಕೋಷ್ಟಕ ೧. ಸಮೀಕ್ಷೆಗೊಳಪಟ್ಟ ದಕ್ಷಿಣ ಕನ್ನಡ ಜಿಲ್ಲೆಯ ಕೊರಗ ಸಮುದಾಯದ ತಾಲೂಕುವಾರು ಮತ್ತು ಲಿಂಗವಾರು ಕಸುಬುಗಳು**

| ಕ್ರ ಸಂ. | ಕಸುಬುಗಳು | ಮಂಗಳೂರು | | ಬಂಟ್ವಾಳ | | ಪುತ್ತೂರು | | ಬೆಳ್ತಂಗಡಿ | | ಸುಳ್ಯ | |
|---|---|---|---|---|---|---|---|---|---|---|---|
| | | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು |
| ೧ | ಕೃಷಿ | ೧೨ | ೮ | ೮ | ೬ | ೯ | ೫ | ೧೫ | ೮ | ೧೦ | ೬ |
| ೨ | ಕೃಷಿಕೂಲಿ | ೭೫ | ೮೨ | ೫೫ | ೪೩ | ೪೦ | ೩೩ | ೫೩ | ೪೫ | ೪೮ | ೫೨ |
| ೩ | ಗಾರೆಕೆಲಸ | ೭೫ | ೫೨ | ೬೬ | ೪೩ | ೩೮ | ೨೫ | ೧೮ | ೧೨ | ೧೨ | ೧೮ |
| ೪ | ಕಾರ್ಖಾನೆ | ೧೪೫ | ೬೮ | ೧೦೨ | ೭೨ | ೫೫ | ೩೩ | ೪೮ | ೨೯ | ೩೨ | ೧೯ |
| ೫ | ಸರ್ಕಾರಿ | ೨೩ | ೧೮ | ೧೫ | ೧೧ | ೧೦ | ೧೨ | ೬ | ೮ | ೩ | ೩ |
| ೬ | ಖಾಸಗಿ | ೩೨ | ೨೦ | ೨೮ | ೧೮ | ೧೨ | ೮ | ೮ | ೫ | ೬ | ೧೨ |
| ೭ | ಇತರೆ | ೩೬ | ೪೮ | ೨೨ | ೩೩ | ೧೮ | ೨೯ | ೧೫ | ೨೧ | ೧೨ | ೨೫ |
| | ಒಟ್ಟು | ೩೯೮ | ೨೯೬ | ೨೯೬ | ೨೨೬ | ೧೮೨ | ೧೪೫ | ೧೬೩ | ೧೨೮ | ೧೨೩ | ೧೩೫ |

ದಕ್ಷಿಣ ಕನ್ನಡ ಜಿಲ್ಲೆಯ ವ್ಯಾಪ್ತಿಯಲ್ಲಿನ ಮಂಗಳೂರು, ಬಂಟ್ವಾಳ, ಪುತ್ತೂರು, ಬೆಳ್ತಂಗಡಿ ಹಾಗೂ ಸುಳ್ಯ ತಾಲೂಕುವಾರು ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಕೊರಗರ ಗ್ರಾಮಪಂಚಾಯತ್‌ಗಳ ವಿವಿಧ ಕಸುಬುಗಳನ್ನು ನೋಡಲಾಗಿ ಕಂಡುಬಂದ ಅಂಶಗಳು ಈ ಕೆಳಗಿನಂತಿವೆ. ಕೃಷಿ, ಕೃಷಿಕೂಲಿ, ದಿನಗೂಲಿ, ಮನೆಕೆಲಸ, ವ್ಯಾಪಾರ,

ಸರ್ಕಾರಿ, ಖಾಸಗಿ ಮತ್ತು ಇತರೆ ವೃತ್ತಿಗಳು. ಒಟ್ಟಾರೆ ದಕ್ಷಿಣ ಕನ್ನಡ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ತಾಲೂಕಿನ ಕೊರಗ ಸಮುದಾಯದ ೯೩೫ ಕುಟುಂಬಗಳ ಲಿಂಗವಾರನ್ನು ಅವಲೋಕಿಸಲಾಗಿ ಒಟ್ಟಾರೆ ದಕ್ಷಿಣ ಕನ್ನಡ ಜಿಲ್ಲಾವಾರು ಪುರುಷರು ಶೇ. ೫೬.೦೮(೧೧೬೨)ರಷ್ಟು, ಮಹಿಳೆಯರು ಶೇ. ೪೩.೯೨(೯೩೦)ರಷ್ಟು ವಿವಿಧ ಬಗೆಬಗೆಯ ವೃತ್ತಿಗಳಲ್ಲಿ ತೊಡಗಿದ್ದಾರೆ.

**ಕೋಷ್ಟಕ ೨. ಸಮೀಕ್ಷೆಗೊಳಪಟ್ಟ ಉಡುಪಿ ಜಿಲ್ಲೆಯ ಕೊರಗ ಸಮುದಾಯದ ತಾಲೂಕುವಾರು ಮತ್ತು ಲಿಂಗವಾರು ಕಸುಬುಗಳು**

| ಕ್ರ ಸಂ. | ಕಸುಬುಗಳು | ಉಡುಪಿ | | | ಕಾರ್ಕಳ | | | ಕುಂದಾಪುರ | | |
|---|---|---|---|---|---|---|---|---|---|---|
| | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧ | ಕೃಷಿ | ೧೨ | ೮ | ೨೦ | ೮ | ೬ | ೧೪ | ೪ | ೪ | ೮ |
| ೨ | ಕೃಷಿಕೂಲಿ | ೩೮ | ೩೩ | ೭೧ | ೨೯ | ೨೬ | ೫೫ | ೨೦ | ೧೮ | ೩೮ |
| ೩ | ಗಾರೆಕೆಲಸ | ೫೮ | ೧೬ | ೭೪ | ೨೯ | ೧೯ | ೪೮ | ೩೨ | ೧೨ | ೪೪ |
| ೪ | ಕಾರ್ಖಾನೆ | ೭೨ | ೫೨ | ೧೨೪ | ೫೭ | ೪೨ | ೯೯ | ೪೮ | ೩೨ | ೮೦ |
| ೫ | ಸರ್ಕಾರಿ | ೧೬ | ೧೮ | ೩೪ | ೧೪ | ೯ | ೨೩ | ೮ | ೧೨ | ೨೦ |
| ೬ | ಖಾಸಗಿ | ೩೨ | ೧೯ | ೫೧ | ೨೮ | ೧೬ | ೪೪ | ೧೬ | ೧೩ | ೨೯ |
| ೭ | ಇತರೆ | ೪೪ | ೩೨ | ೭೬ | ೩೬ | ೨೫ | ೬೧ | ೨೯ | ೧೮ | ೪೭ |
| | **ಒಟ್ಟು** | **೨೭೨** | **೧೭೮** | **೪೫೦** | **೨೦೧** | **೧೪೩** | **೩೪೪** | **೧೫೭** | **೧೦೯** | **೨೬೬** |

ಉಡುಪಿ ಜಿಲ್ಲೆಯನ್ನೊಳಗೊಂಡಂತೆ ಉಡುಪಿ, ಕಾರ್ಕಳ, ಹಾಗೂ ಕುಂದಾಪುರ ತಾಲೂಕುವಾರು ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಕೊರಗರ ಗ್ರಾಮಪಂಚಾಯತ್‌ಗಳ ವಿವಿಧ ಕಸುಬುಗಳನ್ನು ನೋಡಲಾಗಿ ಕಂಡುಬಂದ ಅಂಶಗಳು ಈ ಕೆಳಗಿನಂತಿವೆ. ಕೃಷಿ, ಕೃಷಿಕೂಲಿ, ದಿನಗೂಲಿ, ಮನೆಕೆಲಸ, ವ್ಯಾಪಾರ, ಸರ್ಕಾರಿ, ಖಾಸಗಿ ಮತ್ತು ಇತರೆ ವೃತ್ತಿಗಳು. ಒಟ್ಟಾರೆ ಉಡುಪಿ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ತಾಲೂಕಿನ ಕೊರಗ ಸಮುದಾಯದ ೧೨೮೫ ಕುಟುಂಬಗಳ ಲಿಂಗವಾರನ್ನು ಅವಲೋಕಿಸಲಾಗಿ ಒಟ್ಟಾರೆ ಉಡುಪಿ ಜಿಲ್ಲಾವಾರು ಪುರುಷರು ಶೇ. ೫೯.೦೮(೬೩೦)ರಷ್ಟು, ಮಹಿಳೆಯರು ಶೇ. ೪೦.೯೨(೪೩೦)ರಷ್ಟು ವಿವಿಧ ಬಗೆಬಗೆಯ ವೃತ್ತಿಗಳಲ್ಲಿ ತೊಡಗಿದ್ದಾರೆ.

ಕೊರಗರಲ್ಲಿ ಸ್ತ್ರೀ ಮತ್ತು ಪುರುಷ ಇಬ್ಬರು ದುಡಿಯುತ್ತಾರೆ. ಇವರಲ್ಲಿ ಕುಟುಂಬ ನಿರ್ವಹಣೆಗೆ ಕಂಡುಕೊಂಡ ಪರ್ಯಾಯ ವ್ಯವಸ್ಥೆಗಳಲ್ಲಿ ಕೃಷಿ ಮುಖ್ಯವಾಗಿದೆ. ಬಹುತೇಕ

ಎಲ್ಲಾ ಬುಡಕಟ್ಟುಗಳು ಕಾಡಿನ ಉತ್ಪನ್ನಗಳನ್ನು ಅವಲಂಬಿಸಿ ಬದುಕುತ್ತಿದ್ದರು. ಮುಖ್ಯವಾಗಿ ಅರಣ್ಯವನ್ನು ಆಶ್ರಯಿಸಿದ್ದರು. ನಂತರದಲ್ಲಿ ಕೃಷಿಯನ್ನು ರೂಢಿಸಿಕೊಂಡು ಆಹಾರ ಉತ್ಪಾದನೆಯಲ್ಲಿ ತೊಡಗಿಸಿಕೊಂಡರು. ಇವರಲ್ಲಿ ಕೃಷಿಗೆ ಬೇಕಾದಷ್ಟು ಭೂಮಿಯಿಲ್ಲದೆ ಇದ್ದರೂ ಭೂಮಾಲೀಕರಿಂದ ಭೂಮಿಯಲ್ಲಿ ಜೀತದಳಾಗಿ ದುಡಿಯುವುದು ಹಾಗೂ ಒಂದು ನಿರ್ದಿಷ್ಟ ಅವಧಿಯಲ್ಲಿ ಮಳೆಯಾಶ್ರಿತ ಬೇಸಾಯ ಮಾಡುತ್ತಾರೆ. ಕೊರಗ ಸಮುದಾಯದ ಕುಟುಂಬದಲ್ಲಿನ ಆರ್ಥಿಕ ವ್ಯವಸ್ಥೆಯಲ್ಲಿ ಮಹಿಳೆಯರ ಪಾತ್ರವು ಪ್ರಧಾನವಾಗಿದೆ. ಇವರು ದುಡಿಮೆಯಲ್ಲಿ ಪುರುಷರಿಗಿಂತ ಕಡಿಮೆಯಿಲ್ಲ; ಇವರ ಗಟ್ಟಿಮುಟ್ಟಾದ ಮೈಕಟ್ಟು ದುಡಿಮೆಗೆ ಸಹಾಯಕವಾಗಿದೆ. ಋತುಮಾನಗಳಿಗೆ ತಕ್ಕಂತೆ ದುಡಿಯುತ್ತ ಮಕ್ಕಳ ಪಾಲನೆ, ಪೋಷಣೆ, ಕುಟುಂಬ ನಿರ್ವಹಣೆ ಜೊತೆಗೆ ವ್ಯವಸಾಯದಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡಿರುತ್ತಾರೆ. ಕೃಷಿ ಕ್ಷೇತ್ರದ ಬೆನ್ನೆಲುಬು ಮಹಿಳೆ; ಪುರುಷನಿಗಿಂತ ಹೆಚ್ಚು ದುಡಿಯುತ್ತಾಳೆ. ಇವರ ವ್ಯವಸಾಯದಲ್ಲಿ ಜೀವನ ನಿರ್ವಹಣೆಗೆ ಬೇಕಾದ ಆಹಾರ ಬೆಳೆಗಳನ್ನು ಮಾತ್ರ ಬೆಳೆಯುತ್ತಾರೆಯೇ ಹೊರತು ಮತ್ಯಾವುದೇ ವಾಣಿಜ್ಯ ಬೆಳೆಗಳನ್ನು ಬೆಳೆಯದೆ ಇರುವುದು ಕ್ಷೇತ್ರಾಧ್ಯಾಯನದಲ್ಲಿ ಕಾಣಸಿಗುತ್ತದೆ.

ಕೊರಗರು ತಾವು ತಯಾರಿಸುವ ಕಲ್ಮಾತಕವಾಗಿರುವ ಪರಿಕರಗಳನ್ನು ತಯಾರಿಸಲು ಆರು ರೀತಿಯ ಕಚ್ಚಾವಸ್ತುಗಳನ್ನು ಬಳಸಿಕೊಳ್ಳುತ್ತಾರೆ. ಪ್ರತಿಯೊಂದು ಪರಿಕರಗಳನ್ನು ಒಂದೇ ಜಾತಿಯ ಕಚ್ಚಾವಸ್ತುವಿನಿಂದ ತಯಾರಿಸಲು ಸಾಧ್ಯವಿಲ್ಲ. ಪರಿಕರಗಳ ಗಟ್ಟಿತನ, ಮೆದು, ಗಾತ್ರ ಮತ್ತು ಬಳಕೆಯಾಗುವ ಬಗೆಗಳನ್ನು ಪರಿಗಣಿಸಿ ಕಚ್ಚಾವಸ್ತುಗಳನ್ನು ಬಳಸಿಕೊಳ್ಳಬೇಕಾಗುತ್ತದೆ.

೧. **ಪರಿಕರಗಳನ್ನು ತಯಾರಿಸಲು ಬೇಕಾದ ಬಿಳಲುಗಳು(ಬಳ್ಳಿಗಳು):** ಬಿಳಲುಗಳನ್ನು ಗಮನಿಸಿದರೆ ಮಾದೇರಿ, ಇಲ್ಲ್‌ಬೂರು, ಬಂಧದಬೂರು, ರಂಜೇರ್(ಎಂಜೀರ್), ಚೆನ್ನೆರೆ, ಕೊಟ್ಟೆ ಮುಳ್ಳ್, ಬೋಳ್ಪಾಲೆ, ನೊಕ್ಕಟ್ಟೆ(ನೋಕಟೆ) ಪೇರ್‌ಬೂರು(ಕುಲಬೂರು), ಅರ್ಕೆಬೂರು, ಕೊಜೆಂಬೆ, ಆಚಾರಿ ಬೂರು, ಎಲಿಬೂರು, ಕರಿಯ ಮಾದೇರಿ, ಏಕನಾಕದ ಬೂರು ಹೀಗೆ ಅನೇಕ ಬಿಳಲುಗಳನ್ನು ಕೊರಗರು ಉಪಯೋಗಿಸುತ್ತಾರೆ. ಮೇಲೆ ಹೆಸರಿಸಿದ ಬಳ್ಳಿಗಳ(ಬಿಳಲು) ಹೆಸರು ತುಳು ಭಾಷೆಯಲ್ಲಿದೆ. ಪ್ರಾಕೃತಿಕವಾಗಿ ದೊರೆಯುವ ಬಿಳಲುಗಳನ್ನು ಉಪಯೋಗಿಸಿಕೊಂಡು ಕೊರಗರು ವಿವಿಧ ವಿನ್ಯಾಸಗಳ ಪರಿಕರಗಳನ್ನು ತಯಾರಿಸುತ್ತಾರೆ.

೨. **ಉತ್ಪನ್ನಗಳನ್ನು ತಯಾರಿಸಲು ಬೇಕಾಗುವ ಗಿಡಗಳು:** ನೆಡಿಲ್, ಸಾರೋಳಿ(ಸರೋಳಿ), ನಾದೇಲ್, ನಾನಿಲ್, ಲೆಕ್ಕಿ ಮತ್ತು ಕೆಲೆಂಜಿ ಗಿಡಗಳನ್ನು ಬಳಸಿಕೊಂಡು ಕೊರಗರು ವಿವಿಧ ರೀತಿಯ ಉತ್ಪನ್ನಗಳನ್ನು ತಯಾರಿಸುತ್ತಾರೆ.

೩. **ಕಚ್ಚಾವಸ್ತುವಾಗಿ ಉಪಯೋಗಿಸುವ ಮರದ ಭಾಗಗಳು:** ಆಲದ ಮರದ ಜಂತಿ(ಮೇಲಿರುವ ಬೇರು), ಸುರುಳಿ ಮರದ ಬೇರು, ಪಣೋಳಿ ಮರದ ಎಲೆ, ತಾಳೆ ಮರದ ದಿಂಡು, ಬೈನೆ ಮರದ ಚೌರಿ, ಮುಂಡೇಲ್ ಗಿಡದ ಬೇರು ಇತ್ಯಾದಿಗಳನ್ನು ಕೊರಗರು ಬಳಸಿಕೊಂಡು ಕಲಾತ್ಮಕವಾದ ಪರಿಕರಗಳನ್ನು ತಯಾರಿಸುತ್ತಾರೆ.

೪. **ಬೆತ್ತ:** ಪಂಜಿ ಬೆತ್ತ, ನಾಗಬೆತ್ತ ಮತ್ತು ಸುರುಳಿ ಬೆತ್ತಗಳನ್ನು ಬಳಸುತ್ತಾರೆ.

೫. **ಬಿದಿರು:** ಬಿದಿರು, ಸೀಮೆಬಿದಿರು, ಓಣಿ (ಸಣ್ಣಗಾತ್ರದ ಬಿದಿರು)

೬. **ನಾರುಗಳು:** ತೆಂಗಿನ ಕಾಯಿ ಸಿಪ್ಪೆಯ ನಾರು, ದಡ್ಪಾಲ್ ಕತ್ತಾಳೆ ನಾರು ಮತ್ತು ಎಕ್ಕಮಾಲೆ ಗಿಡದ ನಾರುಗಳನ್ನು ಬಳಸಿಕೊಳ್ಳುತ್ತಾರೆ.

ದಿನನಿತ್ಯದ ಕೆಲಸ ಕಾರ್ಯಗಳಲ್ಲಿ ಪ್ರತಿಯೊಂದು ಪರಿಕರಗಳು ಸಸ್ಯಮೂಲಗಳಿಂದಲೇ ತಯಾರಿಸಿದವುಗಳಾಗಿದ್ದ ಕಾಲವೊಂದಿತ್ತು. ಯಾವುದೇ ರೀತಿಯ ಪ್ಲಾಸ್ಟಿಕ್, ಫೈಬರ್, ಸ್ಟೀಲ್ ಪರಿಕರಗಳಿರಲಿಲ್ಲ. ಬಡ ಮತ್ತು ಮಧ್ಯಮ ವರ್ಗದ ಜನರಿಗೆ ಸ್ಟೀಲ್ ಪಾತ್ರೆ ಪರಿಕರಗಳು ಗಗನಕುಸುಮವಾಗಿದ್ದ ಕಾಲದಲ್ಲಿ ಕೊರಗರು ತಯಾರಿಸುತ್ತಿದ್ದ ಸಸ್ಯಮೂಲ ಅಥವಾ ಪ್ರಕೃತಿ ಮೂಲ ಉತ್ಪನ್ನಗಳಿಗೆ ಬೇಡಿಕೆಯಿತ್ತು. ಆಹಾರ ತಯಾರಿಕೆಯ ಸಂದರ್ಭಗಳಿಂದ ಹಿಡಿದು ಆರಾಧನೆ-ಸಂಪ್ರದಾಯ ಮತ್ತು ಕೃಷಿ ಕೆಲಸಕಾರ್ಯಗಳ ಸಂದರ್ಭಗಳಲ್ಲೂ ಕೊರಗರು ತಯಾರಿಸಿದ ಉತ್ಪನ್ನಗಳು ಬಳಕೆಯಾಗುತ್ತಿದ್ದವು. ಪರಿಸರ ಪೂರಕ, ಪರಿಸರ ಪೋಷಕವಾದ ಉತ್ಪನ್ನಗಳನ್ನು ದೂರೀಕರಿಸಿ ಪರಿಸರ ಮಾರಕವಾದಂತಹ ಪರಿಕರಗಳನ್ನು ಉಪಯೋಗಿಸುತ್ತಿರುವುದೇ ನಮ್ಮ ಅಭಿವೃದ್ಧಿ ಎಂದು ಕುರುಡರಾಗಿ ನಂಬಿದ್ದೇವೆ. ನಂಬುತ್ತಿದ್ದೇವೆ. ಬಹುತೇಕ ಸಮುದಾಯಗಳ ಮಧ್ಯೆ ಕೊಡು-ಕೊಳ್ಳುವಿಕೆಯ ಮೂಲಕ ಒಂದು ರೀತಿಯ ಅವಿನಾಭಾವ ಸಂಬಂಧಗಳಿದ್ದುದನ್ನು ನಾವು ಗಮನಿಸಬೇಕು. ಕುಂಬಾರನ ಮಣ್ಣಿನ ಮಡಕೆ ಗಡಿಗೆಗಳು ಆಹಾರ ಬೇಯಿಸಲು, ಇತರೆ ವಸ್ತುಗಳನ್ನು, ನೀರನ್ನು ಸಂಗ್ರಹಿಸಿಡಲು ಅತ್ಯಗತ್ಯವಾಗಿದ್ದವು. ಕಮ್ಮಾರನ ಮೂಲಕ ಬಂದಿರುವ ಪರಿಕರಗಳಿಂದ ಉಳುಮೆ ಇನ್ನಿತರೆ ಕೃಷಿಸಂಬಂಧಿ ಕೆಲಸಕಾರ್ಯಗಳು ಸುಗಮವಾಗಿ ನಡೆಯುತ್ತಿತ್ತು. ಕೊರಗರ ಉತ್ಪನ್ನಗಳ ಬಗ್ಗೆ ಈಗಾಗಲೇ ನಿರೂಪಿಸಲಾಗಿದೆ. ಹೀಗೆ ಬಹುತೇಕ

ಸಮುದಾಯಗಳ ಮಧ್ಯೆ ಒಂದು ಚಕ್ರ ತಿರುಗಿದಂತೆ ಅವಲಂಬಿತರಾಗಿದ್ದರು. ಇದು ಕೊಡು–ಕೊಳ್ಳುವಿಕೆಗೆ ಅಥವಾ ವ್ಯವಹಾರಗಳಿಗೆ ಸೀಮಿತವಾಗಿರಲಿಲ್ಲ ಎಂಬುದು ಗಮನಿಸಬೇಕಾದ ವಿಚಾರ.

ಕೊರಗರು ತಯಾರಿಸುತ್ತಿದ್ದ ವಿವಿಧ ಕರಕುಶಲ ಕಲಾತ್ಮಕ ಉತ್ಪನ್ನಗಳ ಬಗ್ಗೆ ತಿಳಿಯೋಣ–

೧. **ಮೊರ/ಗೆರಸೆ (ತುಳು: ತಡ್ಪೆ):** ಅಕ್ಕಿ, ಬೇಳೆಕಾಳುಗಳನ್ನು ಹೊಟ್ಟಿನಿಂದ ಮತ್ತು ಕಸಕಡ್ಡಿಗಳಿಂದ ಬೇರ್ಪಡಿಸಲು ಬಲಸುವ ಸಾಧನ ಮೊರ. ಕರಾವಳಿ ಪ್ರದೇಶದ ಮೊರಕ್ಕೂ ಕರ್ನಾಟಕದ ಇತರೆ ಪ್ರದೇಶಗಳ ಮೊರಕ್ಕೂ ವ್ಯತ್ಯಾಸವಿದೆ. ಕೊರಗರು ತಯಾರಿಸುವ ಮೊರ ದೊಡ್ಡ ಗಾತ್ರದಲ್ಲಿರುತ್ತವೆ. ರೆಂಜಿರ್(ಎಂಜಿರ್), ನೆಡಿಲ್ ಮತ್ತು ಲೆಂಕಿರಿ ಬಿಳಲುಗಳಿಂದ ತಯಾರಿಸಲಾಗುವ ಮೊರ ಅತ್ಯಂತ ಪಾವಿತ್ರ್ಯತೆಯ ವಸ್ತುವೆಂದು ಹೆಸರು ಪಡೆದಿದೆ. ಕೊರಗರು ತಯಾರಿಸಿದ ಈ ಮೊರಕ್ಕೆ ಸೆಗಣಿ ಸಾರಿಸಿ ಜೋಪಾನವಾಗಿ ಉಪಯೋಗಿಸಿದರೆ ನೂರಾರು ವರ್ಷ ಬಾಳಿಕೆ ಬರುತ್ತದೆ. ತುಳು ಸಂಸ್ಕೃತಿಯ ಬಹುತೇಕ ಸಂಪ್ರದಾಯಾಚರಣೆಗಳಲ್ಲಿ ಮೊರಕ್ಕೆ ಅತ್ಯುನ್ನತ ಸ್ಥಾನಮಾನದಿಂದಲೇ ಅನೇಕ ವಿಧಿ–ನಿಷೇಧ–ನಂಬಿಕೆಗಳು ಹುಟ್ಟಿಕೊಂಡಿವೆ. ಮೊರವನ್ನು ದಾಟಬಾರದು, ಕಾಲಿನಿಂದ ತುಳಿಯಬಾರದು ಇನ್ನಿತರ ನಂಬಿಕೆ ನಿಷೇಧಗಳು ಚಾಲ್ತಿಯಲ್ಲಿವೆ. ಕೊರಗರಲ್ಲಿಯೂ ಅತ್ಯಂತ ನಿಪುಣ, ಪರಿಣತಿ ಹೊಂದಿರುವವರು ಮಾತ್ರ ಈ ಗೆರೆಸೆಯನ್ನು ರಚಿಸಲು ಸಾಧ್ಯ. ಎಲ್ಲರಿಗೂ ಬಿಳಲುಗಳನ್ನು ಉಪಯೋಗಿಸಿಕೊಂಡು ಹೆಣೆಯಲು ಕಷ್ಟಸಾಧ್ಯ.

೨. **ತೊಟ್ಟಿಲು:** ಪ್ರತಿಯೊಂದು ಮಗುವಿನ ಬೆಳವಣಿಗೆಯಲ್ಲಿ ತೊಟ್ಟಿಲಿನ ಪಾತ್ರ ಅತ್ಯಂತ ಪ್ರಮುಖವಾದದು. ಜಾತಿ–ಮತ–ಧರ್ಮಗಳ ಭೇದವಿಲ್ಲದೆ ತೊಟ್ಟಿಲು ಬೇಕೇಬೇಕು. ತೊಟ್ಟಿಲಲ್ಲಿ ಮಲಗಿ ನಿದ್ದೆ, ವಿಶ್ರಾಂತಿ ಮಾಡದ ಮಕ್ಕಳಿಲ್ಲ. ಕೊರಗರು ಅನಾದಿಕಾಲದಿಂದಲೂ ಕಾಡಿನ ವಿವಿಧ ಕಚ್ಚಾವಸ್ತುಗಳನ್ನು ಬಳಸಿಕೊಂಡು ತೊಟ್ಟಿಲು ತಯಾರಿಸುತ್ತಾ ಬಂದಿದ್ದಾರೆ. ಸೀಮೆಕೋಲು, ಬೆತ್ತ, ನೆಡಿಲು, ಚೆನ್ನೆರೆ ಮತ್ತು ಕುಸಬದ ಬಿಳಲುಗಳಿಂದ ತೊಟ್ಟಿಲು ತಯಾರಿಸುತ್ತಾರೆ. ಬಂಟ್ವಾಳ ಪಚ್ಚಿನಡ್ಕ ಮಾಂಕು ಅವರ ತೊಟ್ಟಿಲು ತಯಾರಿಸುವ ವಿಚಾರದ ಅಭಿಪ್ರಾಯವನ್ನು ಗುಣಪಾಲ ಶೆಟ್ಟಿಯವರು ಉಲ್ಲೇಖಿಸಿದ್ದಾರೆ(ಪು. ೧೩೭, ೨೦೧೩). ತೊಟ್ಟಿಲು ಹೆಣೆಯಲು ಆರಂಭಿಸಿ ಒಂದೇ ದಿನದಲ್ಲಿ ಮುಗಿಸಬೇಕು. ತೊಟ್ಟಿಲ್ನ ನಾಲ್ಕು ಮೂಲೆಗಳಿಗೆ ಕಾಸರಕ ಮರದ ತುಂಡುಗಳನ್ನು ಆಧಾರವಾಗಿ ಜೋಡಿಸಬೇಕು.

ಯಾವುದೇ ಬಿಳಲಿನಿಂದ ತೊಟ್ಟಿಲು ತಯಾರಿಸಿದರೂ ಚೆನ್ನೆರೆ ಬಳ್ಳಿಯ ಒಂದು ತುಂಡನ್ನಾದರೂ ಬಳಸಬೇಕು. ಈ ರೀತಿಯಾದ ನಿಯಮ-ನಿಷೇಧಗಳನ್ನು ಪಾಲಿಸಿಕೊಂಡು ನಿಯಮಬದ್ಧವಾಗಿ ತಯಾರಿಸಿದ ತೊಟ್ಟಿಲಲ್ಲಿ ಮಗುವಿಗೆ ಯಾವುದೇ ರೀತಿಯ ತಾಪತ್ರಯ-ತೊಂದರೆಗಳು ಉಂಟಾಗಲಾರದು ಎಂಬುದು ನಂಬಿಕೆ.

ಇಂದಿನ ದಿನಮಾನಗಳಲ್ಲಿ ಮಾರುಕಟ್ಟೆಯಲ್ಲಿ ದೊರಕುವ ಕಬ್ಬಿಣದ ಮತ್ತು ಅಲ್ಯುಮಿನಿಯಂ ಲೋಹಗಳಿಂದ ತಯಾರಿಸಿದ ತೊಟ್ಟಿಲುಗಳು ನೋಡುವುದಕ್ಕೆ ಸುಂದರವಾಗಿ ಕಾಣುತ್ತವೆ. ಆದರೆ ಆರೋಗ್ಯದ ದೃಷ್ಟಿಯಿಂದ ಕಾಡಿನ ಉತ್ಪನ್ನಗಳಿಂದ ತಯಾರಿಸಿದ ತೊಟ್ಟಿಲಿಗೆ ಸರಿಸಾಟಿಯಾಗಲಾರದು ಎಂಬುದು ಅನುಭವಸ್ಥರ ಅಭಿಪ್ರಾಯ. ಒಂದು ಕುಟುಂಬದ ಅನೇಕ ತಲೆಮಾರುಗಳ ಮಕ್ಕಳ ಬೆಳವಣಿಗೆಯನ್ನು ಕಂಡ ತೊಟ್ಟಿಲುಗಳನ್ನು ಕರಾವಳಿ ಕರ್ನಾಟಕದ ನೂರಾರು ಮನೆತನಗಳಲ್ಲಿ ಇಂದಿಗೂ ಕಾಣಲು ಸಿಗುತ್ತವೆ.

೩. **ಕುರುವೆ:** ಸಣ್ಣ ಗಾತ್ರದ ಕುಕ್ಕೆಗಳನ್ನು ತುಳು ಭಾಷೆಯಲ್ಲಿ ಕುರುವೆ ಅಥವಾ ಕುರ್ವೆ ಎಂದು ಕರೆಯಲಾಗುತ್ತದೆ. ಇದರಲ್ಲಿ ಬೇರೆ ಬೇರೆ ಅಳತೆಗಳಿಗೆ ಸಂಬಂಧಿಸಿದಂತೆ ಬೇರೆ ಬೇರೆ ಹೆಸರಿನ ವಿವಿಧ ವಿನ್ಯಾಸಗಳ ಕುರುವೆಗಳನ್ನು ವಿವಿಧ ಬಿಳಲುಗಳಿಂದ ಕೊರಗರು ತಯಾರಿಸುತ್ತಾರೆ.

೪. **ಕುಕ್ಕೆ(ಕಾಂಟ್ಯ, ಪುಡಾಯಿ):** ಅನ್ನ ಬಸಿಯಲು, ಕೃಷಿ ಕೆಲಸಕ್ಕೆ, ಗೇರುಬೀಜ ಕಾರ್ಖಾನೆ ಮತ್ತು ಸಣ್ಣಪುಟ್ಟ ವ್ಯಾಪಾರಿಗಳು ತಮ್ಮ ಸಾಮಾನು ಸರಂಜಾಮುಗಳನ್ನು ಹೊತ್ತುಕೊಂಡು ಹೋಗಲು ಈ ಕುಕ್ಕೆಗಳನ್ನು ಉಪಯೋಗಿಸುತ್ತಾರೆ. ಮೀನು ವ್ಯಾಪಾರಸ್ಥರೂ ಕುಕ್ಕೆಗಳನ್ನು ಹೆಚ್ಚಾಗಿ ಬಳಸುತ್ತಾರೆ.

೫. **ಪೆಟ್ಟಿಗೆಗಳು:** ಕೊರಗರು ಅತ್ಯಂತ ಶ್ರಮವಹಿಸಿ ಕಾಡುಗಳಲ್ಲಿ ಅಲೆದಾಡಿ ಗಟ್ಟಿಮುಟ್ಟಾದ ಕಚ್ಚಾವಸ್ತುಗಳನ್ನು ಹುಡುಕಿ ತಂದು ಕಲಾತ್ಮಕವಾಗಿ ಅನೇಕ ಪೆಟ್ಟಿಗೆಗಳನ್ನು ರಚಿಸುತ್ತಿದ್ದರು. ಪೆಟ್ಟಿಗೆಗಳನ್ನು ಹಿಡಿಯಲು ಕೈಹಿಡಿ, ಕೀಲಿ ಹಾಕಲು ಬೇಕಾದ ವ್ಯವಸ್ಥೆಗಳನ್ನೂ ಅಳವಡಿಸಿರುವುದು ಕೊರಗ ಬುದ್ಧಿವಂತಿಕೆಯನ್ನು, ಕಲಾನೈಪುಣ್ಯತೆಯನ್ನು ತೋರಿಸುತ್ತದೆ. ಯಕ್ಷಗಾನದ ವೇಷಧಾರಿಗಳ ಸಲಕರಣೆಗಳನ್ನು ಹಾಕಿಡುವ ಪೆಟ್ಟಿಗೆಗಳು, ಅಕ್ಕಿ ಹಾಕಿಡುವ ಪೆಟ್ಟಿಗೆ, ಅಡುಗೆಯ ದವಸ ಧಾನ್ಯಗಳನ್ನು ಹಾಕಿಡುವ ಪೆಟ್ಟಿಗೆಗಳು ಹೀಗೆ ನಾನಾ ರೀತಿಯ, ನಾನಾ ಗಾತ್ರದ ಪೆಟ್ಟಿಗೆಗಳನ್ನು ಕೊರಗರು ತಯಾರಿಸುತ್ತಿದ್ದರು.

**೬. ಕದಿಕೆ:** ಸೀಮೆಕೋಲು, ಬೆತ್ತ ಇತ್ಯಾದಿ ಬಿಳಲು-ಬಳ್ಳಿಗಳನ್ನು ಉಪಯೋಗಿಸಿಕೊಂಡು ಕೊರಗರು ಕದಿಕೆಗಳನ್ನು ನಿರ್ಮಿಸುತ್ತಿದ್ದರು. ಬಹುತೇಕ ಮನೆಗಳಲ್ಲಿ ಭತ್ತವನ್ನು ಸುರಕ್ಷಿತವಾಗಿ ರಕ್ಷಿಸಿಡಲು ಕದಿಕೆಗಳನ್ನು ಬಳಸುತ್ತಿದ್ದರು. ಮನೆಯ ಜಗಲಿಯಲ್ಲಿ ಅಥವಾ ಕೋಣೆಯ ಮೂಲೆಯೊಂದರಲ್ಲಿ ಕದಿಕೆಯನ್ನಿಟ್ಟು ಸುತ್ತಲೂ ಸ್ವಲ್ಪ ಮಣ್ಣಿಟ್ಟು ಸೆಗಣಿ ಸಾರಿಸುತ್ತಾರೆ. ಇದಕ್ಕೆ ಯಾವುದೇ ರೀತಿಯ ಕ್ರಿಮಿ ಕೀಟಗಳು ಬರದೆ ಭತ್ತ ಸುರಕ್ಷಿತವಾಗಿರುತ್ತಿತ್ತು.

**೭. ಕಳಸೆ:** ಬೆತ್ತ, ಸೀಮೆಕೋಲು ಮತ್ತು ಬಿಳಲುಗಳಿಂದ ತಯಾರಿಸಿದ ಭತ್ತವನ್ನು ಅಳೆಯುವ ಸಾಧನವನ್ನು ಕಳಸೆ ಎನ್ನುತ್ತಾರೆ. ಒಂದು ಕಳಸೆಯಲ್ಲಿ ೧೪ ಸೇರು ಭತ್ತ ತುಂಬಿಸಲಾಗುತ್ತಿತ್ತು. ಗೋಲಾಕಾರದ ಕಳಸೆಯನ್ನು ಕೊರಗರು ಶ್ರಮವಹಿಸಿ ಹೆಣೆಯುತ್ತಾರೆ. ಇತ್ತೀಚೆಗೆ ಕಳಸೆ ಕಾಣದಾಗಿದೆ.

**೮. ಅಡಿಕೆ ಆರಿಸುವ ಕುರ್ವೆ:** ಬಿಳಲು ಅಥವಾ ಬೆತ್ತವನ್ನು ಬಳಸಿಕೊಂಡು ತಯಾರಿಸಿದ ಕುರ್ವೆಯನ್ನು ಅಡಿಕೆ ತೋಟಗಳಲ್ಲಿ ಅಡಿಕೆ ಆರಿಸಲು(ಹೆಕ್ಕಿ ಹಾಕಿಕೊಳ್ಳಲು) ಬಳಸುತ್ತಾರೆ.

**೯. ಮಕ್ಕೇರಿ:** ಕೆಸರು ಇರುವ ನೀರಿನಲ್ಲಿ ಮೀನುಗಳನ್ನು ಹಿಡಿಯಲು ಮಕ್ಕೇರಿ ಎಂಬ ಸಾಧನವನ್ನು ಬಳಸಲಾಗುತ್ತದೆ. ಮಕ್ಕೇರಿಯನ್ನು ಕೊರಗರು ಹೆಣೆಯುತ್ತಿದ್ದರು.

**೧೦. ಕುತ್ತರಿ(ಕೂಂಟಾಯಿ):** ಕೋಳಿಗಳನ್ನು, ಕೋಳಿಮರಿಗಳನ್ನು ಕೂಡಿಡುವ, ರಕ್ಷಿಸಲು ದೊಡ್ಡ ಗಾತ್ರದ ಬುಟ್ಟಿ, ಬುಟ್ಟಿಯನ್ನು ಕವುಚಿ ಹಾಕಿ ಭಾರವಾದ ವಸ್ತುವೊಂದನ್ನು ಅದರ ಮೇಲಿಟ್ಟರೆ ಒಳಗಿರುವ ಕೋಳಿ-ಕೋಳಿಮರಿಗಳು ಗಿಡುಗ-ಕಾಗೆಗಳಿಂದ ಸುರಕ್ಷಿತವಾಗಿರುತ್ತವೆ. ಕೊರಗರು ಕುತ್ತರಿಯನ್ನು ಮಾದೇರ್ ಬಳ್ಳಿಯಿಂದ ತಯಾರಿಸುತ್ತಿದ್ದರು.

**೧೧. ಕೂರಿ:** ಅತ್ಯಂತ ನಾಜೂಕಿನಿಂದ ತಯಾರಿಸುವ ಕೂರಿಯ ಸಹಾಯದಿಂದ ಮೀನು ಹೀಡಿಯಬಹುದು. ಹರಿಯುವ ನೀರಿಗೆ ಕೂರಿ ಹಿಡಿದು ಮೀನುಗಳನ್ನು ಹಿಡಿಯಲಾಗುತ್ತಿತ್ತು.

ಹೀಗೆ ನಾನಾ ರೀತಿಯ ಉತ್ಪನ್ನಗಳನ್ನು ಅನಾದಿಕಾಲದಿಂದಲೂ ಕೊರಗರು ನಿರ್ಮಿಸಿ ಮಾರಾಟ ಮಾಡಿ ತಮ್ಮ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದರು. ಈ ಮೊದಲು ಪ್ರಸ್ತಾಪಿಸಿದಂತೆ ಬದಲಾದ ಕಾಲಘಟ್ಟದಲ್ಲಿ ಪ್ಲಾಸ್ಟಿಕ್, ಫೈಬರ್, ಅಲ್ಯುಮಿನಿಯಂ, ಸ್ಟೀಲ್ ಇನ್ನಿತರ ಲೋಹಗಳ ಪರಿಕರಗಳು, ಸಾಮಗ್ರಿಗಳು ಮಾರುಕಟ್ಟೆಯನ್ನು ಪ್ರವೇಶಿಸಿರುವುದರಿಂದ ಕೊರಗರ ಸಾಮಗ್ರಿಗಳಿಗೆ ಬೇಡಿಕೆ ಇಲ್ಲದಂತಾಯಿತು. ಸಿಕ್ಕಿದುದರಲ್ಲಿ ಸಂತೃಪ್ತಿಪಟ್ಟುಕೊಂಡು,

ಕೂಡಿಡುವ ಜಾಯಮಾನಕ್ಕೆ ಒಗ್ಗದ ಕೊರಗರಿಗೆ ಕ್ರಮೇಣ ಇತರೆ ಉದ್ಯೋಗಗಳನ್ನು ಆರಿಸಿಕೊಂಡು ಹೋಗುವ ಅನಿವಾರ್ಯತೆ ಯುಂಟಾಯಿತು. ಜಾಗತೀಕರಣದ, ಖಾಸಗೀಕರಣದ ಪರಿಣಾಮದಿಂದಾಗಿ ಕೊರಗರ ಉತ್ಪನ್ನಗಳಿಗೆ ಬೇಡಿಕೆ ಕುಸಿಯಿತು. ಪಾರಂಪರಿಕ ಕುಲಕಸುಬು ಬಿಟ್ಟರೆ ಯಾವ ಕೆಲಸ ಕಾರ್ಯಗಳನ್ನು ತಿಳಿಯದ ಕೊರಗರಿಗೆ ಯಾರೂ, ಯಾವ ಸರ್ಕಾರವೂ ಸಹಾಯ ಮಾಡಲಿಲ್ಲ. ತಮ್ಮ ಪಾಡಿಗೆ ಸ್ವಚ್ಛಂದ ಬದುಕನ್ನು ಬಾಳಿದ ಕೊರಗರಿಗೆ ಕಾಡುಗಳನ್ನು ನಾಶ ಮಾಡಿದ ನಂತರ ದಿಕ್ಕಿಲ್ಲದಂತಾಯಿತು. ಕೊಗರು, ಒಂದೆಡೆ ಮೂಲ ಕುಲಕಸುಬಿಗೆ ಬೇಡಿಕೆ ಇಲ್ಲದೆ, ಮತ್ತೊಂದೆಡೆಗೆ ತಮ್ಮ ಮೂಲ ನೆಲೆಯನ್ನು ಕಸಿದುಕೊಂಡ ಅರಣ್ಯ ಇಲಾಖೆ ಮತ್ತು ಬಲಾಢ್ಯರ ಕುತಂತ್ರ, ಕುಟಿಲತೆಯನ್ನು ಕೊರಗರು ಅರಿಯದಾದರು. ಕಾಲಕ್ಕೆ ತಕ್ಕಂತೆ ಕುಲಕಸುಬಿನಲ್ಲಿ ಉನ್ನತೀಕರಣವನ್ನು ಮಾಡಲಾಗದ ಕೊರಗರು ಹಿಂದುಳಿದರು.

ಬುಟ್ಟಿ ಹೆಣೆಯುವುದು ಕೊರಗರ ಪ್ರಮುಖವಾದ ಕಸುಬು. ಇದು ಒಂದು ಆರ್ಥಿಕ ಮೂಲಾಧಾರವಾಗಿದೆ. ಬುಟ್ಟಿಗಳನ್ನು ತಯಾರಿಸಲು ನುಕ್ಕಿ ಬೀಳು, ಕೂಳಿ ಬೀಳು, ಕಪ್ಪು ಕಾಯಿ ಬೀಳು, ಕುಸುಮನ ಬೀಳುಗಳನ್ನು ಬಳಸುತ್ತಾರೆ.

ಆದರೆ ಇಂದು ಹೆಚ್ಚಿನ ಕೊರಗರು ಮೂಲ ಕಸುಬಾದ ಬುಟ್ಟಿ ಹೆಣೆಯುವುದರ ಬಗ್ಗೆ ಅಷ್ಟೊಂದು ಆಸಕ್ತಿ ತೋರಿಸುತ್ತಿಲ್ಲ. ಏಕೆಂದರೆ ಅರಣ್ಯ ನಾಶದಿಂದ ಬಿಳಲುಗಳು ಸಿಗುವುದಿಲ್ಲ. ನಗರೀಕರಣ ಮತ್ತು ಕೈಗಾರೀಕರಣ ಅವರ ಕಸುಬಿಗೆ ಹಾನಿಯನ್ನುಂಟುಮಾಡಿದೆ. ಇಂದು ಗ್ರಾಮೀಣ ಭಾಗದಲ್ಲೂ ಕೂಡ ಬೇಲಿಗಳ ಬದಲಾಗಿ ಪಾಗಾರಗಳನ್ನು ಕಟ್ಟಿಕೊಳ್ಳುವುದು ಬೀಳುಗಳ ನಾಶಕ್ಕೆ ಕಾರಣವಾಗಿದೆ. ತೆಮಿಯ ಸಮಸ್ಯೆ ಇದೆ. ಇವರು ತಯಾರಿಸಿದ ಬುಟ್ಟಿಗಳಿಗೆ ೪೦ ರೂಪಾಯಿ ಮಾತ್ರ ನೀಡಲಾಗುತ್ತದೆ. ಆದರೆ ಅಂಗಡಿಯವರು ಈ ಬುಟ್ಟಿಗಳನ್ನು ತೆಗೆದುಕೊಂಡು ನೂರು ರೂಪಾಯಿಗಿಂತಲೂ ಹೆಚ್ಚಿನ ಹಣಕ್ಕೆ ಮಾರುತ್ತಾರೆ. ಹುರಿಹಗ್ಗದಿಂದ ೨೦೦ ರೂಪಾಯಿ ದೊರೆಯುತ್ತದೆ. ಆದ್ದರಿಂದ ಕೊರಗರು ಬುಟ್ಟಿ ಹೆಣೆಯುವುದು, ಹುರಿ ಹಗ್ಗ ತಯಾರಿಸುವುದನ್ನು ಬಿಟ್ಟು ೬೦೦ ರೂಪಾಯಿಗಿಂತಲೂ ಹೆಚ್ಚು ಸಿಗುವ ಕೂಲಿ ಕೆಲಸ ಮಾಡುತ್ತಾರೆ.

ಮೂಲಭೂತವಾದ ಆಹಾರ ಪಡೆಯಲು ಸಹಾಯಕವಾದ ಕುಲಕಸುಬಿನ ಮೇಲೆ ಇತರೆ ಪ್ರಭಾವವುಂಟಾಯಿತೋ ಅಂದಿನಿಂದ ಕೊರಗರ ಅಸ್ತಿತ್ವವನ್ನೇ ಅಲುಗಾಡಿಸಿ ದಂತಾಯಿತು. ಉಳ್ಳವರು, ಶ್ರೀಮಂತರು ಕೊರಗರನ್ನು ಜೀತದಾಳುಗಳನ್ನಾಗಿಸಿಕೊಂಡು

ಮರೆದರು. ತಮ್ಮಂತೆಯೇ ಇವರು ಮನುಷ್ಯರು ಎಂದೆಣಿಸದೇ "ಕೀಳು ಜನ", "ಕೊಳಕು ಜನ", "ಕಪ್ಪು ಜನ" ಎಂದೆಲ್ಲ ಹೆಸರುಗಳನ್ನು ಕೊರಗರಿಗೆ ಆರೋಪಿಸಿದರು. ಶಿಕ್ಷಣವನ್ನು ಪಡೆಯದ ಕೊರಗರು ಒಂದು ರೀತಿಯ ಕೀಳರಿಮೆಯನ್ನು ಬೆಳೆಸಿಕೊಂಡರು. ಅಭಿವೃದ್ಧಿ ಮಂತ್ರದಿಂದ ತಮ್ಮ ಕಾಡು ನಾಶವಾದಾಗ, ತಮ್ಮ ಕುಲಕಸುಬುಗಳಿಗೆ ಬೇಡಿಕೆ ಕುಸಿದಾಗ ಪ್ರಶ್ನಿಸುವ ಧೈರ್ಯವನ್ನು ತೋರಿಸಲಾಗಲಿಲ್ಲ ಕೊರಗರಿಗೆ. ಯಂತ್ರಗಾರಿಕೆಯ ಜೀವನ ಶೈಲಿಯನ್ನು ಮೈಗೂಡಿಸಿಕೊಂಡ ಇತರೆ ಸಮುದಾಯದ ಮುಂದೆ ಕೊರಗರು ಮೂಲೆಗುಂಪಾಗಿರುವುದನ್ನು ಕಾಣಬಹುದು. ವಿವಿಧ ರೀತಿಯ ಲೋಹಗಳ ಪರಿಕರಗಳನ್ನು ಬಳಸಿಕೊಂಡು ತಮ್ಮ ಆರೋಗ್ಯವನ್ನು ತಾವೇ ಕೆಡಿಸಿಕೊಳ್ಳುವ ಬಗ್ಗೆ ಜನರಿಗೆ ತಡವಾಗಿ ಅರಿವಾಗಿದೆ. ಇತ್ತೀಚಿನ ದಿನಗಳಲ್ಲಿ ಪರಿಸರ ಪೂರಕ ಉತ್ಪನ್ನಗಳನ್ನು ಬಳಸಬೇಕೆನ್ನುವ ಕೂಗು ಎದ್ದಿದೆ. ಇದರಿಂದ ಮತ್ತೊಮ್ಮೆ ಕೊರಗರ ಕರಕುಶಲ ಕಲೆಗಳಿಗೆ ಬೇಡಿಕೆ ಬಂದಿರುವುದರಲ್ಲಿ ಸಂಶಯವಿಲ್ಲ. ಆದರೆ ಕಲಾನೈಪುಣ್ಯವನ್ನು ಮರೆತ ಕೊರಗರೆಷ್ಟೋ? ಬೆಳೆಸಿ, ಉಳಿಸಿಕೊಂಡ ಕೊರಗರೆಷ್ಟೋ?

ತಡವಾಗಿಯಾದರೂ ಪರಿಸರಪೂರಕವಾದ ಕೊರಗರ ಕಲಾಶ್ರೀಮಂತಿಕೆಗೆ ಪುನರುಜ್ಜೀವನ ಕೊಡುವ ಜವಾಬ್ದಾರಿ ನಮ್ಮದಾಗಬೇಕು, ನಮ್ಮ ಸಂಘ ಸಂಸ್ಥೆಗಳದ್ದಾಗಬೇಕು, ಮುಖ್ಯವಾಗಿ ನಮ್ಮನ್ನಾಳುವವರು ಕಣ್ಣು ತೆರೆಯಬೇಕಾಗಿದೆ. ಅತ್ಯಂತ ನಯನಾಜೂಕಿನ, ಶ್ರಮ ಸಹಿತ ಕೊರಗರ ಕರಕುಶಲ ಕಲೆಗಳನ್ನು ಅಂತಾರಾಷ್ಟ್ರೀಯ ಮಟ್ಟದಲ್ಲಿ ಗುರುತಿಸುವಂತಾಗಬೇಕು. ಪ್ರವಾಸೋದ್ಯಮದ ಮೂಲಕ ಕರಕುಶಲ ಪರಿಕರಗಳನ್ನು, ಉತ್ಪನ್ನಗಳನ್ನು ಪರಿಚಯಿಸಬೇಕು. ಅವುಗಳ ಹಿನ್ನೆಲೆಯಲ್ಲಿರುವ ಮಾನವೀಯ ಗುಣಗಳನ್ನು, ಆರೋಗ್ಯಕರ ದೂರದೃಷ್ಟಿಯನ್ನು ಮನಗಾಣುವಂತೆ ಮಾಡಿದರೆ ಕೊರಗರ ಜೀವನ ಉದ್ಧಾರವಾಗುತ್ತದೆ. ಅವರಿಗೆ ಆರ್ಥಿಕ ಶಕ್ತಿಯನ್ನು ನೀಡಿದಂತಾಗುತ್ತದೆ. ದಿಕ್ಕುದೆಸೆಯಿಲ್ಲದೆ, ಪರಿಣಾಮಕಾರಿಯಾಗಿಲ್ಲದ ಅರಣ್ಯ ಇಲಾಖೆಯ ನೀತಿ-ನಿಯಮಗಳನ್ನು ಪುನರ್‌ರೂಪಿಸಬೇಕು. ಸಾವಿರಾರು ವರ್ಷಗಳಿಂದ ಕಾಡುಗಳನ್ನು ರಕ್ಷಿಸಿಕೊಂಡು ಬಂದ ಬುಡಕಟ್ಟುಗಳಿಗೆ ಕಾಡಿನಲ್ಲಿ ಯಾವ ನಿರ್ಬಂಧವನ್ನು ವಿಧಿಸಬಾರದು. ಹಾಗೆಂದ ಮಾತ್ರಕ್ಕೆ ಬೇಟೆಯಾಡುವುದಕ್ಕೆ, ಗಿಡಮರಗಳನ್ನು ಕಡಿಯುವುದಕ್ಕೆ ಅವಕಾಶ ನೀಡಬೇಕೆಂದಲ್ಲ. ಅರಣ್ಯವನ್ನು, ಈಗಿರುವ ಅರಣ್ಯಗಳ ವಿಸ್ತೀರ್ಣವನ್ನು ಹೆಚ್ಚಿಸುವುದರ ಬಗೆಗೆ ಆಲೋಚನೆ ಮಾಡಬೇಕು. ಇಡೀ ಜಗತ್ತು ನಮಗಾಗಿ ಇದೆ; ಇಡೀ ಜಗತ್ತನ್ನೇ ನಾವು ತಂತ್ರಜ್ಞಾನದ ಮೂಲಕ ಬದಲು ಮಾಡಬಹುದು ಎಂಬ ದುರಾಸೆಯನ್ನು

ಬಿಡಬೇಕು. ನಮ್ಮ ಹಾಗೆಯೇ ಅಸಂಖ್ಯಾತ ಜೀವಿಗಳ ತವರು ಈ ಭೂಮಿ ಎಂಬುದನ್ನು ಮರೆಯಬಾರದು. ನೂರಾರು ಬುಡಕಟ್ಟುಗಳು ಈಗಲೂ ಜಗತ್ತಿನಾದ್ಯಂತ ದಟ್ಟ ಕಾಡುಗಳನ್ನು ತಮ್ಮ ನೆಲೆಯನ್ನಾಗಿಸಿ ಬದುಕುತ್ತಿದ್ದಾರೆ ಎಂಬುದನ್ನು ಅತ್ಯಂತ ಮಾನವೀಯ ನೆಲೆಯಲ್ಲಿ ಆಲೋಚಿಸಬೇಕು. ಇಲ್ಲದೇ ಹೋದರೆ ಒಂದೊಂದು ಸುನಾಮಿ, ಭೂಕಂಪ, ಅತೀವೃಷ್ಟಿ, ಅನಾವೃಷ್ಟಿಗಳು ಬಂದಾಗ ಅವುಗಳನ್ನು ತಡೆಯಲು ಯಾವ ತಂತ್ರಜ್ಞಾನದಿಂದಲೂ ಸಾಧ್ಯವಿಲ್ಲ. ಅದರ ಶಕ್ತಿಯುಕ್ತಿ ಈಗಾಗಲೇ ದೃಢಪಟ್ಟಿದೆ. ಅಂತೆಯೇ ಸಾಮಾನ್ಯರಲ್ಲ ಸಾಮಾನ್ಯರಾಗಿ ಜೀವಿಸುತ್ತಿರುವ ಕೊರಗರನ್ನು ಗೌರವಿಸಬೇಕು. ಈ ಭೂಮಿಯಲ್ಲಿ ನಮ್ಮಂತೆ ಅವರಿಗೂ ಜೀವಿಸುವ ಹಕ್ಕು ಇದೆ ಎಂಬುದನ್ನು ಮನಗಾಣಬೇಕು.

**೪.೨. ಇತರೆ ಉದ್ಯೋಗಗಳು**

ಆದಿಕಾಲದಿಂದ ಬಂದಿರುವ ಕುಲಕಸುಬಿನ ಮೇಲೆ ವ್ಯತಿರಿಕ್ತ ಪರಿಣಾಮ ಬೀರಿದ ನಂತರ ಕೊರಗರು ಬೇರೆ ಬೇರೆ ಉದ್ಯೋಗಗಳನ್ನು ಹುಡುಕತೊಡಗಿದರು. ದಿನನಿತ್ಯದ ಆಹಾರಕ್ಕಾಗಿ ಬೇರೆ ಬೇರೆ ಉದ್ಯೋಗಗಳನ್ನು ಅರಸುತ್ತಾ ಹೋಗಬೇಕಾಗುದುದು ಅವಶ್ಯ ಮತ್ತು ಅನಿವಾರ್ಯವಾಗಿತ್ತು. ಕರಾವಳಿ ಕರ್ನಾಟಕ ಪ್ರದೇಶದ ಶ್ರೀಮಂತರ ಮನೆ–ತೋಟಗಳಲ್ಲಿ ಕೂಲಿಯಾಳುಗಳಾಗಿ ಕೆಲಸ ನಿರ್ವಹಿಸಿದರೂ ಕೊರಗರಿಗೆ ಬರಿ ಹೊಟ್ಟೆ ತುಂಬುವಲ್ಲಿ ಅಲ್ಪಮಟ್ಟದ ಸಹಾಯವಾಯಿತೇ ಹೊರತು ಪೂರ್ಣಪ್ರಮಾಣದಲ್ಲಿ ಆಗಲಿಲ್ಲ. ದಿನವಿಡೀ ದುಡಿದರೂ ಅಲ್ಪಪ್ರಮಾಣದ ಕೂಲಿಗೆ ತೃಪ್ತಿಪಡಬೇಕಾಯಿತು. ನಗರ–ಪಟ್ಟಣಗಳಲ್ಲಿ ಇತರೆ ಕೆಲಸಗಳಿಗೆ ಮಾತ್ರ ತೃಪ್ತಿಪಡಬೇಕಾಯಿತು. ಶಿಕ್ಷಣವಿಲ್ಲದ ಯುವ ಕೊರಗರಿಗೆ ಯಾವುದೇ ಸರ್ಕಾರಿ ಉದ್ಯೋಗಗಳು ಸಿಗುವುದು ಮರೀಚಿಕೆಯೇ ಸರಿ. ಇತ್ತೀಚಿನ ಯುವಪೀಳಿಗೆಯ ಕೊರಗ ಯುವಕ–ಯುವತಿಯರು ಅಲ್ಪಸ್ವಲ್ಪ ಶಿಕ್ಷಣವನ್ನು ಪಡೆಯುತ್ತಿದ್ದಾರೆ. ಕೆಲವೊಂದು ಖಾಸಗಿ ಕಚೇರಿಗಳಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ. ಪಟ್ಟಣ–ನಗರಗಳಲ್ಲಿ ಸ್ವಚ್ಛಗೊಳಿಸುವ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತಿರುವ ಕೊರಗರಿದ್ದಾರೆ. ಕೆಲವೇ ಕೆಲವು ಕುಟುಂಬಗಳಿಗೆ ಕೃಷಿಭೂಮಿ ಇದ್ದು, ಸಣ್ಣಪುಟ್ಟ ವ್ಯವಸಾಯ–ಬೇಸಾಯವನ್ನು ಮಾಡಿಕೊಂಡಿದ್ದಾರೆ. ಬಹುತೇಕ ಕೊರಗರು ಕೂಲಿಯಾಳುಗಳೇ ಆಗಿದ್ದಾರೆ.

ಕೊರಗರ ಪ್ರಮುಖವಾದ ಕಸುಬು ಬುಟ್ಟಿ ಹೆಣೆಯುವುದು. ಆದರೆ ಇಂದು ಕೊರಗರು ತಮ್ಮ ಸಾಂಪ್ರದಾಯಿಕ ಉದ್ಯೋಗಗಳನ್ನು ಬಿಟ್ಟು ಇತರೆ ಉದ್ಯೋಗಗಳನ್ನು ಮಾಡುತ್ತಿದ್ದಾರೆ. ಕಾಡುಗಳ ನಾಶ, ಬುಟ್ಟಿ ಹೆಣೆಯಲು ಬೇಕಾಗುವ ಕಾಡಿನ ಉತ್ಪನ್ನಗಳ

ಕೊರತೆ, ಉತ್ಪಾದಿಸಿದ ವಸ್ತುಗಳಿಗೆ ಬೆಂಬಲ ಬೆಲೆ ಇಲ್ಲದಿರುವುದು ಅವರು ತಮ್ಮ ಕುಲಕಸುಬನ್ನು ಬಿಡಲು ಕಾರಣವಾಗಿದೆ.

ಇಂದು ಬಹುತೇಕ ಕೊರಗರು ಕೂಲಿ ಕೆಲಸ, ರಿಕ್ಷಾ ಡ್ರೈವರ್, ಕೃಷಿ ಕೆಲಸಗಳಿಗೆ ತೆರಳುತ್ತಿದ್ದಾರೆ. ಕೊರಗ ಸಂಘಟನೆಗಳ ಹೋರಾಟದ ಫಲವಾಗಿ ಕೊರಗರು ಗ್ರಾಮ ಪಂಚಾಯತ್, ಪುರಸಭೆ ಹಾಗೂ ನಗರಸಭೆಗಳಲ್ಲಿ ದುಡಿಯುತ್ತಿದ್ದಾರೆ. ನಗರ ಪ್ರದೇಶಗಳಲ್ಲಿ ಜಾಡಮಾಲಿಗಳಾಗಿಯೂ ಕೆಲಸ ನಿರ್ವಹಿಸುತ್ತಿದ್ದಾರೆ. ಸ್ವಂತ ಉದ್ಯೋಗಗಳನ್ನು ನಡೆಸುತ್ತಿದ್ದಾರೆ. ಕೆಲ ಕೊರಗ ಯುವಕರು "ಜಿಮ್ ಉದ್ಯೋಗವನ್ನು ನಡೆಸುತ್ತಿದ್ದಾರೆ. ಮಲ್ಲಿಗೆ ಕೃಷಿಯಿಂದ ಜೀವನ ನಡೆಸುವವರೂ ಇದ್ದಾರೆ. ಹಿಂದೆ ಕೊರಗರಲ್ಲಿ ಪರಿವರ್ತನೆ ಅಷ್ಟಾಗಿ ಕಂಡು ಬರುವುದಿಲ್ಲ. ಆದರೆ ಇಂದು ಆಧುನೀಕರಣ ಮತ್ತು ಕೈಗಾರಿಕೀಕರಣದ ಗಾಳಿ ಕೊರಗರಲ್ಲಿ ಬೀಸಿದೆ. ಉದ್ಯೋಗಗಳಿಂದಾಗಿ ಅವರ ವೇಷಭೂಷಣ ಮತ್ತು ಮಾತನ್ನಾಡುವ ಶೈಲಿಗಳಲ್ಲಿ ಪರಿವರ್ತನೆಗಳಾಗಿವೆ. ಸ್ವಂತ ಉದ್ಯೋಗಗಳನ್ನು ಹೊಂದಿರುವುದರಿಂದ ಮೊಬೈಲ್ ದೂರದರ್ಶನ, ಬೈಕುಗಳನ್ನು ಬಳಸುತ್ತಿದ್ದಾರೆ.

ಹೆಬ್ರಿ, ಕಾರ್ಕಳ, ಮುನಿಯಾಲು, ಮುಂಡ್ಕೂರು ಪರಿಸರದಲ್ಲಿ ಆಹಾರೋತ್ಪನ್ನಗಳಿಗಾಗಿ ಕಾಡನ್ನು ಅವಲಂಬಿಸಿರುವುದನ್ನು ಕಾಣುತ್ತೇವೆ. ಹಿಂದಿನ ತಲೆಮಾರುಗಳು ಇಂದಿಗೂ ಬುಟ್ಟಿ ತಯಾರಿಸುವುದು ತಮ್ಮ ಕಸುಬನ್ನಾಗಿ ಮಾಡಿಕೊಂಡಿವೆ ಆದರೆ ಇಂದಿನ ಪೀಳಿಗೆಗೆ ಅದು ಸರಿಯಾಗಿ ವರ್ಗಾವಣೆಯಾಗಿಲ್ಲ. ಇಂದಿನ ಕೊರಗ ಯುವಕ-ಯುವತಿಯರು ಸಾಂಪ್ರದಾಯಿಕ ಉದ್ಯೋಗವನ್ನು ಬಿಟ್ಟು ಇತರೆ ಉದ್ಯೋಗಗಳನ್ನು ಮಾಡುವುದನ್ನು ಕಾಣುತ್ತೇವೆ.

**೪.೩. ಸರ್ಕಾರದ ಯೋಜನೆಗಳು**

ಪ್ರಜಾಪ್ರಭುತ್ವ ಸರ್ಕಾರಗಳು ಅಭಿವೃದ್ಧಿಗಾಗಿ ನೂರಾರು ಯೋಜನೆಗಳನ್ನು ಪ್ರತಿವರ್ಷ ಮತ್ತು ಪಂಚವಾರ್ಷಿಕ ಯೋಜನೆಗಳ ಮೂಲಕ ಅನುಷ್ಠಾನಕ್ಕೆ ತರುತ್ತವೆ. ಆದರೆ ಪರಿಣಾಮಕಾರಿಯಾಗಿ ಅನುಷ್ಠಾನಗೊಳ್ಳದಿರುವುದೇ ಪ್ರತಿಯೊಂದು ಯೋಜನೆಯ ಹಿನ್ನಡೆಗೆ ಕಾರಣವಾಗಿದೆ. ಅಂಕಿಸಂಖ್ಯೆಗಳಲ್ಲಿ ನಿಖರತೆಯಿದ್ದರೂ ವಾಸ್ತವಾಂಶ ಬೇರೆಯೇ ಆಗಿರುತ್ತದೆ.

ಅಂತ್ಯೋದಯ ಪಡಿತರ ಚೀಟಿಗಳು ಕೊರಗರಿಗೆ ಲಭ್ಯವಾಗಿವೆ. ವಯಸ್ಕರ ವೇತನ, ಸಂಧ್ಯಾ ಸುರಕ್ಷಾ ಯೋಜನೆಯ ಫಲಾನುಭವಿಗಳು ಕೊರಗರಲ್ಲಿದ್ದಾರೆ.

ಕಿಶೋರಿ ಶಕ್ತಿ ಯೋಜನೆ, ಭಾಗ್ಯಲಕ್ಷ್ಮಿ ಬಾಂಡ್ ಯೋಜನೆ, ಜನನಿ ಸುರಕ್ಷಾ ಯೋಜನೆಗಳು ಕೊರಗರಿಗೂ ಇವೆ. ಅಂಗವಿಕಲ ವೇತನ, ಜನಶ್ರೀ ವಿಮಾ ಯೋಜನೆ ಮತ್ತು ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಗಳು ಕೊರಗರಿಗೆ ತಲುಪಿವೆ. ಮನೆ ನಿರ್ಮಾಣಕ್ಕೆ, ರಸ್ತೆ ನಿರ್ಮಾಣಕ್ಕೆ ಸಂಬಂಧಿಸಿದ ಯೋಜನೆಗಳು ಅಲ್ಲಲ್ಲಿ ಜಾರಿಯಾಗಿವೆ.

ಸರ್ಕಾರದ ಬಹುತೇಕ ಯೋಜನೆಗಳು ಕೊರಗರ ಹತ್ತಿರ ಬಂದಿವೆ. ಆದರೆ ಪರಿಣಾಮಕಾರಿಯಾಗಿ ಅನುಷ್ಠಾನಗೊಳ್ಳದೇ ಅವನತಿಯ ಹಾದಿಯಲ್ಲಿವೆ ಎಂದರೆ ತಪ್ಪಾಗಲಾರದು. ಉದಾಹರಣೆಯಾಗಿ ಡಾ. ಪೀರ್ ಮಹಮ್ಮದ್ ಅವರ ಕ್ರಿಯಾಯೋಜನೆ ವರದಿಯನ್ನು ಈ ಕೆಳಗಿನಂತೆ ಗಮನಿಸಬಹುದಾಗಿದೆ.

**ಡಾ. ಪೀರ್ ಮಹಮ್ಮದ ಕ್ರಿಯಾಯೋಜನೆ ವರದಿ**

ಇಂದು ಕೊರಗರು ಜೀತಗಾರಿಕೆಯಿಂದ ಸಂಪೂರ್ಣ ಮುಕ್ತರಾಗಿದ್ದಾರೆ. ಆದರೆ ಶತಶತಮಾನಗಳ ಸಂಪ್ರದಾಯ ಹಾಗೂ ಕುರುಡು ನಂಬಿಕೆಗಳಿಂದ ಪೂರ್ತಿ ಹೊರಬಂದಿಲ್ಲ. ತಾವು ನತದೃಷ್ಟರು, ಕೀಳು ಕುಲದವರು ಎನ್ನು ಹತಾಶ ಭಾವನೆ ನಿಧಾನವಾಗಿ ಮಾಯವಾಗುವಲ್ಲಿ ಶಿಕ್ಷಣ ಹಾಗೂ ಸರಕಾರದ ಹೊಸ ಕಾನೂನುಗಳು ನೆರವಾಗುತ್ತವೆ. ಸ್ವಾತಂತ್ರ್ಯಪೂರ್ವದಲ್ಲೇ ಕುದ್ಮುಲ ರಂಗರಾವ್, ಕಾರ್ನಾಡು ಸದಾಶಿವರಾವ್, ಕಮಲಾದೇವಿ ಚಟ್ಟೋಪಾಧ್ಯಾಯರಂತಹವರಿಂದ ಕೊರಗರ 'ಬಿಡುಗಡೆ'ಗೆ ಹಲವು ಕ್ರಿಯಾಯೋಜನೆಗಳು ನಡೆದ ಬಗ್ಗೆ ಮಾಹಿತಿ ದೊರೆಯುತ್ತವೆ. ಆದರೆ ಭೂರಹಿತ, ಅಶಿಕ್ಷಇತ ಕೊರಗರು ಬಿಡುಗಡೆ ಪಡೆಯುವುದು ಸುಲಭವಾಗಿರಲಿಲ್ಲ. ಇಂದು ಅವರಲ್ಲಿ ಸಂಕಲ್ಪಶ್ತಿಯನ್ನು ಮೂಡಿಸುವ, ಆತ್ಮಾಭಿಮಾನವನ್ನು ಉದ್ದೀಪಿಸುವ ಆಲೋಚನೆಯನ್ನು ಹುಟ್ಟು ಹಾಕಬೇಕಾಗಿದೆ. ಈ ಬಗೆಯ ಕ್ರಿಯಾಯೋಜನೆಗಳು ಗ್ರಾಮಮಟ್ಟದಲ್ಲಿ ತಳಮಟ್ಟದಿಂದ ಆರಂಭವಾಗಬೇಕು. ತಮ್ಮತನದ ಅರಿವು, ಸ್ವಾಭಿಮಾನದ ಎಚ್ಚರ, ಮುನ್ನಡೆವ ಧೈರ್ಯ ಹಾಗೂ ಮುಖ್ಯಧಾರೆಯೊಂದಿಗೆ ಕಲೆತು ತಲೆ ಎತ್ತಿ ಬದುಕಬಲ್ಲೆವು ಎನ್ನುವ ಧೈರ್ಯವನ್ನು ಅವರಲ್ಲಿ ತುಂಬಬೇಕಾಗಿದೆ. ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್‌ಗೆ ಕೊರಗ ಸಮುದಾಯದ ಸಾಮಾಜಿಕ ಆರ್ಥಿಕ ಹಾಗೂ ಶೈಕ್ಷಣಿಕ ಅಭಿವೃದ್ಧಿಗಾಗಿ ಒಂದು ಕ್ರಿಯಾಯೋಜನೆಯನ್ನು ಮಂಗಳೂರು ವಿಶ್ವವಿದ್ಯಾಲಯ ಸಮಾಜಶಾಸ್ತ್ರ ವಿಭಾಗದ ಪ್ರಾಧ್ಯಾಪಕ ಡಾ. ಮಹಮ್ಮದ್ ಪೀರ್ ಸಿದ್ಧಪಡಿಸಿದರು. ಅವರು ನೀಡಿದ ಮುಖ್ಯ ಸೈದ್ಧಾಂತಿಕ ಸೂಚನೆಗಳನ್ನು ಹೀಗೆ ಸಂಕ್ಷೇಪಿಸಬಹುದು.

೧. ಭೂಹೀನ ಕೊರಗ ಕುಟುಂಬವೊಂದಕ್ಕೆ ೨.೫ ಎಕರೆ ಭೂಮಿಯನ್ನು ನೀಡಬೇಕೆಂದು ಸರಕಾರ ಸೂಚಿಸಿದೆ. ಆದರೆ ಇದು ಜಾರಿಗೆ ಬಂದಿಲ್ಲ. ಸಶ್ರಮಿಗಳಾದ ಭೂಹೀನ ಕೊರಗರಿಗೆ ಸರಕಾರ ಸರಕಾರಿ ಜಮೀನಿಂದ ತಲಾ ಕುಟುಂಬವೊಂದಕ್ಕೆ ೨.೫ ಎಕರೆಯಷ್ಟನ್ನು ನೀಡುವ ಮೂಲಕ ಸಫಾಯಿ ಕೆಲಸಕ್ಕಾಗಿ ನಗರಗಳಿಗೆ ವಲಸೆಹೋಗಿ ಅಲ್ಲಿ ಯಾತನೆ ಪಡುವುದರಿಂದ ಅವರನ್ನು ಬಿಡುಗಡೆ ಮಾಡಬಹುದು.

೨. ಕೃಷಿಯೋಗ್ಯ ಭೂಮಿಯನ್ನು ನೀಡುವುದರ ಜೊತೆಗೆ ಅವರಿಗೆ ಬದುಕಿಗೆ ಅನುಕೂಲ ಮಾಡಿಕೊಡುವ ಶಿಕ್ಷಮ ಹಾಗೂ ಕೃಷಿ ವಿಧಾನಗಳ ಬಗೆಗೆ ಸರಿಯಾದ ತಿಳುವಳಿಕೆ ನೀಡಬೇಕು. ಬುಡಕಟ್ಟು ಅಭಿವೃದ್ಧಿಗಾಗಿ ಇರುವ ಖಾಸಗೀ ಸೇವಾ ಸಂಸ್ಥೆಗಳು ಕೊರಗರು ತಮ್ಮ ಸಾಂಪ್ರದಾಯಿಕ ಬದುಕಿನ ಕೋಟೆಯಿಂದ ಹೊರಬಂದು ಎಲ್ಲರೊಂದಿಗೆ ದುಡಿವ, ಓಡಾಡುವ ಆತ್ಮಧೈರ್ಯವನ್ನು ಅವರಲ್ಲಿ ತುಂಬಬೇಕು.

೩. ಕೊರಗ ಸಮುದಾಯದ ನಡುವೆ ಇರುವ ಶ್ರಮಿಕ ಮನೋಭಾವದ ಯುವಕರನ್ನು ಆಯ್ದು ಅವರಿಗೆ ಅಪರಿಚಿತವಾಗಿರುವ ಕೃಷಿ ವಿದ್ಯೆಯಲ್ಲಿ ತರಬೇತಿಗೆ ಕಳುಹಿಸುವುದಕ್ಕೆ ಸೇವಾ ಸಂಘಗಳು ಎಲ್ಲ ಏರ್ಪಾಟುಗಳನ್ನು ಮಾಡಬೇಕು.

ಕೊರಗ ಸಮುದಾಯವನ್ನು ಆವರಿಸಿರುವ 'ಗ್ಲಾನಿ'ಯನ್ನು ಹೊಡೆದೋಡಿಸಿ ಹೊಸ ಬಾಳಿಗೆ ಅವರನ್ನು ಸನ್ನದ್ಧಗೊಳಿಸುವ ಆಧಾರರಚನೆ(ಇನ್‌ಪ್ರಾಸ್ರಕ್ಚರ್)ಯನ್ನು ನಿರ್ಮಿಸಿದಲ್ಲಿ ಕೊರಗರನ್ನು ಅಭಿವೃದ್ಧಿಗೊಳಿಸಬಹುದು.

೪. ಕೊರಗ ಅಭಿವೃದ್ಧಿ ಸಂಘಟನೆಗಳು ಹಾಗೂ ಸ್ವಯಂ ಸೇವಾ ಸಂಘಗಳು ಕೊರಗ ಸಮುದಾಯದೊಳಗಿಂದ ಉತ್ಸಾಹೀ ಯುವಕ, ಯುವತಿಯನರನ್ನು ಹುಡುಕಿ ತೆಗೆದು ಕೃಷಇ ಕರ್ಮಗಳಲ್ಲಿ ಅವರನ್ನು ಸಜ್ಜುಗೊಳಿಸಲು ಸೂಕ್ತ ತರಬೇತಿ ವ್ಯವಸ್ಥೆಗೆ ಗುರಿಪಡಿಸಬೇಕು. ಸಮಾನ ಮನೋಧರ್ಮದ ಇತರ ಬುಡಕಟ್ಟು ಜನಸಮುದಾಯದೊಂದಿಗೆ ಅವರನ್ನು ಬೆರೆಯಲು ಅವಕಾಶ ಮಾಡಿಕೊಡಬೇಕು. ಸಹಕಾರ ಮಾದರಿ ಕೊರಗ ಕೃಷಿ ಕೇಂದ್ರಗಳನ್ನು ತೆರೆದು ಕೊರಗ ಯುವಕರಿಗೆ ಅಲ್ಲಿ ಒಂದರಿಂದ ಎರಡು ವರ್ಷಗಳ ಕಾಲ ತರಬೇತಿ ನೀಡುವ ಏರ್ಪಾಟು ಮಾಡಬೇಕು. ಕೊರಗ ಸಮುದಾಯದವರು ದಟ್ಟವಾಗಿ ವಾಸವಾಗಿರುವಲ್ಲಿ ಇಂತಹ ಹಲವಾರು ಮಾದರಿ ಕೇಂದ್ರಗಳನ್ನು ತೆರೆದು ಕೃಷಿ ಕರ್ಮಗಳಿಗೆ ಅಪರಿಚಿತವಾಗಿರುವ ಕೊರಗರನ್ನು ಮಾದರಿ ಕೃಷಿಕರನ್ನಾಗಿ ರೂಪಿಸಬೇಕು.

೫. ಈ ಬಗೆಯ ಮಾದರಿ ಕೃಷಿ ಕೇಂದ್ರಗಳು ಚೇತರಿಸಿಕೊಂಡಾಗ ಇವುಗಳ ಜತೆಗೆ ಹೈನುಗಾರಿಕೆ, ಕೋಳಿಸಾಕಾಣಿಕೆ ಮುಂತಾದ ವೃತ್ತಿಗಳನ್ನು ಇವರ ಬದುಕಿಗೆ ಅನ್ವಯಿಸುವಂತೆ ಮಾಡುವ ಮೂಲಕ ಅವರ ಕ್ರಿಯಾಸಾಮರ್ಥ್ಯವನ್ನು ವಿಸ್ತರಿಸಬಹುದು. ಕೊರಗರ ಮೂಲ ಕಸುಬಾದ ಬುಟ್ಟಿ ಹೆಣೆಯುವುಕೆಗೆ ಬೇಕಾದ ಕಚ್ಚಾವಸ್ತುಗಳು ಕಾಡಿನಲ್ಲಿ ಸಾಕಷ್ಟು ಪ್ರಮಾಣದಲ್ಲಿ ದೊರೆಯದೆ ಇರುವುದರಿಂದ ಹಾಗೂ ಇವರ ಪಾರಂಪರಿಕ ಉತ್ಪನ್ನಗಳಿಗೆ ಆಧುನಿಕ ಯಂತ್ರಾಧಾರಿತ ಉತ್ಪನ್ನಗಳಿಂದ ಬಾಧೆ ತಟ್ಟಿರುವುದರಿಂದ ಅವರನ್ನು ಹೊಸ ಬದುಕಿನಲ್ಲಿ ನೆಲೆಗೊಳಿಸುವುದು ಅವಶ್ಯ ಹಾಗೂ ಅನಿವಾರ್ಯ. ಹೀಗೆ ಸಾಂಪ್ರದಾಯಿಕ ಬದುಕಿನಲ್ಲಿ ಸೋತವರನ್ನು ಹೊಸ ಸಾಧ್ಯತೆಗಳಲ್ಲಿ ನಎಲೆಗೊಳಿಸಿ ಅವರ ಬದುಕಿಗೆ ಹೊಸ ಆಯಾಮವನ್ನು ಕಲ್ಪಿಸಿಕೊಡುವಲ್ಲಿ ಸ್ವಯಂ ಸೇವಾ ಸಂಘಗಳು ಗಮನಹರಿಸಬೇಕು.

೬. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕೊರಗರಿಗಾಗಿ ಗೊತ್ತುಮಾಡಿದ ಎಂಟು ನೀರಾವರಿ ಯೋಜನೆಗಳಲ್ಲಿ ಒಂದು ಬಾವಿ ಮಾತ್ರ ಪೂರ್ಣಗೊಂಡಿದೆ. ಆದರೆ ಅದಕ್ಕೆ ಇನ್ನೂ ನೀರು ಎತ್ತುಗ ಯಂತ್ರವನ್ನು ಜೋಡಿಸಿಲ್ಲ. ಕೆಲವು ಕೊರಗ ಕುಟುಂಬಗಳಿಗೆ ಒಂದರಿಂದ ಎರಡು ಎಕರೆ ಜಮೀನು ಮಾತ್ರ ಇದೆ. ಸರಕಾರದ ನಿಯಮ ಪ್ರಕಾರ ಈ ಯೋಜನೆಯ ಫಲಾನುಭವಿಗಳಿಗೆ ಕನಿಷ್ಠ ೨.೫ ಎಕರೆ ಜಮೀನು ಇರಲೇಬೇಕು. ಅದಕ್ಕಾಗಿ ಕೊರಗ ಶ್ರೇಯೋಭಿವೃದ್ಧಿ ಸಂಘಗಳು ಕರ್ನಾಟಕ ಸರಕಾರಕ್ಕೂ ಜಿಲ್ಲಾ ಪಂಚಾಯತಿಯ ಆಡಳಿತಾಧಿಕಾರಿಗಳಿಗೂ ನಿಯಮವನ್ನು ಸಡಿಲಿಸುವಂತೆ ಪತ್ರ ಬರೆದು ಕೇಳಿಕೊಂಡಿದೆ. ಬಹುತೇಕ ಕೊರಗರು ಭೂರಹಿತವಾದುದರಿಂದ ಸರಕಾರದ ಈ ಜಡಕಾನೂನನ್ನು ಸಡಿಲಿಸಿ ಒಂದು ಎಕರೆ ಹಾಗೂ ಅದಕ್ಕಿಂತ ಹೆಚ್ಚು ಭೂಮಿ ಉಳ್ಳ ಕೊರಗರಿಗೆ ನೀರಾವರಿ ಸೌಲಭ್ಯವನ್ನು ವಿಸ್ತರಿಸಬೇಕೆಂದು ಡಾ. ಪೀರ್ ಮಹಮ್ಮದರ ಸಮಿತಿ ಅಭಿಪ್ರಾಯಪಟ್ಟಿದೆ.

೭. ಹರಿಜನ, ಗಿರಿಜನ ಅಭಿವೃದ್ಧಿ ನಿಗಮದಿಂದ ಒಂದು ಎಕರೆಯಷ್ಟು ಕೃಷಿಯೋಗ್ಯ ಜಮೀನನ್ನು ಕೊಂಡುಕೊಳ್ಳುವ ಸಂದರ್ಭದಲ್ಲಿ ರೂ. ೧೦,೦೦೦/- ದಷ್ಟು ಸಬ್ಸಿಡಿ ದೊರೆಯುತ್ತದೆಯಂತೆ. ಆದರೆ ಈತನಕ ಯಾವುದೇ ಕೊರಗ ಕುಟುಂಬಕ್ಕೆ ಇದರ ಪ್ರಯೋಜನ ಸಿಕ್ಕಿಲ್ಲ ಎಂಬುದಾಗಿ ಡಾ. ಪೀರ್ ಮಹಮ್ಮದ್ ಸಮಿತಿ ತನ್ನ ವರದಿಯಲ್ಲಿ ಹೇಳಿದೆ. ಈ ಸೌಲಭ್ಯವನ್ನು ಕೊರಗಸಮುದಾಯಕ್ಕೆ ವಿಸ್ತರಿಸಬೇಕಾಗಿ ಸಮಿತಿ ತನ್ನ ವರದಿಯಲ್ಲಿ ಹೇಳಿದೆ.

೮. ಸ್ವಯಂ ಸೇವಾಸಂಘಗಳು ಕೊರಗ ಸಮುದಾಯವನ್ನು ಯಾವುದಾದರೊಂದು ಗುಂಪು ಕ್ರಿಯಾಯೋಜನೆಗೆ ಅಣಿಗೊಳಿಸಿ ಅವರಿಗೊಂದು ಸಜ್ಜಿತ ಆಧಾರರಚನೆ ಏರ್ಪಡುವಂತೆ ಮಾಡಬಹುದು. ವಯಸ್ಕರ ಶಿಕ್ಷಣ ತರಗತಿ ತೆರೆದು ಅದರಲ್ಲಿ ಆರೋಗ್ಯ, ಕುಟುಂಬ ಕಲ್ಯಾಣದಂತಹ ವಿಚಾರಗಳ ಮೇಲೆ ಒತ್ತು ನೀಡಿ ತಿಳುವಳಿಕೆ ನೀಡಬೇಕು. ಈ ಸಂದರ್ಭದಲ್ಲಿ ವಯಸ್ಕರ ಶಿಕ್ಷಣ ಸಂಸ್ಥೆಯ ನೆರವನ್ನು ಪಡೆಯಬಹುದು. ಶಿಕ್ಷಣ, ಜನಾರೋಗ್ಯ, ಮಕ್ಕಳನ್ನು ಶಾಲೆಗೆ ಕಳುಹಿಸುವುದರ ಮಹತ್ವ, ಬದಲಾಗುತ್ತಿರುವ ಅವರ ಜೀವನ ವಿಧಾನ ಇವುಗಳ ಬಗ್ಗೆ ತರಗತಿಗಳಲ್ಲಿ ಬೋಧನೆ ನಡೆಯಬೇಕು. ಈ ಕ್ರಿಯಾಯೋಜನೆಯನ್ನು ಪರಿಣಾಮಕಾರಿಯಾಗಿ ನಡೆಸಿಕೊಂಡು ಬಂದಲ್ಲಿ ಈ ಪ್ರಕ್ರಿಯೆ ಮುಂದಿನ ಐದು ವರ್ಷಗಳಲ್ಲಿ ಫಲಾನುಭವ ಸಿಗಬಹುದು. ಸಮುದಾಯ ಭವನ, ಕ್ರಿಯಾತ್ಮಕ ಶೈಕ್ಷಣಿಕ ಉಪಕರಣ, ಶಿಕ್ಷಕರಿಗೆ ಗೌರವ ಸಂಭಾವನೆಗಳನ್ನು ನೀಡುವ ಮೂಲಕ ಸರಕಾರ ಈ ಯೋಜನೆಗೆ ಸೂಕ್ತ ಆಧಾರ ರಚನೆಯನ್ನು ಒದಗಿಸಬಹುದು.

೯. ಕೊರಗರ ದುಡಿಮೆಗೆ ಬೇಕಾಗುವ ಕಚ್ಚಾವಸ್ತುಗಳ ಒದಗಿಸುವಿಕೆ ಹಾಗೂ ಅವರ ಉತ್ಪನ್ನಗಳಿಗೆ ಸೂಕ್ತ ಮಾರುಕಟ್ಟೆಗಳನ್ನು ಕೊರಗರಿಂದಲೇ ಸಂಪನ್ನಗೊಂಡ ಸಹಕಾರಿ ಸಂಸ್ಥೆಗಳ ಮೂಲಕ ಪಡೆಯುವಂತಾಗಬೇಕು. ಇಂತಹ ಸಂಘಟನೆಗಳನ್ನು ಕೊರಗರ ದಟ್ಟನೆಲೆಗಳನ್ನು ಆಯ್ದು ಹುಟ್ಟು ಹಾಕಬೇಕು. ಸ್ವಯಂಸೇವಾ ಸಂಘಗಳು ಇಂತಹ ಸಹಕಾರಿ ಸಂಘಗಳನ್ನು ಕೊರಗ ಮಹಿಳೆಯರ ಅಭಿವೃದ್ಧಿಯ ಕಡೆಗೂ ಗಮನಹರಿಸುವಂತಾದರೆ ತುಂಬ ಉಪಯುಕ್ತವಾಗಬಹುದು.

೧೦. ದೀರ್ಘಕಾಲ ಅರೆಹೊಟ್ಟೆ ಕುಳಿತಲ್ಲೇ ಕುಳಿತು ಬುಟ್ಟಿ ಹೆಣೆಯುವ, ಬೀಳು ಸಲಿಕೆಗಳನ್ನು ಸಜ್ಜುಗೊಳಿಸುವ ಶ್ರಮದಾಯಕ ಕೆಲಸಗಳಲ್ಲಿ ನಿರತರಾಗುವ ಕೊರಗ ಮಹಿಳೆಯರ ವಿವಿಧೋದ್ದೇಶ ಸಹಕಾರಿ ಸಂಘವನ್ನು ಸ್ಥಾಪಿಸುವುದು ತುರ್ತು ಅವಶ್ಯವಾಗಿದೆ. ಇದರಿಂದ ಅವರ ದುಡಿಮೆಯ ಸಾಮರ್ಥ್ಯಕ್ಕೆ ತುರ್ತು ಅವಶ್ಯವಾಗಿದೆ. ಇದರಿಂದ ಅವರ ದುಡಿಮೆಯ ಸಾಮರ್ಥ್ಯಕ್ಕೆ ಸೂಕ್ತ ಗೌರವ ಹಾಗೂ ಬೆಲೆ ದೊರೆಯುವಂತಾಗುತ್ತದೆ. ಇದಕ್ಕೆ ಸಹಕಾರ ಬೇಕಾದ ಆಧಾರರಚನೆಯನ್ನು ಒದಗಿಸಿ ಸಹಕರಿಸಬೇಕು. ಅವರಿಗೆ ಬೇಕಾದ ಗೃಹೋಪಯೋಗಿ ವಸ್ತುಗಳನ್ನು ನ್ಯಾಯಬೆಲೆಯಲ್ಲಿ ಈ ಸಹಕಾರಿ ಸಂಘದ ಮೂಲಕ ವಿತರಿಸಬಹುದು.

೧೧. ಕೊರಗ ಅಭಿವೃದ್ಧಿ ಸಂಘಗಳು ಕೊರಗಸಮುದಾಯದ ಸಮಗ್ರ ಆರೋಗ್ಯ ತಪಾಸಣಾ ಯೋಜನೆಯನ್ನು ಕೈಗೆತ್ತಿಕೊಳ್ಳಬೇಕು. ಅವರು ಸಾಮಾನ್ಯವಾಗಿ ಎದುರಿಸುವ

ಕಾಯಿಲೆಗಳು, ಅದರ ಲಕ್ಷಣಗಳನ್ನು ಹಾಗೂ ಉಪಚಾರಗಳ ಬಗ್ಗೆ ಸ್ಥಳೀಯ ಭಾಷೆಯಲ್ಲಿ ಪ್ರಚಾರ ಪುಸ್ತಿಕೆಗಳನ್ನು ಸಿದ್ಧಪಡಿಸಬೇಕು. ಈ ಸಾಹಿತ್ಯವನ್ನು ಕೊರಗ ಸಮುದಾಯದ ನಡುವೆ ಪ್ರಚಾರಿಸಬೇಕು. ಆಯ್ದ ಕೊರಗ ಕೇಂದ್ರಗಳಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರಗಳ ನೆರವಿನಿಂದ 'ಆರೋಗ್ಯ ಹಾಗೂ ನ್ಯೂನಪೋಷಣೆ ಶಿಬಿರ'ವನ್ನು ಏರ್ಪಡಿಸಿ ಕೊರಗ ಸಮುದಾಯಕ್ಕೆ ಶುಚಿತ್ವ ಹಾಗೂ ಆರೋಗ್ಯದ ಬಗೆಗೆ ಮಾಹಿತಿ ನೀಡಬೇಕು. ಸ್ವಯಂ ಸೇವಾಸಂಘಗಳ ಸದಸ್ಯರಿಗೆ ಆರೋಗ್ಯ ತಪಾಸಣಾ ತರಬೇತಿ ನೀಡಿ ಕೊರಗ ಸಮುದಾಯದವರ ಆರೋಗ್ಯದ ಮೇಲೆ ನಿಗಾ ಇಡುವಂತೆ ಮಾಡಬಹುದು.

೧೨. ದೂರ ದೂರ ಚೆದುರಿಕೊಂಡಿರುವ ಕೊರಗ ಕುಟುಂಬಗಳ ವಸತಿಗೃಹಗಳನ್ನು ಸೂಕ್ತ ವ್ಯವಸ್ಥೆಯೊಂದಿಗೆ ಒಂದೆಡೆಗೆ ಕೇಂದ್ರೀಕರಿಸುವ ಮೂಲಕ ಸೌಲಭ್ಯಗಳ ಸದುಪಯೋಗವನ್ನು ಹೆಚ್ಚಿಸಬಹುದು ಹಾಗೂ ಆಧಾರ ರಚನೆಯನ್ನು ಬಲಗೊಳಿಸಬಹುದು. ಇದರಿಂದ ಅವರ ಸಾಂಘಿಕ ಅಭಿವೃದ್ಧಿಗೆ ಅನುಕೂಲವಾಗುತ್ತದೆ. ಆದರೆ ಬಟಾಬಯಲಲ್ಲಿ ಸ್ವಚ್ಛಂದವಾಗಿ ಬದುಕುತ್ತಿದ್ದ ಕೊರಗ ಸಮುದಾಯವನ್ನು ನಾಗರಿಕ ಕಾಲೋನಿಗಳಲ್ಲಿ ಬದುಕುವಂತೆ ಮಾಡುವುದು ಅವರಿಗೆ ಸರಿಹೋಗದೆ ಇರಬಹುದು. ಇಲ್ಲಿ ಅವರ ಒಪ್ಪಿಗೆ ಪಡೆದೇ ಅವರನ್ನು ಈ ಪ್ರಕ್ರಿಯೆಗೆ ಗುರಿಪಡಿಸಬೇಕು. ಕುಡಿಯುವ ನೀರಿನ ಸೌಲಭ್ಯ, ಆರೋಗ್ಯ, ರಕ್ಷಣೆ, ಶೈಕ್ಷಣಿಕ ಅನುಕೂಲ, ಸಹಕಾರಿ ಸಂಘಗಳ ಸ್ಥಾಪನೆ ಇಂತಹ ಜನೋಪಯೋಗಿ ಯೋಜನೆಗಳನ್ನು ಆರಂಭಿಸಿ ಕೊರಗ ಅಭಿವೃದ್ಧಿಗೆ ಸೂಕ್ತ ಆಧಾರ ರಚನೆ ಹಾಕಿಕೊಂಡ ಬಳಿಕವೇ ಅವರ ಕಾಲೋನಿಗಳನ್ನು ಪುನರ್ರಚಿಸುವ ಕೆಲಸಕ್ಕೆ ತೊಡಗಬೇಕು.

೧೩. ಪ್ರಸಕ್ತ ಚಾಲ್ತಿಯಲ್ಲಿರುವ ಸ್ವಉದ್ಯೋಗ ಕಾರ್ಯಕ್ರಮಗಳು ಕೊರಗ ಸಮುದಾಯಕ್ಕೆ ಉಪಯುಕ್ತವಾಗಿಲ್ಲ. ಅದಕ್ಕಾಗಿ ಕೊರಗ ಸಮುದಾಯಕ್ಕೆ ಎಲ್ಲಿ ಸ್ವ-ಉದ್ಯೋಗಕ್ಕೆ ಅವಕಾಶವಿದೆಯೋ ಅಲ್ಲಿ ಇಂತಹವರಿಗೆ ತರಬೇತಿ ಕಾರ್ಯಕ್ರಮಗಳನ್ನು ಹಾಕಿಕೊಳ್ಳಬೇಕು. ಕೊರಗ ಯುವಕ, ಯುವತಿಯರು ಸ್ವಉದ್ಯೋಗಕ್ಕೆ ಮುಂದಾಗಿ ಬರುವುದನ್ನು ಪ್ರೋತ್ಸಾಹಿಸುವ ಸಲುವಾಗಿ ಸೂಕ್ತ 'ಉತ್ತೇಜನ ನೀತಿ'ಯನ್ನು ಪ್ರಕಟಿಸಬೇಕಾಗಿ ಡಾ. ಪೀರ್ ಮಹಮ್ಮದ್ ಸಮಿತಿ ಅಭಿಪ್ರಾಯಪಟ್ಟಿದೆ. ಮರೆಗೆಲಸ, ಸಣ್ಣ ಯಂತ್ರೋದ್ಯಮ, ಕರಕುಶಲಕಲೆ, ಗಾರೆ ಕೆಲಸ ಇಂತಹವುಗಳಲ್ಲಿ ನೈಪುಣ್ಯ ಪಡೆವ ಸಲುವಾಗಿ ಕೊರಗ ಯುವಕರಿಗೆ ತರಬೇತಿ ಕಾರ್ಯಕ್ರಮ ಏರ್ಪಡಿಸಿ ಅವರನ್ನು ಸ್ವಉದ್ಯೋಗಕ್ಕೆ ಪ್ರೇರೇಪಿಸಬೇಕು.

ಇಂತಹ ತರಬೇತಿ ಕಾರ್ಯಕ್ರಮಗಳನ್ನು ಎರಡು ಹಂತಗಳಲ್ಲಿ ನಡೆಸಬೇಕು. ಮೊದಲನೆಯದು ತರಬೇತಿಪೂರ್ವ ಹಂತ. ಈ ಹಂತದಲ್ಲಿ ಕೊರಗ ಅಭಿವೃದ್ಧಿ ಸಂಘ ಅಥವಾ ಸೇವಾ ಸಂಸ್ಥೆಗಳು ಆ ಸಮುದಾಯದಲ್ಲಿ ತರಬೇತಿಯ ಬಗೆಗೆ ಆಸಕ್ತಿ ಹುಟ್ಟಿಸುವ ಹಾಗೂ ಅವರನ್ನು ಸಂವೇದನ ಶೀಲರನ್ನಾಗಿಸುವ ಗಮನಾರ್ಹ ಕೆಲಸ ಮಾಡಬೇಕು. ಇದರಿಂದ ಒಮ್ಮೆ ತರಬೇತಿಗೆ ಹಾಜರಾದ ಕೊರಗ ಯುವಕ, ಯುವತಿಯರು ತರಬೇತಿಯ ನಡುವೆ ಬಿಟ್ಟು ಹೋಗುವುದು ತಪ್ಪುತ್ತದೆ. ಆಸಕ್ತಿಯ ಕೊರತೆ ಹಾಗೂ ತರಬೇತಿಯಂಹ ಅನೈಸರ್ಗಿಕ ವಾತಾವರಣಕ್ಕೆ ಕೊರಗ ಯುವಕ, ಯುವತಿಯರೂ ಒಗ್ಗದೆ ಹೋಗುವುದು ಇಂತಹ ಬಿಡುವತನಕ್ಕೆ ಕಾರಣ ಎನ್ನಲಾಗಿದೆ. ಅದಕ್ಕಾಗಿ ಈ ತರಬೇತಿ ವ್ಯವಸ್ಥೆಗಾಗಿ ಸೂಕ್ತ ಕಟ್ಟಡ, ತರಬೇತಿ ಉಪಕರಣ, ಸಂಪನ್ಮೂಲ ವ್ಯಕ್ತಿಗಳ ಒದಗಿಸುವಿಕೆ ಮುಂತಾದ ಆಧಾರ ರಚನೆಗಳನ್ನು ಸಹಕಾರ ಒದಗಿಸಬೇಕಾಗಿ ವರದಿಯಲ್ಲಿ ಹೇಳಲಾಗಿದೆ.

೧೪. ನಾಳಿನ ಬಗೆಗೆ ಚಿಂತಿಸದ ಕೊರಗ ಸಮುದಾಯದಿಂದ ಮನೆ ಕಟ್ಟಿಸಲು ಪಡೆದ ಸಾಲದ ಮರುಪಾವತಿಯನ್ನು ನಿರೀಕ್ಷಿಸುವುದು ಸಾಧ್ಯವಿಲ್ಲ. ಮನೆಯ ಗಟ್ಟಿಮುಟ್ಟುತನ ಅಂದಚೆಂದ ಯಾವುದನ್ನೂ ಗಮನಿಸದೆ ಸಹಾಯಧನ ರೂಪದ ಮನೆಗಳನ್ನು ಕಟ್ಟಿಸಿ ಕೊಡುವ ಸರಕಾರದ ನೀತಿಯನ್ನು ಪ್ರೋತ್ಸಾಹಿಸಬಾರದು. ಇಂತಹ ಮನೆಗಳು ಕಟ್ಟಿದ ಕೆಲವೇ ಸಮಯದಲ್ಲಿ ಕುಸಿದುಬಿದ್ದುದಕ್ಕೆ ಉದಾಹರಣೆಗಳು ಇವೆ. ಕೊರಗ ಸಮುದಾಯದ ಇತರ ಬೇಡಿಕೆಗಳ ಜೊಎಗೆ ವಸತಿ ಸಮಸ್ಯೆಯನ್ನು ಗಂಭೀರವಾಗಿ ಪರಿಗಣಿಸಿ ಒಂದು ವ್ಯವಸ್ಥಿತವಾದ ಕೊರಗ ವಸತಿ ಯೋಜನೆಯನ್ನು ಸಿದ್ಧಪಡಿಸಬೇಕು. ಈ ಮೂಲಕ ನಿಗದಿತ ಸಂಖ್ಯೆಯ ಮನೆಗಳನ್ನು ಕೊರಗರಿಗೆ ಕಟ್ಟಿಕೊಡಬೇಕು. ಇಲ್ಲಿ ಮನೆಗಳ ಗುಣಮಟ್ಟಕ್ಕೆ ಆದ್ಯತೆ ನೀಡಬೇಕು. ಯಾವುದೇ ಕಾರಣಕ್ಕಾಗಿ ರಾಜಿ ಸಲ್ಲದು, ಬಡತನದ ತೀವ್ರತೆಯನ್ನು ಗಮನಿಸಿ ಕಡುಬಡವನಿಂದ ಆರಂಭಿಸಿ ಎಲ್ಲಾ ಕೊರಗರಿಗೆ ನೆ ಕಟ್ಟಿಕೊಡುವ ಈ ಯೋಜನೆ ೧೦ ವರ್ಷಗಳ ಸುದೀರ್ಘ ಕಾಲದ್ದಾಗಿರಬೇಕು.

೧೫. ಅವರತಲೆ ಮೇಲಿನ ಪ್ರಸಕ್ತ ಸಾಲವನ್ನು ಮನ್ನಾ ಮಾಡಬಹುದು. ಆ ಬಳಿಕ ಮತ್ತೆ ಸಾಲ ಮಾಡುವುದನ್ನು ಪ್ರೋತ್ಸಾಹಿಸಕೂಡದು. ಅದಕ್ಕಾಗಿ ಸಹಕಾರಿ ಸಂಘಗಳನ್ನು ಸ್ಥಾಪಿಸಿ ಅವರ ದೈನಂದಿನ ದುಡಿಮೆಗೆ ಅನುಕೂಲವಾಗುವಂತೆ ಆರ್ಥಿಕ ನೆರವು ಸಿಗುವಂತೆ ಮಾಡಬೇಕು. ಎಲ್ಲಾ ಕೊರಗರು ಕಡ್ಡಾಯವಾಗಿ ಈ ಸಹಕಾರಿ ಸಂಘದ ಸದಸ್ಯರಾಗಬೇಕು. ಈ ಸಹಕಾರಿ ಸಂಘವು ಕೊರಗ ಸಮುದಾಯಕ್ಕೆ ದುಡಿಮೆಗೆ ಬೇಕಾದ

ಕಚ್ಚಾವಸ್ತುಗಳನ್ನು ಒದಗಿಸಬೇಕು ಹಾಗೂ ಅವರ ಉತ್ಪನ್ನಗಳಿಗೆ ಮಾರುಕಟ್ಟೆಯನ್ನು ನಿರ್ಮಿಸಬೇಕು.

೧೬. ಕೊರಗ ಮಕ್ಕಳಿಗಾಗಿ ಹೊಸದಾಗಿ ಶಾಲೆಗಳನ್ನು ತೆರೆಯಬೇಕಾಗಿಲ್ಲ, ಆದರೆ ಎಲ್ಲಾ ಕೊರಗಪಾಲಕರು ತಮ್ಮ ಮಕ್ಕಳನ್ನು ಶಾಲೆಗೆ ತಪ್ಪದೆ ಕಳುಹಿಸಿಕೊಡುವಂತೆ ಪ್ರೇರೇಪಿಸಬೇಕು. ಸ್ವಯಂಸೇವಾ ಸಂಸ್ಥೆಗಳು ಹಾಗೂ ಸರಕಾರ ಕೊರಗ ಬಾಲಕರ ಶಿಕ್ಷಣದ ಲಾಭ ಪಡೆಯುವಂತೆ ಮಾಡುವುದರಲ್ಲಿ ಮಹತ್ವದ ಪಾತ್ರವಹಿಸಬೇಕು. ಹೊಸದಾಗಿ ಕೊರಗ ಶಾಲೆಗಳನ್ನು ತೆರೆವ ಬದಲು ಆ ಹಣವನ್ನು ಪಾಲಕರ ಮನ ಒಲಿಸುವ, ಮಕ್ಕಳನ್ನ ಶಾಲೆಗ ಕಳುಹಿಸಿಕೊಡುವಂತಾಗಲು ಅವಶ್ಯಕವಾದ ವಾತಾವರಣ ನಿರ್ಮಾಣಕ್ಕೆ ಬಳಸಬಹುದು. ಕೊರಗ ಮಕ್ಕಳಿಗೆ ಪ್ರತ್ಯೇಕವಾಗಿ ಪ್ರಾಯೋಗಿಕ ನೆಲೆಯಲ್ಲಿ ಶಿಕ್ಷಣ ಶಾಲೆಯನ್ನು ತೆರೆಯಬೇಕೆಂದೂ ಅದನ್ನು ಕಾಪು ಪರಿಸರದಲ್ಲಿ ಆರಂಭಿಸಬಹುದೆಂದೂ ಸಮಿತಿ ಅಭಿಪ್ರಾಯಪಟ್ಟಿದೆ.

೧೭. ಸ್ಥಳೀಯ ಉದ್ಯೋಗಪತಿಗಳು ಕೊರಗ ಯುವಕ, ಯುವತಿಯರಿಗೆ ಉದ್ಯೋಗ ಅವಕಾಶ ಕಲ್ಪಿಸಿಕೊಡುವಂತೆ ಸರಕಾರ ಅವರಿಗೆ ಸೂಕ್ತ ಮಾರ್ಗದರ್ಶನ ಮಾಡಬೇಕು.

೧೮. ದಕ್ಷಿಣ ಕನ್ನಡ ಜಿಲ್ಲೆಯಂತಹ ಮುಂದುವರಿದ ಪ್ರದೇಶದಲ್ಲಿ ಕೊರಗರ ಸ್ಥಿತಿ ಇಷ್ಟು ಹೀನಾಯವಾಗಿರುವುದ ಆಶ್ಚರ್ಯದ ಸಂಗತಿ. ಅದಕ್ಕೆ ಸೂಕ್ತಕಾರಣಗಳನ್ನು ಶೋಧಿಸಿ ಅವರ ಆರ್ಥಿಕ ಸಾಮಾಜಿಕ ಬಿಡುಗಡೆಗಾಗಿ ಶ್ರಮಿಸುವುದು ಎಲ್ಲ ನಾಗರಿಕರ ಕರ್ತವ್ಯ. ಕೊರಗ ಶ್ರೇಯೋಭಿವೃದ್ಧಿಗೆಂದೇ ಒಂದು ನಿಧಿಯನ್ನು ಹುಟ್ಟುಹಾಕಿ ಆ ಮೂಲಕ ಕೊರಗ ವಿದ್ಯಾರ್ಥಿ, ವಿದ್ಯಾರ್ಥಿನಿಯರ ಉನ್ನತ ಶಿಕ್ಷಣಕ್ಕೆ ಅಥವಾ ಸ್ವ-ಉದ್ಯೋಗ ತರಬೇತಿಗಾಗಿ ಸೂಕ್ತ ಏರ್ಪಾಡು ಮಾಡಬಹುದು. ಈ ನಿಧಿಯ ಉದ್ದೇಶವನ್ನು ಹೀಗೆ ಹೇಳಬಹುದು.

೧. ಉನ್ನತ ಶಿಕ್ಷಣದ ಅನುಕೂಲಕ್ಕಾಗಿ.

೨. ಸರಕಾರ ಆರ್ಥಿಕ ನೆರವು ಸಾಕಾಗದ ಹೋದಾಗ ಅಥವಾ ಬಾರದೆ ಹೋದಾಗ ಅವರ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಈ ಹಣವನ್ನು ಬಳಸುವುದು.

೩. ಕೊರಗ ಶ್ರೇಯೋಭಿವೃದ್ಧಿಗೆ ಸಂಘಗಳ ಆರ್ಥಿಕ, ಸಾಮಾಜಿಕ ಉನ್ನತೀಕರಣ ಕಾರ್ಯಕ್ರಮಗಳನ್ನು ಪ್ರೋತ್ಸಾಹಿಸುವ ಸಲುವಾಗಿ.

೪. ಕೊರಗ ಕಲ್ಯಾಣ ಕಾರ್ಯಕ್ರಮಗಳಲ್ಲಿ ಜಾರಿಗೊಳಿಸುವಲ್ಲಿ ಬೇಕಾಗುವ ಎಲ್ಲಾ ಆಧಾರ ರಚನೆಗಳ ನಿರ್ಮಾಣಕ್ಕೆ ಈ ನಿಧಿಯನ್ನು ಬಳಸಬಹುದು. ಈ ಹಣವನ್ನು ವಿಲೇವಾರಿ ಮಾಡುವ ಅಧಿಕಾರವು ಎಲ್ಲಾ ಪರಿಷತ್ತಿನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗೆ ಇರಬೇಕು.

೧೯. ಕೊರಗ ಅಭಿವೃದ್ಧಿ ಹಾಗೂ ಸಂಶೋಧನ ಸಮಿತಿಯು ಎಲ್ಲಾ ಪರಿಷತ್ತಿನ ಮುಖ್ಯ ಕಾರ್ಯನಿರ್ವಾಹಣಾಧಿಕಾರಿಯ ಅಧ್ಯಕ್ಷತೆಯಲ್ಲಿ ಕನಿಷ್ಠ ತಿಂಗಳಿಗೊಮ್ಮೆ ಸಭೆ ಸೇರಿ ಕೊರಗ ಅಭಿವೃದ್ಧಿ ಕಾರ್ಯಕ್ರಮಗಳ ಸಮೀಕ್ಷೆ ನಡೆಸಬೇಕು. ಹಾಗೂ ಮುಂದಿನ ಯೋಜನೆಗಳ ರೂಪರೇಷೆಯನ್ನು ನಿರ್ಧರಿಸಬೇಕು.

ಕೊರಗ ಅಭಿವೃದ್ಧಿಗಾಗಿ ಡಾ. ಪೀರ್ ಮಹಮ್ಮದ್ ಸಮಿತಿ ಸೂಚಿಸಿರುವ ಪ್ರಮುಖ ಸೂಚನೆಗಳು ಹಾಗೂ ಕಾರ್ಯಕ್ರಮಗಳು.

೧. ಕೊರಗ ಪುನರ್ವಸತಿಗಾಗಿ ಭೂಮಿ ಕೊಂಡುಕೊಳ್ಳುವುದು, ಸ್ವಾಧೀನಪಡಿಸಿ ಕೊಳ್ಳುವುದು.

೨. ನೀರಾವರಿ ಸೌಲಭ್ಯ ಒದಗಿಸುವುದು.

೩. ಕೃಷಿ ಹಾಗೂ ತೋಟಗಾರಿಕಾ ಚಟುವಟಿಕೆಗಳು.

೪. ಸ್ವೋದ್ಯೋಗ.

೫. ಶಿಕ್ಷಣ.

೬. ಸಹಕಾರಿ ಸಂಘಗಳ ಸ್ಥಾಪನೆ.

೭. ಕೊರಗ ಕಲ್ಯಾಣ ಸ್ವಯಂಸೇವಾ ಸಂಘಗಳ ಸ್ಥಾಪನೆ.

೮. ಅಭಿವೃದ್ಧಿ ಕಾರ್ಯಕ್ರಮಗಳ ಬಗ್ಗೆ ಕೊರಗರಲ್ಲಿ ಅರಿವು ಮೂಡಿಸುವುದು.

೯. ಆರೋಗ್ಯದ ಬಗ್ಗೆ ಕಾಳಜಿ ಮೂಡಿಸುವುದು.

ಸಮಗ್ರ ಬುಡಕಟ್ಟು ಅಭಿವೃದ್ಧಿ ಅಧಿಕಾರಿಗಳ ಕೊರಗ ಕಲ್ಯಾಣ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಲು ಅನುಕೂಲವಾಗುವಂತೆ ಅವರಿಗೆ ಸರಕಾರ ಸಿಬ್ಬಂದಿಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಒದಗಿಸುವುದು ಅವಶ್ಯವೆಂದು ಕೊರಗ ಅಭಿವೃದ್ಧಿಯ

ಬಗ್ಗೆ ಕ್ರಿಯಾಯೋಜನೆಯನ್ನು ಸಿದ್ಧಪಡಿಸಿರುವ ಡಾ. ಪೀರ್ ಮಹಮ್ಮದ್ ತಮ್ಮ ವರದಿಯಲ್ಲಿ ಬರೆದಿದ್ದಾರೆ.

೧೯೯೪ರಲ್ಲಿ ಡಾ. ಪೀರ್ ಮಹಮದ್ ಅವರು ಸಿದ್ಧಪಡಿಸಿದ ವರದಿಯನ್ನು ಡಾ. ಎ.ವಿ. ನಾವಡ ಅವರು ಸಂಕ್ಷೇಪಿಸಿ ನೀಡಿರುವುದು ಗಮನಾರ್ಹ. ಅಂತೆಯೇ ಸುಮಾರು ೧೯ ಪ್ರಮುಖ ಅಂಶಗಳನ್ನು ಉಲ್ಲೇಖಿಸಿದ್ದು ಅದು ನಿಖರವಾಗಿ ಕಾರ್ಯಗತ ಗೊಂಡಿಲ್ಲವೆಂಬುದು ಪ್ರಮುಖ ಅಂಶ. ಅಂದರೆ, ಯಾವುದೂ ಕಾರ್ಯಗತವಾಗಿಲ್ಲವೆಂಬುದು ಅರ್ಥವಲ್ಲ. ಬಹುತೇಕ ಸೂಚಿತ ವರದಿ ಆಧಾರಿತ ಅಂಶಗಳು ಕಾರ್ಯ ರೂಪಕ್ಕೆ ಬರದಿರುವುದು ಅಧ್ಯಯನಗಳಿಂದ ಕಂಡುಬರುತ್ತದೆ.

ಇಂದು ಕೊರಗರಿಗೆ ಐಟಿಡಿಪಿ ಮೂಲಕ ಆಹಾರವನ್ನು ಪೂರೈಸಲಾಗುತ್ತಿದೆ. ಕೆಲವೊಮ್ಮೆ ಐಟಿಡಿಪಿಗಳು ಬಾಲವಾಡಿಗಳ ಮೂಲಕ ಕೊರಗರಿಗೆ ಆಹಾರ ಪದಾರ್ಥಗಳನ್ನು ಒದಗಿಸುತ್ತವೆ. ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಕೊರಗರಿಗೆ ದೊರೆಯುವ ಆಹಾರಗಳು ಹೀಗಿವೆ.

| ಕ್ರಸಂ. | ಆಹಾರ ಪದಾರ್ಥಗಳು | ಪ್ರಮಾಣ |
|---|---|---|
| ೧. | ಹೆಸರುಕಾಳು | ೨ ಕೆ.ಜಿ. |
| ೨. | ತೊಗರಿಬೇಳೆ | ೩ ಕೆ.ಜಿ |
| ೩. | ಹುರಿಳಿಕಾಳು | ೧ ಕೆ.ಜಿ. |
| ೪. | ಅಲಸಂದೆ ಕಾಳು | ೨ ಕೆ.ಜಿ. |
| ೫. | ಉದ್ದಿನಬೇಳೆ | ೧.೫ ಕೆ.ಜಿ. |
| ೬. | ಸೂರ್ಯಕಾಂತಿ ಎಣ್ಣೆ | ೨ ಲೀಟರ್ |
| ೭. | ಸಕ್ಕರೆ | ೨ ಕೆ.ಜಿ. |
| ೮. | ಬೆಲ್ಲ | ೨ ಕೆ.ಜಿ. |
| ೯. | ಕೋಳಿ ಮೊಟ್ಟೆ | ೪ |
| ೧೦. | ತುಪ್ಪ | ೧ ಕೆ.ಜಿ. |
| ೧೧. | ಅಕ್ಕಿ(ಕೊಚ್ಚಿಗೆ) | ೧೫ ಕೆ.ಜಿ. |

ಈ ಆಹಾರ ಧಾನ್ಯಗಳನ್ನು ವರ್ಷದಲ್ಲಿ ಆರು ತಿಂಗಳು ಮಾತ್ರ ಪೂರೈಸಲಾಗುತ್ತಿದೆ. ಪ್ರತಿ ತಿಂಗಳು ಕೊರಗರಿಗೆ ಇದನ್ನು ಪೂರೈಸಿದರೆ ಆಹಾರ ಭದ್ರತೆ ಅವರಿಗೆ ಒದಗಿಸಿದಂತಾಗುತ್ತದೆ.

**೪.೪. ಕೃಷಿ ಮತ್ತು ಭೂಮಿ**

ಇತ್ತೀಚಿನ ದಿನಗಳಲ್ಲಿ ಅಲ್ಪಸಂಖ್ಯಾತ ಕೊರಗರು ಕಡಿಮೆ ಪ್ರಮಾಣದಲ್ಲಿ ಕೃಷಿಭೂಮಿಯನ್ನು ಹೊಂದಿದ್ದಾರೆ. ಬೆರಳೆಣಿಕೆಯ ಕೊರಗರು ಬದಲಾದ ಕಾಲದಲ್ಲಿ ಸಣ್ಣಗಾತ್ರದ ಭೂಮಿಯನ್ನು ಹೊಂದಿರುವುದು ಬಿಟ್ಟರೆ ಬಹುತೇಕ ಕೊರಗರು ಜೋಪಡಿಯಂತಹ ಮನೆಗಳನ್ನು ಹೊಂದಿದ್ದಾರೆ. ವೃತಿಗಳನ್ನು ಗುಡಿಸಲು ಮನೆ ಎಂದು ಹೇಳುವುದು ಸರಿ. ಯಾವುದೇ ಕೃಷಿ, ವ್ಯವಸಾಯ, ಬೇಸಾಯ ಮಾಡುವಂಥ ಭೂಮಿಯನ್ನು ಕೊರಗರು ಹೊಂದಿಲ್ಲ. ಮೂಲನಿವಾಸಿಗಳೆಂದು ಕರೆಯಲ್ಪಡುವ ಕೊರಗರಿಗೆ ಆದಿಕಾಲದಿಂದಲೂ ಭೂಮಿ, ಜಮೀನು ಇಲ್ಲದಿರುವುದು ಆಶ್ಚರ್ಯವೇ ಸರಿ. ಕರಾವಳಿಯ ಬಹುತೇಕ ಸಮುದಾಯಗಳಿಗೆ ಅಲ್ಪಸ್ವಲ್ಪ ಜಮೀನು ಭೂಮಿ ಇದ್ದರೆ ಕೊರಗರಿಗೆ ಅದೂ ಇಲ್ಲವಾಗಿದೆ. ಈ ಹಿನ್ನೆಲೆಯಲ್ಲಿ ೧೯೮೮ರಿಂದ ಕೆಲವು ಸಂಘಟನೆಗಳೆಲ್ಲ ಸೇರಿ ಚರ್ಚಿಸಿ ಭೂಮಿಯನ್ನು ನೀಡಬೇಕೆಂಬ ಒತ್ತಾಯವನ್ನು ಸರ್ಕಾರಕ್ಕೆ ಮಾಡುತ್ತಾ ಬಂದವು. ಇದರ ಫಲವಾಗಿ ಸರಿಸುಮಾರು ೫೦೦ ಎಕರೆ ಭೂಮಿಯನ್ನು ಕೊರಗ ಮಹಿಳೆಯರ ಹೆಸರಿನಡಿಯಲ್ಲಿ ದೊರಕಿಸಿಕೊಳ್ಳಲು ಸಾಧ್ಯವಾಯಿತು. ನಿರಂತರ ಹೋರಾಟಗಳು ನಡೆದವು. ಭೂಮಿ ಒಂದೇಯಲ್ಲ, ಇತರೆ ಅಜಲು ಪದ್ಧತಿ, ಇನ್ನಿತರೆ ಅಮಾನವೀಯ ಪದ್ಧತಿಗಳನ್ನು ನಿಷೇಧಿಸುವಂತೆ ಸರ್ಕಾರಕ್ಕೆ ಮನವಿ ಸಲ್ಲಿಸಲಾಯಿತು. ಅದರಂತೆ ೨೦೦೦ನೇ ಇಸವಿಯಲ್ಲಿ ಅಜಲು ನಿಷೇಧ ಕಾಯಿದೆಯನ್ನು ಕರ್ನಾಟಕ ರಾಜ್ಯ ಸರ್ಕಾರ ಜಾರಿಗೊಳಿಸಿತು. ೨೦೦೦ ಇಸವಿಯಲ್ಲಿ ಸುಮಾರು ೫೦೦ ಕುಟುಂಬಗಳಿಗೆ ಭೂಮಿಯ ಹಕ್ಕನ್ನು ನೀಡಲಾಯಿತು.

ಅಧ್ಯಾಯ ಐದು

# ಕೊರಗ ಸಮುದಾಯದ ಸಮಸ್ಯೆಗಳು

೫.೧. ಭಾಷೆಯ ತೊಡಕು

೫.೨. ನಿರುದ್ಯೋಗ

೫.೩. ಅನುಷ್ಠಾನಗೊಳ್ಳದಿರುವ ಸರ್ಕಾರದ ಸವಲತ್ತುಗಳು

೫.೪. ಕ್ರಿಯಾತ್ಮಕ ಸಂಘಟನೆಯ ಕೊರತೆ

೫.೫. ಆರೋಗ್ಯ ಮತ್ತು ಶಿಕ್ಷಣ

೫.೬. ಸಾಮಾಜಿಕ ಸ್ಥಾನಮಾನಗಳು

ಅಧ್ಯಾಯ ಐದು

# ಕೊರಗರ ಸಮುದಾಯದ ಸಮಸ್ಯೆಗಳು

ನೂರಾರು ವರ್ಷಗಳಿಂದ ಮೂಲಭೂತ ಸೌಕರ್ಯಗಳಿಂದ ವಂಚಿತರಾದ ಕೊರಗರು ಕರಾವಳಿ ಕರ್ನಾಟಕದ ಇತರೆ ಸಮುದಾಯಗಳ ಅಭಿವೃದ್ಧಿ ದೃಷ್ಟಿಯಲ್ಲಿ ಇನ್ನು ಅತ್ಯಂತ ಕೆಳಮಟ್ಟದ ಜೀವನ ವ್ಯವಸ್ಥೆಯಲ್ಲಿ ಬದುಕುತ್ತಿದ್ದಾರೆ. ಪ್ರತಿಯೊಂದು ಕ್ಷೇತ್ರಗಳಲ್ಲೂ ಸಮಸ್ಯೆಗಳ ಸರಮಾಲೆಯನ್ನೇ ಕೊರಗರು ಧರಿಸಿಕೊಂಡಿದ್ದಾರೆ. ಆರಂಭದಿಂದಲೂ ಕಾಡು-ಕಾಡಂಚುಗಳಲ್ಲಿ ವಾಸವಾಗಿದ್ದ ಕೊರಗರು ಅಭಿವೃದ್ಧಿ ಎಂಬ ಮುಖ್ಯವಾಹಿನಿಗೆ ಬಂದೇ ಇಲ್ಲ. ಮೂಲತಃ ಆದಿಮ ಬುಡಕಟ್ಟುಗಳಲ್ಲಿ ಒಂದಾದ ಕೊರಗರಿಗೆ ಆಶೆ, ದುರಾಸೆ, ಅತಿಯಾದ ಆಕಾಂಕ್ಷೆಗಳಿಲ್ಲವೆಂದೇ ಹೇಳುತ್ತಾರೆ ವಿದ್ವಾಂಸರು. ಮಾನವೀಯತೆ, ಮುಗ್ಧತೆಯನ್ನೇ ಗುಣಸ್ವಭಾಗಳನ್ನಾಗಿಸಿಕೊಂಡಿರುವ ಕೊರಗರು ಅಲ್ಪತೃಪ್ತಿಯಲ್ಲಿಯೇ ದಿನ ಕಳೆದರು. ನಾಡಿನ ಶ್ರೀಮಂತರು, ಧನಿಕರು ನೀಡಿದ ಕಿರುಕುಳ, ಬೇಟೆಗಾರಿಕೆ, ಮೂಢನಂಬಿಕೆಗಳಿಂದ ಕೀಳರಿಮೆಗೆ ಒಳಗಾಗಿರುವುದನ್ನು ಗಮನಿಸಬಹುದು. ತಮ್ಮ ಪಾಡಿಗೆ ತಾವಿರುವ ಕೊರಗರು ಯಾರಿಗೂ ದ್ರೋಹ, ಅನ್ಯಾಯ ಬಗೆದವರಲ್ಲ. ತಮ್ಮ ಕುಲಕಸುಬಿನ ಮೂಲಕ ಮಾಡಿದ ಉತ್ಪನ್ನಗಳನ್ನು ಇತರರಿಂದ ದೂರವಾಗಿಯೇ ಉಳಿದವರು. ತಮ್ಮೆಲ್ಲ ರೋಗರುಜಿನಗಳನ್ನು ಕೊರಗರಿಗೆ ಹಸ್ತಾಂತರಿಸುವ ಮೇಲ್ವರ್ಗದವರಿಗೆ ತಾವು ಮತ್ತು ತಮ್ಮ ಮಕ್ಕಳು ಆರೋಗ್ಯದಿಂದರಬೇಕೆಂಬ ದುರಾಸೆ ಕೊರಗರಿಗಿಲ್ಲ. ಯಾವುದಕ್ಕೂ ಆಕ್ಷೇಪ ವ್ಯಕ್ತಪಡಿಸದ ಕೊರಗರು ಶ್ರೀಮಂತರು ಮಕ್ಕಳನ್ನು ಪಡೆದು, ಹಾಲುಣಿಸಿ, ಹೆಸರಿಡಿದು ಕೊಡುತ್ತಾರೆ. ತಮ್ಮ ಮಗುವಿಗೆ ಹಾಲುಣಿಸುವ ಸಂದರ್ಭದಲ್ಲಿ ಅಸ್ಪೃಶ್ಯತೆ, ಕೀಳುಜನ, ಕಪ್ಪು ಜನ ಎಂಬ

ಭಾವನೆಗಳಿರುವುದಿಲ್ಲ. ಆದರೆ ಇತರೆ ಸಂದರ್ಭಗಳಲ್ಲಿ ಕೊರಗರ ಬಗೆಗೆ ಒಳ್ಳೆಯ ಉತ್ತಮ ಅಭಿಪ್ರಾಯಗಳನ್ನು, ಮನೋಭಾವನೆಯನ್ನು ಯಾಕೆ ವ್ಯಕ್ತಪಡಿಸುತ್ತಿಲ್ಲ ಯಾಕೆ ಎಂಬುದೇ ಪ್ರಶ್ನೆ.

ಜೀತಗಾರಿಕೆ, ಅಜಲು ಪದ್ಧತಿ ಇತ್ಯಾದಿ ಅಮಾನುಷ ಪದ್ಧತಿಗಳು ನಿಂತುಹೋಗಿವೆ. ಸರಿ! ಆದರೆ ಇವರ ಸಮಸ್ಯೆಗಳಿಗೇನು ತಡೆಯಾಗಲಿಲ್ಲ. ಪರಿಹಾರ ಕಾಣಲಿಲ್ಲ. ಸರ್ಕಾರ, ಸಂಘಸಂಸ್ಥೆಗಳು ಬಂದು ನಮ್ಮೆಲ್ಲ ಸಮಸ್ಯೆಗಳನ್ನು ಪರಿಹರಿಸಿಕೊಡಿ ಎಂದು ಒತ್ತಾಯ ಮಾಡುತ್ತಿಲ್ಲ ಕೊರಗರು. ಅವರು ಕೇಳುತ್ತಿರುವುದು ಎಲ್ಲರಂತೆ ನಮ್ಮನ್ನು ಪರಿಗಣಿಸಿ, ಎಲ್ಲರಿಗೂ ಇರುವ ಹಕ್ಕು ಸೌಲಭ್ಯಗಳನ್ನು ನಮಗೂ ನೀಡಿ ಎಂಬುದಾಗಿ, ಶಿಕ್ಷಣ, ಉದ್ಯೋಗ, ವಸತಿ, ಭೂಮಿ ಇತ್ಯಾದಿಗಳನ್ನು ನಮಗೂ ನೀಡಿದರೆ ನಾವೂ ಎಲ್ಲರಂತೆ ಸ್ವಾಭಿಮಾನದಿಂದ ಬದುಕುತ್ತೇವೆ ಎಂದು ಕೇಳುತ್ತಿದ್ದಾರೆ. ಬೆವರು ಸುರಿಸಿ ದುಡಿಯಲು, ತಮ್ಮ ಕುಲಕಸುಬನ್ನು ಮುಂದುವರಿಸಲು ತಯಾರಿದ್ದಾರೆ ಕೊರಗರು ಅದಕ್ಕಾಗಿ ಸೂಕ್ತ ವೇದಿಕೆಯನ್ನು, ಬೆಲೆಯನ್ನು, ಪ್ರಚಾರವನ್ನು ದೊರಕಿಸಿಕೊಡಬೇಕೆಂದು ಕೇಳುತ್ತಿರುವುದರಲ್ಲಿ ತಪ್ಪೇನಿದೆ? ಕೊರಗರ ಎದುರಿಸುವ ಸಮಸ್ಯೆಗಳ ಸರಮಾಲೆಯನ್ನು ಗಮನಿಸೋಣ.

ಕೊರಗರಿಗಾಗಿ ಅನೇಕ ಯೋಜನೆಗಳನ್ನು ಸರ್ಕಾರ ಜಾರಿಗೆ ತಂದಿದೆ. ಭೂರಹಿತ ಕೊರಗರಿಗೆ ಉಚಿತ ಭೂಮಿ, ನಿವೇಶನ ಮಾಡಲಾಗುತ್ತದೆ. ಕೃಷಿಭೂಮಿ ಖರೀದಿಗೆ ಧನಸಹಾಯ ನೀಡಲಾಗುತ್ತಿದೆ. ಕೊರಗ ಮಹಿಳಾ ಸ್ವ-ಸಹಾಯ ಸಂಘಗಳಿಗೆ ವಿವಿಧ ಸ್ವ ಉದ್ಯೋಗಗಳನ್ನು ಕೈಗೊಳ್ಳಲು ಒಂದು ಲಕ್ಷ ರೂ. ಗಳ ಸಹಾಯಧನವನ್ನು ಸರ್ಕಾರ ನೀಡುತ್ತವೆ. ಹಾಗೆಯೇ ಆಡು, ದನ, ಕೋಳಿ ಸಾಕಾಣಿಕೆಗೆ ಧನಸಹಾಯ ನೀಡಲಾಗುತ್ತದೆ. ಮಲ್ಲಿಗೆ, ಬಾಳೆ, ಮಾವು ಇತ್ಯಾದಿ ಬೆಳೆಗಳನ್ನು ಬೆಳೆಯಲು ಸಲೂನ್, ಗ್ಯಾರೇಜ್, ಜೆರಾಕ್ಸ್ ಅಂಗಡಿಗಳನ್ನು ತೆರೆಯಲು ಸಹಾಯಧನವನ್ನು ನೀಡುವ ಯೋಜನೆಗಳಿವೆ. ಪೌಷ್ಠಿಕ ಆಹಾರ ವಿತರಿಸಲು ಅಂಗನವಾಡಿಗಳ ಮೂಲಕ ಯೋಜನೆಯೊಂದನ್ನು ಸರ್ಕಾರ ರೂಪಿಸಿದೆ. ಆ ಯೋಜನೆ ಮೂಲಕ ಪೌಷ್ಠಿಕ ಆಹಾರಗಳಾದ ಹೆಸರುಕಾಳು, ರಾಗಿ, ಮೊಟ್ಟೆ, ಬೆಲ್ಲ ಇನ್ನಿತರ ಆಹಾರಗಳನ್ನು ಕೊರಗ ಮಕ್ಕಳಿಗೆ ವಿತರಿಸಲಾಗುತ್ತದೆ. ಶಿಕ್ಷಣದ ಮಟ್ಟವನ್ನು ಹೆಚ್ಚಿಸುವ ಸಲುವಾಗಿ ಉನ್ನತ ಶಿಕ್ಷಣದವರೆಗಿನ ಕೊರಗ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನವನ್ನು ನೀಡಲಾಗುತ್ತದೆ.

ಅತ್ಯಂತ ಕೆಳಮಟ್ಟದಲ್ಲಿ ಜೀವನ ನಡೆಸುತ್ತಿದ್ದ ಕೊರಗರಿಗೆ ಸರ್ಕಾರ ಅನೇಕ ಯೋಜನೆಗಳನ್ನು ಜಾರಿಗೊಳಿಸಿರುವುದರಿಂದ ಕೊರಗರಲ್ಲಿ ಬದಲಾವಣೆಗಳಾಗಿರುವುದನ್ನು ಒಪ್ಪಿಕೊಳ್ಳಬೇಕು. ಈ ಮೇಲ್ಕಾಣಿಸಿದ ಯೋಜನೆಗಳಲ್ಲದೆ ಇನ್ನೂ ಅನೇಕ ಸರ್ಕಾರದ ಯೋಜನೆಗಳು ಕೊರಗ ಬುಡಕಟ್ಟುಗಳಿಗಾಗಿಯೇ ಇದೆ. ಆದರೆ ಎಲ್ಲವೂ ಸಮರ್ಪಕವಾಗಿ ಅನುಷ್ಠಾನಗೊಳ್ಳುವುದರಲ್ಲಿ ಸಮಸ್ಯೆಗಳಾಗಿರುವುದು ಕಂಡುಬರುತ್ತದೆ. ಕೊರಗರಿಗಾಗಿ ಆಶ್ರಮಶಾಲೆಗಳನ್ನು ಸರ್ಕಾರ ತೆರೆದಿದೆ. ಇತರೆ ಎಲ್ಲಾ ಪ್ರದೇಶಗಳಲ್ಲಿ ಕೊರಗ ಮಕ್ಕಳಿಗೆ ವಿದ್ಯಾರ್ಥಿ ವೇತನವನ್ನು ನೀಡಿ ಶಿಕ್ಷಣ ಮುಂದುವರಿಸುವಂತೆ ಪ್ರೋತ್ಸಾಹಿಸಲಾಗುತ್ತದೆ. ಸರ್ಕಾರದ ಯೋಜನೆಗಳನ್ನು ಸಮರ್ಪಕವಾಗಿ ಬಳಸಿಕೊಳ್ಳುವಂತಾಗಲು ಕೊರಗರೂ ಶ್ರಮಿಸಬೇಕು. ಕಾರಣ ಅವ್ಯವಹಾರಗಳ ಮೂಲಕ ಅಧಿಕಾರಿ ವರ್ಗಗಳಲ್ಲಿಯೇ ಯೋಜನೆಗಳು ನಡೆದು ಫಲಾನುಭವಿಗಳಿಗೆ ಯಾವುದೆ ರೀತಿಯಲ್ಲಿ ಅನುಕೂಲವಾಗಿಲ್ಲ ಎಂಬುದನ್ನು ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಅಂಕಿ ಅಂಶಗಳೇ ತಿಳಿಸುತ್ತವೆ. ಶಿಕ್ಷಣ ಪಡೆದ ವಿದ್ಯಾವಂತ, ಜಾಗ್ರತ ಕೊರಗ ಯುವಕರು ಯೋಜನೆಗಳ ಅನುಷ್ಠಾನಗಳ ಬಗೆಗೆ ಪ್ರಶ್ನಿಸುವಂತಾಗಬೇಕು. ತಮ್ಮ ಹಕ್ಕುಗಳನ್ನು, ತಮಗಿರುವ ಯೋಜನೆಗಳನ್ನು ಒತ್ತಾಯ ಪೂರ್ವಕವಾಗಿ ಸದುಪಯೋಗಪಡಿಸಿಕೊಳ್ಳುವಂಥದ್ದೇ ಆದರೆ ಅಭಿವೃದ್ಧಿ ಮರೀಚಿಕೆ ಯಾಗಲಾರದು.

ತಾಂತ್ರಿಕ-ತಂತ್ರಜ್ಞಾನದ ಯುಗವೆಂದು ಕರೆಯಲ್ಪಡುವ ಇಂದಿನ ದಿನಮಾನಗಳಲ್ಲೂ ಅಸ್ಪೃಶ್ಯತೆ, ಅಮಾನವೀಯ ಪದ್ಧತಿಗಳು ಉಳಿದುಕೊಂಡು ಬಂದಿವೆ ಎಂದರೆ ನಮ್ಮ ಸಮಾಜದ ಮನೋಭಾವನೆಯ ಬಗೆಗೆ ಅರ್ಥವಾಗುತ್ತದೆ. ಯಾರೂ ಮೇಲಲ್ಲ ಯಾರೂ ಕೀಳಲ್ಲ ಎಂಬ ಸಮಾನತೆ ದೃಢವಾಗಲು ಹೆಚ್ಚು ಸಮಯ ಬೇಕಾಗಿಲ್ಲದ ಈ ದಿನಮಾನಗಳಲ್ಲಿ ಕಾನೂನು ಕಠಿಣ ರೀತಿಯಲ್ಲಿ ಜಾರಿಯಾಗಬೇಕಾಗಿದೆ. ಅಸ್ಪೃಶ್ಯತೆ ಕಂಡುಬಂದಲ್ಲಿ ಅತ್ಯಂತ ಕಠಿಣ ಶಿಕ್ಷೆಗೆ ಗುರಿಪಡಿಸಿದರೆ ಇತರರ ಕಣ್ಣು ತೆರೆಯಲು ಸಾಧ್ಯ.

**೫.೧. ಭಾಷೆಯ ತೊಡಕು**

ಜಗತ್ತಿನ ಸಕಲ ಜೀವರಾಶಿಗಳಲ್ಲಿ ಮನುಷ್ಯ ಪ್ರತ್ಯೇಕವಾಗಿ ಗುರುತಿಸಲ್ಪಟ್ಟಿರುವುದು ಭಾಷೆ ಮತ್ತು ಬುದ್ಧಿವಂತಿಕೆಗಳಿಂದ. ಭಾವನೆಗಳನ್ನು ಭಾಷೆಗಳ ಮೂಲಕ ಅತ್ಯುತ್ತಮವಾಗಿ ಸಂವಹಿಸಬಲ್ಲ ಮಾನವನ ಶಕ್ತಿ ಇತರೆ ಯಾವುದೇ ಜೀವಿಗಳಲ್ಲಿಲ್ಲ. ಪ್ರತಿಯೊಂದು ಭಾಷೆಗೂ ತನ್ನದೇ ಆದಂಥ ಚರಿತ್ರೆ ಇದೆ. ಮಾತನಾಡುವ ಸಂಖ್ಯೆ ಎಷ್ಟೇ ಚಿಕ್ಕದಾಗಿದ್ದರೂ

ಅದರದೇ ಆದ ಭಾಷಾ ವೈಶಿಷ್ಟ್ಯತೆಯನ್ನು, ಗುಣಲಕ್ಷಣಗಳನ್ನು ಭಾಷೆಗಳು ಹೊಂದಿರುತ್ತವೆ. ಯಾವ ಭಾಷೆಯೂ ಮೇಲಲ್ಲ, ಯಾವ ಭಾಷೆಯೂ ಕೀಳಲ್ಲ. ಪ್ರತಿಯೊಂದು ಭಾಷೆಗೂ ಅದರದೇ ಆದಂಥ ಸ್ಥಾನಮಾನ, ಗೌರವಗಳಿವೆ. ಕೊರಗರ ಕೊರಗ ಭಾಷೆಯೂ ಇದಕ್ಕೆ ಹೊರತಾಗಿಲ್ಲ. ಕೊರಗ ಭಾಷೆಯಲ್ಲೂ ಪ್ರಾದೇಶಿಕ ಭಿನ್ನತೆಗಳಿವೆ. ಭಾಷಾತಜ್ಞರ ಪ್ರಕಾರ ಪ್ರತಿಯೊಂದು ಭಾಷೆಯಲ್ಲೂ ೨೦ ಕಿ.ಮೀ. ದೂರಕ್ಕೆ ವ್ಯತ್ಯಾಸಗಳು ಕಂಡುಬರುತ್ತವೆ. ಈ ಹಿನ್ನೆಲೆಯಲ್ಲಿಯೂ ಕರಾವಳಿ ಕರ್ನಾಟಕದ ಕೊರಗ ಭಾಷೆ ಉತ್ತರದ ಕುಂದಾಪುರದಿಂದ ಹಿಡಿದು ದಕ್ಷಿಣದ ಕಾಸರಗೋಡು(ಕೇರಳ) ತನಕ ಭಿನ್ನತೆಯಿಂದ ಕೂಡಿರುವುದನ್ನು ಕಾಣಬಹುದು.

ನಮ್ಮದು ಪೊಟ್ಟು ಭಾಷೆ(ಕೆಟ್ಟು ಹೋದ ಭಾಷೆ) ಎಂದು ಕೊರಗರು ತಮ್ಮ ಭಾಷೆಯ ಬಗೆಗೆ ಹೇಳುತ್ತಾರೆಂದು ಅನೇಕ ಅಧ್ಯಯನಕಾರರು ಉಲ್ಲೇಖಿಸುತ್ತಾರೆ. ಯಾವುದೇ ಭಾಷೆಯನ್ನು ಮಾತನಾಡುವ ಜನರು ತಮ್ಮ ಭಾಷೆಯನ್ನು ಕೀಳು, ಸತ್ತುಹೋದ ಭಾಷೆ ಎಂಬುದಾಗಿ ವ್ಯಾಖ್ಯಾನಿಸಲು ಇಷ್ಟಪಡಲಾರರು ಕೊರಗರು ಪೊಟ್ಟು ಭಾಷೆ ಎಂದು ಯಾಕೆ ಹೇಳುತ್ತಾರೋ ತಿಳಿದಿಲ್ಲ.

ಈ ರೀತಿಯ ಕೀಳರಿಮೆಯೇ ಭಾಷೆಯ ಅವನತಿಗೆ ಒಂದು ಕಾರಣವಾಗಿರಲೂ ಸಾಧ್ಯವಿದೆ. ಇಲ್ಲಿ ಭಾಷೆಯ ತೊಡಕು ಎಂಬುದಾಗಿ ಅರ್ಥೈಸುವುದರ ಹಿಂದೆ ಕರಾವಳಿಯ ಇತರೆ ಭಾಷೆಗಳ ಪ್ರಭಾವ ಮತ್ತು ಕೊರಗರ ದೃಷ್ಟಿಕೋನ, ಅಭಿಮಾನದ ಪ್ರಶ್ನೆ ಅಡಗಿದೆ. ಭಾಷೆಗಳ ಆಡುಂಬೋಲವೆಂದು ಮರಿಯಪ್ಪ ಭಟ್ಟರಿಂದ ಕರೆಯಲ್ಪಟ್ಟ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ ಭಾಷೆಗಳ ಮಧ್ಯೆ ತನ್ನತನವನ್ನು ಉಳಿಸಿಕೊಳ್ಳುವಲ್ಲಿ ಕೊರಗ ಭಾಷೆ ಎಡವಿತು ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಹೆಜ್ಜೆ ಹೆಜ್ಜೆಗೂ ಒಂದೊಂದು ವಿಭಿನ್ನ ಭಾಷೆಗಳಿರುವ ಪರಿಸರದಲ್ಲಿ ಅಲ್ಪಸಂಖ್ಯಾತ, ಅಸ್ಪೃಶ್ಯರು ಎಂದು ಗುರುತಿಸಿದ ಕೊರಗರ ಕೊರಗ ಭಾಷೆಯಲ್ಲಿಯೇ ವ್ಯವಹರಿಸುವುದು ಕಷ್ಟಸಾಧ್ಯ.

ಕೊರಗರಿಗೆ ಭಾಷೆಯ ತೊಡಕು ಎಂಬುದನ್ನು ಸೂಕ್ಷ್ಮವಾಗಿ ಗ್ರಹಿಸಲು ಸಾಧ್ಯವಿದೆ. ಭಾಷೆಯ ತೊಡಕು ಕರಾವಳಿ ಪ್ರದೇಶದ ಇತರೆ ಅಲ್ಪಸಂಖ್ಯಾತ ಸಮುದಾಯಗಳಲ್ಲೂ ಕಾಣಬಹುದು. ಕೊರಗ ಭಾಷೆ ಹೇಗೆ ಅವನತಿಯತ್ತ ಮುಖ ಮಾಡಿದೆಯೋ ಹಾಗೆಯೇ ಮರಾಟಿ ನಾಯ್ಕರ ಮರಾಠಿ ಭಾಷೆಯೂ ಅನವತಿಯತ್ತ ಸಾಗಿದೆ. ಕರಾವಳಿ ಪ್ರದೇಶದಲ್ಲಿ ಪ್ರತಿಯೊಂದು ಸಮುದಾಯಗಳೂ ತನ್ನದೇ ಆದ ಭಾಷೆಯನ್ನು ಹೊಂದಿವೆ. ಮನ್ಸ,

ಮೋರ ಮಲೆಕುಡಿಯ ಹೀಗೆ ಇವರೆಲ್ಲರ ಭಾಷೆಯೂ ಬೇರೆ ಬೇರೆ. ಶಾಲಾ, ಕಾಲೇಜುಗಳಲ್ಲಿ ಈ ಸಮುದಾಯದ ವಿದ್ಯಾರ್ಥಿಗಳು ತಮ್ಮ ಭಾಷೆಯಲ್ಲಿ ಮಾತನಾಡಿದರೆ ಇತರೆ ಬಹುಸಂಖ್ಯಾತ ವಿದ್ಯಾರ್ಥಿಗಳು ಗೇಲಿ ಮಾಡುತ್ತಾರೆ. ಅಪಹಾಸ್ಯ ಮಾಡುತ್ತಾರೆ. ಹಾಗಾಗಿ ಅವರು ಅಪ್ಪಿತಪ್ಪಿಯೂ ತಮ್ಮ ಭಾಷಾ ಪ್ರಯೋಗಕ್ಕೆ ಇಳಿಯುವುದೇ ಇಲ್ಲ. ಕ್ರಮೇಣ ತಮ್ಮ ಮಾತೃಭಾಷೆಯನ್ನೇ ಮರೆಯುತ್ತಾರೆ. ಸರ್ಕಾರದ ಕಚೇರಿಗಳಲ್ಲಿ ಭಾಷೆಯ ಮೂಲಕವೇ ಗುರುತಿಸಿ ಅಸಡ್ಡೆ ತೋರಿಸಲಾಗುತ್ತೆ. ಇದರಿಂದ ಕೀಳರಿಮೆಗೆ ಒಳಗಾಗುವುದರಲ್ಲಿ ಸಂಶಯವಿಲ್ಲ.

ಮನೆಯೊಳಗೆ ಕೊರಗರು ತಮ್ಮ ಮಾತೃಭಾಷೆಯನ್ನು ಮಾತನಾಡಿದರೂ ಹೊರಗಡೆ ತುಳು, ಕನ್ನಡ ಮತ್ತು ಇತರೆ ಭಾಷೆಗಳಲ್ಲಿಯೇ ವ್ಯವಹರಿಸಬೇಕಾಗುತ್ತದೆ. ತಮ್ಮ ಭಾಷೆಯನ್ನು ಗೇಲಿ ಮಾಡುವ ಜನರ ಮಧ್ಯೆ ಮಾತನಾಡಲು ಹಿಂಜರಿಯುತ್ತಾರೆ. ಹಿರಿಯ ತಲೆಮಾರಿನ ಕೊರಗರು ಇತರೆ ಸಮುದಾಯದವರ ಡೊತೆ ವ್ಯವಹರಿಸುವುದು ಅತ್ಯಂತ ಕಡಿಮೆ ಪ್ರಮಾಣದಲ್ಲಿ. ಹಾಗಾಗಿ ಹೊರಗಡೆ ವ್ಯವಹರಿಸುವುದು ಸಾಧ್ಯವಿಲ್ಲದಂತಹ ಸನ್ನಿವೇಶದಿಂದಾಗಿ ಯಾವುದೇ ಸವಲತ್ತುಗಳನ್ನು ಪಡೆಯಲು ಸಾಧ್ಯವಾಗಲಿಲ್ಲ. ಒಂದು ರೀತಿಯಲ್ಲಿ ಮಾತೃಭಾಷೆಯಲ್ಲಿ ವ್ಯವಹರಿಸಲು ಕೊರಗರಿಗೆ ಕಷ್ಟವಾಗಿದೆ. ಇತ್ತೀಚಿನ ಯುವಪೀಳಿಗೆ ಶಿಕ್ಷಣವನ್ನು ಪಡೆಯುತ್ತಿರುವುದರಿಂದ ಒಂದು ಕಡೆ ತಮ್ಮ ಮಾತೃಭಾಷೆಯನ್ನು ಮರೆತರೆ ಮತ್ತೊಂದು ಕಡೆ ಮೂಲಭೂತ ಅವಶ್ಯಕತೆಗಳನ್ನು ಪಡೆಯುವಲ್ಲಿ ಅಲ್ಪಪ್ರಮಾಣದಲ್ಲಿ ಸಫಲರಾಗುತ್ತಿದ್ದಾರೆ.

ಯಾವುದೇ ಒಂದು ಬಹುಸಂಖ್ಯಾತ ಭಾಷೆ ಅಲ್ಪಸಂಖ್ಯಾತ ಅಥವಾ ಕಡಿಮೆ ಪ್ರಮಾಮದಲ್ಲಿ ಮಾತನಾಡುವ ಭಾಷೆಯ ಮೇಲೆ ತನ್ನ ಪ್ರಭುತ್ವವನ್ನು ಹೇರುತ್ತದೆ. ಇದು ಎಲ್ಲ ವಿಚಾರಗಳಲ್ಲೂ ಸರ್ವೇಸಾಮಾನ್ಯ ಎಂದು ಹೇಳಬಹುದು. ಅದರ ಮೂಲಕವೇ ಅವಸಾನದ ಅಂಚನ್ನ ತಲುಪುವುದನ್ನು ಬೇರೆ ಬೇರೆ ಕ್ಷೇತ್ರಗಳಲ್ಲಿ ಕಾಣುತ್ತೇವೆ. ಈ ಮಾತು ಕೊರಗ ಭಾಷೆಗೂ ಅನ್ವಯಿಸುತ್ತದೆ. ಕರಾವಳಿ ಕರ್ನಾಟಕ ಭಾಷೆಗಳ ಆಡುಂಬೋಲ ವಾಗಿದ್ದರೂ ಅತ್ಯಂತ ಕಡಿಮೆ ಜನಸಂಖ್ಯೆಯ ಮಾತೃಭಾಷೆ ಕೊರಗ ಇತರೆ ಬಹುಸಂಖ್ಯಾತ ಭಾಷೆಗಳ ಎದುರು ಪೈಪೋಟಿ ನಡೆಸಿ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳುವುದು ಅಷ್ಟು ಸುಲಭ ಸಾಧ್ಯವಲ್ಲ. ಇತರೆ ಕೆಲವೊಂದು ಭಾಷೆಗಳಿಗೂ ಅನ್ವಯವಾಗುತ್ತದೆ. ಅಸ್ಪೃಶ್ಯರಲ್ಲಿ ಅಸ್ಪೃಶ್ಯರಂತೆ ಕೊರಗರನ್ನು ಕಂಡ ಸಮಾಜ ಅವರ ಭಾಷೆಯನ್ನು ಗೌರವಿಸುತ್ತದೆ. ಉನ್ನತಿ ಗೇರಿಸುತ್ತದೆ ಎಂಬ ಮಾತಿನಲ್ಲಿ ಸತ್ಯಾಂಶವಿಲ್ಲ.

ದಿನನಿತ್ಯದ ಕೆಲಸಕಾರ್ಯಗಳಲ್ಲಿ ಕೊರಗರು ಇತರೆ ಸಮುದಾಯದವರೊಟ್ಟಿಗೆ ಬೆರೆತಾಗ ತಮ್ಮ ಮಾತೃಭಾಷೆಯಲ್ಲಿ ಮಾತನಾಡುತ್ತಾರೆ. ಈ ಸಂದರ್ಭದಲ್ಲಿ ಇತರೆ ಸಮುದಾಯದವರ ಗೇಲಿಗೆ ಒಳಗಾಗುತ್ತಾರೆ. ಅಲ್ಲಿ ಒಂದು ರೀತಿಯ ಭಾಷಾ ಕೀಳರಿಮೆ ಉಂಟಾಗುತ್ತದೆ. ಇನ್ನೊಂದು ಸಾರಿ ತಮ್ಮ ಮಾತೃಭಾಷೆಯಲ್ಲಿ ಮಾತನಾಡಲು ಹಿಂಜರಿಕೆ ವ್ಯಕ್ತಪಡಿಸುತ್ತಾರೆ. ಕೊರಗ ಭಾಷೆಯಲ್ಲಿರುವ ಶಬ್ದಗಳನ್ನು ಇಲ್ಲಿ ನೀಡಲಾಗಿದ್ದು ಅವುಗಳ ಮೂಲಕ ಭಾಷಾ ವೈರುಧ್ಯಗಳನ್ನು ಕಾಣಬಹುದಾಗಿದೆ.

| ಕೊರಗ ಭಾಷೆ (ಉಡುಪಿ) | ಕೊರಗ ಭಾಷೆ (ದ.ಕನ್ನಡ) | ಕನ್ನಡ ಭಾಷೆ |
|---|---|---|
| **ಸರ್ವನಾಮಗಳು** | | |
| ಯಾನ್ | ಅನ | ನಾನು |
| ಅಕುಲ್ | ಅಕ್ಲ | ಅವರು |
| ಆಯೆ | ಆಯಿ | ಅವನು |
| ಅದ್ | ಅದ್ | ಅವಳು |
| ಎಂಕುಲ್ | ಅಂಬೆರ್ | ನಾವು |
| ಅದ್ | ಅದ್ | ಅದು |
| ಅಂಗ್ | ಯಂಗ | ನನಗೆ |
| **ಸಂಬಂಧವಾಚಕಗಳು** | | |
| ಅಮ್ಮೆ | ಕೊಡ್ತಾಯಿ | ತಂದೆ |
| ಅಪ್ಪೆ | ಕೊಡ್ತಾಡ್ | ತಾಯಿ |
| ಮಗೆ | ಕುಜೆ | ಮಗ |
| ಮಗಲ್ | ಕುಜಿ | ಮಗಳು |
| ಕೊರಾಯಿ | ಕೊರಯೆ | ಪತಿ |
| ಕೊರ್ತಿ | ಕೊರ್ತಿ | ಪತ್ನಿ |
| **ಅಂಗವಾಚಕಗಳು** | | |
| ಕಣ್ | ಕಣ್ | ಕಣ್ಣು |
| ಮಂಡೆ | ತಲೆ | ತಲೆ |
| ಕೆಬಿ | ಕೆಬಿ | ಕಿವಿ |

| | | |
|---|---|---|
| ಕೂಲಿ | ಕೂಲಿ | ಹಲ್ಲು |
| ಕಾರ್ | ಕಾರ್ | ಕಾಲು |
| ಕೈ | ಕೈ | ಕೈ |
| ಮೂಕು | ಮುಗ | ಮೂಗು |
| ಬಿರೆಲ್ | ಬಿರೆಲುಲು | ಬೆರಳು |
| **ಪದಾರ್ಥ** | | |
| ಅರಿ | ಅರಿ | ಅಕ್ಕಿ |
| ನೀರ್ | ನೀರ್ | ನೀರು |
| ತಿನ್ನಡ | ಹರ | ಆಹಾರ |
| **ಸಂಖ್ಯಾವಾಚಕ** | | |
| ಒಂಜಿ | ವರ | ಒಂದು |
| ರಡ್ಡ್ | ರಡ್ಡ್ | ಎರಡು |
| ಮೂಜಿ | ಮೂಜಿ | ಮೂರು |
| ನಾಲ್ | ನಾಲ್ | ನಾಲ್ಕು |
| ಐನ್ | ಐನ್ | ಐದು |
| ಆಜಿ | ಆಜಿ | ಆರು |
| ಏಲ | ಏಲ | ಏಳು |
| ಎಲ್ಮ | ಎಲ್ಮೊ | ಎಂಟು |
| ಒರ್ಂಬ | ಒರ್ಂಬೊ | ಒಂಬತ್ತು |
| ಪತ್ತ | ಪತ್ತ | ಹತ್ತು |
| ಇರ್ವೊ | ಇರ್ವ | ಇಪ್ಪತ್ತು |
| ಮುಪ್ಪೊ | ನುಪ್ಪ | ಮೂವತ್ತು |
| ನಲ್ಪೊ | ನಲ್ಪ | ನಲವತ್ತು |
| ಐವೊ | ಐವ | ಐವತ್ತು |
| ಅಜ್ಪೊ | ಅಜ್ಪ | ಆರವತ್ತು |
| ಎಲ್ಪೊ | ಎಲ್ಪ | ಎಪ್ಪತ್ತು |

| | | |
|---|---|---|
| ಎನ್ಸೊ | ಎನ್ಪ | ಎಂಭತ್ತು |
| ಸೊನ್ಪೊ | ಸೊನ್ಪ | ತೊಂಭತ್ತು |
| ನೂದು | ನೂದು | ನೂರು |
| ಸವಿರಾ | ಸವಿರಾ | ಸಾವಿರ |
| **ನಾಮಪದ** | | |
| ಪೆತ್ತ | ಪೆತ್ತ | ಆಕಳು |
| ಬೋರಿ | ಬೋರಿ | ಎತ್ತು |
| ಕಂಜಿ | ಕಂಜಿ | ಕರು |
| ನಾಯ್ | ನಾಯರ್ | ನಾಯಿ |
| ಪುಚ್ಚೆ | ಪುಚ್ಚೆ | ಬೆಕ್ಕು |
| ಪೊರ್ತು | ದೇವೆರ್ | ಸೂರ್ಯ |
| ತಿಂಗಲ್ ದೇವೆರ್ | ತಿಂಗೊಲ್ | ಚಂದ್ರ |
| ದಾರೆ | ದರಯೋ | ನಕ್ಷತ್ರ |
| ಬಾನ್ | ಅಕ್ಕಸ | ಆಕಾಶ |
| **ಕ್ರಿಯಾಪದ** | | |
| ಅಕಿಲ್‌ಬತ್ತಿದ್ | ಅಕಲ್‌ನ ಬನ್ನೆರ್ | ಅವರು ಬಂದರು |
| ಪಾರ್ | ಪಾರ್ | ಓಡು |
| ಪೊನೆ | ಪೊನೆ | ಹೋದರು |
| ಗೆರ್ಪ | ದೆರ್ಪದ | ಅದನ್ನು ಎತ್ತು |
| ನಡವು | ನಡ | ನಡೆದುಕೊಂಡು ಹೋಗು |
| **ಸಾಮಾನ್ಯ ಪದಗಳು** | | |
| ಕುಂಟು | ನರಮನಿಕುಂಟು | ಪುರುಷ ಬಟ್ಟೆ |
| ಶೀರೆ | ಕೊಡೆದೆನಕುಂಟು | ಮಹಿಳೆಯರ ಬಟ್ಟೆ |
| ಮರ್ಗಿ | ಕಾಜಿ | ಬಳೆ |
| ಕಡ್‌ಸೆಲೆ | ಕಡ್‌ಸಲೆ | ಖಡ್ಗ |
| ಬಾಕಿಲ್ | ಬಾಕಿಲ್ | ಬಾಗಿಲು |

| | | |
|---|---|---|
| ಗಿರಾಮ | ಊರು | ಹಳ್ಳಿ |
| ಬಿಸಾತಿ | ಕತ್ತಿ | ಚೂರಿ |
| ಮಾಡ್ | ಮಾಡ್ | ಮಾಡು |
| ಮುಕೊಡೆ | ಕಂಚ | ಹಂದಿ |
| ಪಕ್ಕಿ | ಪಕ್ಕಿ | ಹಕ್ಕಿ |
| ಕೊಡೋಲ್ | ಕಕ್ಕೆ | ಕಾಗೆ |
| ಕೊಡ್ತಾಯಿ | ತೊಕ್ರಕೊಡ್ತಾಯಿ | ಹುಲಿ |
| ಆನೆ | ಆನೆ | ಆನೆ |
| ಎಡ್ಡೆಂತಿನಾವ್ | ಪರಪುನಾವ್ | ಹಾವು |
| ಹೊಯ್‌ಪರ್ | ಪಿಜಿನ್ | ಇರುವೆ |
| ಕೆಡಾಂಗ್ | ಮಂಗೆ | ಮಂಗ |
| ಕಾಡ್ | ತೊಕ್ರ | ಕಾಡು |
| ಪಾ | ಪೂ | ಹೂವು |
| ಇರೆ | ಇರೆ | ಎಲೆ |
| ಪಜಿರ್ | ಪಜಿರ್ | ಹುಲ್ಲು |
| ಮರ್ರೆ | ಮರೆ | ಮಳೆ |
| ತುದೆ | ತುದೆ | ನದಿ |
| ಕಡಲ್ | ಕಡಲ್ | ಸರೋವರ |
| ತಾದಿ | ತಾದಿ | ದಾರಿ |
| ತ್ತೆತ್ತಿ | ಕೋರಿತೆತ್ತಿ | ಮೊಟ್ಟೆ |
| ಚೊರ್ | ಚೊರ್ | ಇಂದು |
| ಎಲ್ಲೆ | ಎಲ್ಲೆ | ನಾಳೆ |
| ಎದ್ರು | ಎರು | ನಿನ್ನೆ |
| ಎಡ್ಡೆ | ಎಡ್ಡೆ | ಒಳ್ಳೆಯದು |
| ದಾನೆದೆಡ್ಡಿ | ಪಡ್ಕೆ | ಕೆಟ್ಟದ್ದು |
| ಪೊರ್ಲ | ಪೊರ್ಲು | ಸುಂದರ |

**ವಾರಗಳು**

| | | |
|---|---|---|
| ಐತಾರ | ಐತಾರ | ಆದಿತ್ಯವಾರ |
| ಸೋಮಾರ | ಸೋಮಾರ | ಸೋಮವಾರ |
| ಅಂಗಾರೆ | ಅಂಗಾರೆ | ಮಂಗಳವಾರ |
| ಬುಧಾರ | ಬುಧಾರ | ಬುಧವಾರ |
| ಗುರ್‍ರವರ | ಗುರ್‍ರವರ | ಗುರುವಾರ |
| ಶುಕ್ರಾರ | ಶುಕ್ರಾರ | ಶುಕ್ರವಾರ |
| ಶನಿಯಾರ | ಶನಿಯಾರ | ಶನಿವಾರ |

**ಸಾಮಾನ್ಯವಾಗಿ ಬಳಸುವ ಪದಗಳು**

| | | |
|---|---|---|
| ನಿನ್ನ ಪುದರ್ ಎಂತವು? | ನಿಂಬೆರೆಪುದರಂ ಎಂತವು? | ನಿನ್ನ ಹೆಸರೇನು? |
| ಯಾನ್ ಕೆದುಪು ಪೋದು ನಿರ್ ಕಲೆನೆ | ಯಾನ್ ಕೆದುಪು ಪೊ ಕೈ ನೀರ್ ಕಲೆಕೆ | ನಾನು ನದಿಗೆ ತೆರಳಿ ನೀರು ತಂದೇನು |
| ಆಯೆ ಕೊರ್ತಿ ಬನ್ಯಡ್ | ಆಯೆ ಕೊರ್ತಿ ಪೊತ್ತೆದಾರ್ | ಅವನ ಹೆಂಡತಿಗರ್ಭಿಣಿ |
| ಆನ್ ಕೈತಡ್ ಬರಬಡ್ | ಈ ಎನ್ನ ಕೈತಲ್ ಬರಬದಂಜಿ | ನೀನು ನನ್ನ ಹತ್ತಿರ ಬರಬೇಡ |
| ನಂಗ್ ಬದಾಂಡ್ | ಅಂಗ ಬಡವಂದ್ | ನನಗೆ ಹಸಿವು ಆಗುತ್ತಿದೆ. |

### ೫.೨. ನಿರುದ್ಯೋಗ

ಆದಿಮ ಬುಡಕಟ್ಟು ಎಂದು ಗುರುತಿಸಲ್ಪಟ್ಟಿರುವ ಕೊರಗರಿಗೆ ತಮ್ಮ ಮೂಲ ಕುಲಕಸುಬಿಗೆ ಬೇಡಿಕೆ ಇಲ್ಲದ ಸಂದರ್ಭದಿಂದ ಇಂದಿನವರೆಗೂ ಅತ್ಯಂತ ದೊಡ್ಡ ಸಮಸ್ಯೆಯಾಗಿ ಕಾಡುತ್ತಿರುವುದು ನಿರುದ್ಯೋಗ. ಕುಲಕಸುಬಿಗೆ ಬೇಡಿಕೆ ಕಡಿಮೆಯಾದಾಗ, ವಾಸಸ್ಥಳವಾದ ಕಾಡು ದೂರವಾದಾಗ ಆಹಾರಕ್ಕಾಗಿ ಕೊರಗರು ಪರದಾಡುವಂತಾಯಿತು. ಶ್ರೀಮಂತರ, ಉಳ್ಳವರ ಅಡಿಕೆ ತೋಟಗಳಲ್ಲಿ ಕೂಲಿಯಾಳುಗಳಾಗಿ, ಜೀತಗಾರರಾಗಿ ಅಲ್ಪಪ್ರಮಾಣದ ಕೂಲಿ ಪಡೆದು ಜೀವನ ಮಾಡುವಂತಾಯಿತು. ಇದರಿಂದ ಕೌಟುಂಬಿಕ ನೆಮ್ಮದಿ, ಮನಃಶಾಂತಿ ಹಾಳಾಯಿತು. ಒಂದು ಹೊತ್ತಿನ ತುತ್ತಿಗೆ ದಿನವಿಡೀ ವಿಶ್ರಾಂತಿಯಿಲ್ಲದೆ ಧಣಿಗಳ ಮನೆ-ತೋಟಗಳಲ್ಲಿ ಜೀತದಾಳುಗಳಾಗಿ ದುಡಿಯಬೇಕಾಗಿ ಬಂದುದು ದುರಂತವೇ ಸರಿ.

ಹಿರಿಯ ಕೊರಗರಂತೆ ಅವರ ಹೆಂಡತಿಯರು ಜೀತದ ಕೆಲಸ ಮಾಡುತ್ತಿದ್ದಾರೆ. ಇನ್ನೊಂದೆಡೆ ತಮ್ಮ ಮಕ್ಕಳನ್ನು ಇದೇ ಕೆಲಸಕ್ಕೆ ಸೇರಿಸಿದರು. ಯಾವುದೇ ಶಿಕ್ಷಣವನ್ನು ಕೊಡಲು ಸಾಧ್ಯವಾಗಲಿಲ್ಲ. ಈ ಹಿನ್ನೆಲೆಯಲ್ಲಿ ಯಾವುದೇ ಶಿಕ್ಷಣವನ್ನು ಪಡೆಯದ ಯುವಕ-ಯುವತಿಯರಿಗೂ ನೌಕರಿ, ಸರ್ಕಾರಿ ನೌಕರಿಯೆಂಬುದು ಗಗನಕುಸುಮವಾಗಿದೆ.

ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ವಾಸಿಸುತ್ತಿರುವ ಹೆಚ್ಚಿನ ಕುಟುಂಬಗಳಲ್ಲಿ ನಿರುದ್ಯೋಗ ಸಮಸ್ಯೆಯಿದೆ. ಉದಾ: ಸುಜ್ಞಾನಾ ಕಾಲೋನಿ, ಪಡುಬಿದ್ರೆ ಇಲ್ಲಿ ಸಮೀಕ್ಷೆ ನಡೆಸಿದಾಗ ಈ ಕಾಲೋನಿಯಲ್ಲಿ ಸುಮಾರು ೧೮ ಕುಟುಂಬಗಳಿವೆ. ಇವರೆಲ್ಲರೂ ತಮ್ಮ ಜೀವನೋಪಾಯಕ್ಕಾಗಿ ಬುಟ್ಟಿ ಹೆಣೆಯುವುದನ್ನು ಅವಲಂಬಿಸಿದ್ದಾರೆ. ಗಂಡಸರು ಪಂಚಾಯತ್‌ಗಳಲ್ಲಿ ಕಸಗುಡಿಸುವ ಕೆಲಸಕ್ಕೆ ಹೋಗುತ್ತಾರೆ. ಇದರಲ್ಲಿ ಹೆಚ್ಚಿನವರು ಅನಕ್ಷರಸ್ಥರಾಗಿದ್ದಾರೆ. ಈ ಕಾಲೋನಿಯಲ್ಲಿ ಅವರು ತಮ್ಮದೇ ಕೊಪ್ಪಗಳಲ್ಲಿ ವಾಸಿಸುತ್ತಿದ್ದಾರೆ. ಈ ಮೊದಲು ಅವರು ಉನ್ನತ ಜಾತಿಯವರ ಬಾಡಿಗೆ ಮನೆಯಲ್ಲಿದ್ದರು. ಆದರೆ ಬಾಡಿಗೆ ಕೊಡುವ ಬದಲಾಗಿ ಅವರ ತೋಟದ ಕೆಲಸವನ್ನು ಮಾಡುತ್ತಿದ್ದರು. ಈ ಕಾಲೋನಿಗಳಲ್ಲಿ ಶೌಚಾಲಯದ ವ್ಯವಸ್ಥೆಯಿಲ್ಲ. ಜಾಗವೂ ಸಹಃ ಇವರ ಸ್ವಂತದಲ್ಲಿಲ್ಲ. ನಿರುದ್ಯೋಗದಿಂದಾಗಿ ಕುಟುಂಬ ನಿರ್ವಹಿಸುವುದಕ್ಕೂ ಪರದಾಡುತ್ತಿದ್ದಾರೆ. ಐ.ಟಿ.ಡಿ.ಪಿಯ ಮೂಲಕ ವರ್ಷದಲ್ಲಿ ೬ ತಿಂಗಳು ದವಸ ಧಾನ್ಯವನ್ನು ಪಡೆಯುತ್ತಿದ್ದಾರೆ. ಆದರೆ ಈ ದವಸ-ಧಾನ್ಯಗಳು ಕಳಪೆ ಮಟ್ಟದಲ್ಲಿರುತ್ತದೆ. ಇವರು ನೀರಿಗಾಗಿ ಸಾರ್ವಜನಿಕ ಬಾವಿಯನ್ನು ಅವಲಂಬಿಸಿದ್ದಾರೆ. ಸರಿಯಾಗಿ ಕೆಲಸಗಳು ಇಲ್ಲದಿರುವುದರಿಂದ ಸೀಟು ಹಾಗೂ ಗುಡಿಸಲು ಮನೆಗಳಲ್ಲಿ ವಾಸವಿದ್ದಾರೆ. ಮನೆಗಳಿಗೆ ವಿದ್ಯುಚ್ಛಕ್ತಿ ಸೌಲಭ್ಯವಿಲ್ಲ. ಇಲ್ಲಿನ ಕೊಪ್ಪದಲ್ಲಿ ಒಬ್ಬಳು ಹುಡುಗಿ ಎಮ್.ಎಸ್.ಡಬ್ಲ್ಯು ಮುಗಿಸಿದ್ದರೂ ಇವಳಿಗೆ ಸರ್ಕಾರಿ ಕೆಲಸ ಸಿಕ್ಕಿಲ್ಲ.

ಕುಟ್ಟಿಕಾಡು ಕಟಪಾಡಿಯಲ್ಲಿ ಒಟ್ಟು ೬ ಮನೆಗಳಿವೆ. ಈ ಕೊಪ್ಪಗಳಲ್ಲಿ ವಾಸಿಸುತ್ತಿರುವ ಕೊರಗರಲ್ಲಿ ಸ್ವಲ್ಪಮಟ್ಟಿನ ಅಭಿವೃದ್ಧಿಯನ್ನು ಕಾಣುತ್ತೇವೆ. ಇವರು ಕಂಬಳ ಯಜಮಾನರ ಜಾಗದಲ್ಲಿ ನೆಲೆಸಿದ್ದಾರೆ. ಕಂಬಳ ವಾದ್ಯಗಳನ್ನು ನಿರ್ವಹಿಸಿ ಇವರು ಜೀವನ ನಡೆಸುತ್ತಿದ್ದಾರೆ. ಇಲ್ಲಿನ ಕುಟುಂಬಗಳಲ್ಲಿ ಹೆಚ್ಚೆಂದರೆ ೯ನೇ ತರಗತಿಯವರೆಗೆ ಮಾತ್ರ ಕಲಿತಿದ್ದಾರೆ. ನೀರಿಗಾಗಿ ಸಾರ್ವಜನಿಕ ಬಾವಿಯನ್ನು ಅವಲಂಬಿಸಿದ್ದಾರೆ. ಪಿ.ಡಿ.ಡಿ.ಪಿಯಿಂದ ಬಾಲವಾಡಿಯ ಮೂಲಕ ೬ ತಿಂಗಳು ಆಹಾರ ಪೂರೈಕೆಯಾದರೂ ಅದು ಸಮರ್ಪಕವಾಗಿಲ್ಲ. ಇಲ್ಲಿನ ಮನೆಗಳು ಹಂಚಿನಿಂದ ನಿರ್ಮಾಣವಾಗಿದೆ.

ಕಾರ್ಕಳದ ಪಿಲಾರ್‌ಖಾನ್‌ನಲ್ಲಿ ಕೊರಗರಿಗೆ ಬುಟ್ಟಿ ಹೆಣೆಯುವುದು, ಚಾಪೆ ಹೆಣೆಯುವುದು ಮೊದಲಾದ ಗೃಹಕೈಗಾರಿಕೆಗಳ ಉತ್ಪನ್ನಗಳನ್ನು ತಯಾರಿಸುವ ತರಬೇತಿಯನ್ನು ನೀಡುತ್ತಿದ್ದರು. ಆದರೆ ನಂತರದ ದಿನಗಳಲ್ಲಿ ಕೊರಗರು ಇಲ್ಲಿಗೆ ಬರದೇ ಇದ್ದುದರಿಂದ ಗೃಹಕೈಗಾರಿಕೆ ತರಬೇತಿಯನ್ನು ನಿಲ್ಲಿಸಲಾಗಿದೆ. ಅವರಿಗೆ ವಸ್ತುವಿನ ರೂಪದಲ್ಲಿ ಸಹಾಯವನ್ನು ಮಾಡಲಾಗುತ್ತದೆ. ಏಕೆಂದರೆ ಹಣದ ರೂಪದಲ್ಲಿ ಸಹಾಯ ಮಾಡಿದರೆ ಅದನ್ನು ಕುಡಿತಕ್ಕಾಗಿ ಹಾಳು ಮಾಡುತ್ತಾರೆ. ಈ ಪ್ರದೇಶಗಳಲ್ಲಿ ನಿರುದ್ಯೋಗ ಸಮಸ್ಯೆಗೆ ಪ್ರಮುಖವಾದ ಕಾರಣವೆಂದರೆ ಇವರಿಗೆ ಸರಿಯಾದ ಕೆಲಸವಿಲ್ಲ. ಕೆಲಸವಿದ್ದರೂ ಹಣವನ್ನೆಲ್ಲಾ ಮದ್ಯಪಾನ ಸೇವನೆಗಾಗಿ ವಿನಿಯೋಗಿಸುತ್ತಾರೆ. ಕಾರ್ಕಳದ ಸುತ್ತಮುತ್ತ ಪ್ರದೇಶದಲ್ಲಿ ಕೆಲವು ಕೊರಗ ಕುಟುಂಬಗಳು ಅಜಲಿನಿಂದ ದೊರೆಯುವ ಆಹಾರಗಳನ್ನು ಹಾಗೂ ಬಟ್ಟೆಗಳನ್ನು ಬಳಸುವುದನ್ನು ಕಾಣುತ್ತೇವೆ.

**೫.೩. ಅನುಷ್ಠಾನಗೊಳ್ಳದಿರುವ ಸರ್ಕಾರದ ಸವಲತ್ತುಗಳು**

ಆದಿಮ ಬುಡಕಟ್ಟು ಎಂದು ವರ್ಗೀಕರಿಸಲ್ಪಟ್ಟ ಕೊರಗ ಸಮುದಾಯಕ್ಕೆ ಮೂಲಭೂತ ಅವಶ್ಯಕತೆಗಳಿಗೆ ಅನುಗುಣವಾಗಿ ಸಿಗಬೇಕಾದ ಸವಲತ್ತುಗಳು ಸಿಗದಿರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಮೂಲಭೂತ ಸೌಕರ್ಯಗಳನ್ನು, ಅವಕಾಶಗಳನ್ನು ಪಡೆದುಕೊಳ್ಳುವುದು ಪ್ರಜಾಪ್ರಭುತ್ವ ಆಡಳಿತದಡಿಯಲ್ಲಿ ಎಲ್ಲರಿಗೂ ಹಕ್ಕು ಇರುವುದನ್ನು ಸರ್ಕಾರಗಳು ಮನಗಾಣಬೇಕು. ಕೊರಗರು ಮೊದಲಿನಿಂದಲೂ ಸಾಮಾಜಿಕವಾಗಿ, ಧಾರ್ಮಿಕವಾಗಿ, ಆರ್ಥಿಕವಾಗಿ ತೀರಾ ಹಿಂದುಳಿದಿರುವುದರಿಂದ ಪ್ರಥಮ ಆದ್ಯತೆ ಸರ್ಕಾರ ನೀಡಬೇಕಿತ್ತು. ಆದರೆ ಹಾಗಾಗಲಿಲ್ಲ. ಬೇಕಾಗಿರುವುದನ್ನು ನಾನೇ ಕೇಳಿ ಪಡೆಯಬೇಕಾದ ಕಾಲವಿದು ಎಂದು ಸಿದ್ಧ ಉತ್ತರ ಕೊಡಬಹುದು. ಆದರೆ ವಾಸ್ತವಾಂಶ ಬೇರೆಯೇ ಆಗಿರುತ್ತದೆ. ಬಹುಸಂಖ್ಯಾತ ಸಮುದಾಯದವರೇ ಸೌಕರ್ಯಗಳ ಸವಲತ್ತುಗಳ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ಹರಸಾಹಸಪಡುತ್ತಿರುವ ಪ್ರಸ್ತುತ ಕಾಲಮಾನದಲ್ಲಿ ಕೊರಗರಂಥ ಅಲ್ಪಸಂಖ್ಯಾತರಿಗೆ, ಇತರೆ ಸಮುದಾಯದವರಿಂದ ದೂರೀಕರಿಸಲ್ಪಟ್ಟವರಿಗೆ ಎಷ್ಟರಮಟ್ಟಿಗೆ ಸಾಧ್ಯ ಎಂಬುದು ದೊಡ್ಡ ಪ್ರಶ್ನೆ.

ನೂರಾರು ಸರ್ಕಾರದ ಯೋಜನೆಗಳು ಕೊರಗರಿಗೆ ಮತ್ತು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಇರುವುದು ನಿಜ. ಆದರೆ ಅದರಲ್ಲಿ ಬಹುತೇಕ ಯೋಜನೆಗಳು ಪರಿಶಿಷ್ಟ ವರ್ಗದವರಿಗೆ ತಲುಪುವಲ್ಲಿ ಎಡವುತ್ತಿರುವುದನ್ನು ಗಮನಿಸಬಹುದಾಗಿದೆ.

ಮೂಲಭೂತವಾಗಿ ಆಹಾರ, ಆರೋಗ್ಯಕ್ಕೆ ಸಂಬಂಧಿಸಿದಂತೆ ಗಮನಿಸಿದಾಗ ಸರ್ಕಾರದ ಸೌಲಭ್ಯಗಳು ಕೊರಗರಿಗೆ ಇನ್ನು ತಲುಪಿಲ್ಲ ಎಂಬುದು ಪ್ರಮುಖವಾಗಿ ಗಮನಿಸಬೇಕು. ಇನ್ನೂ ಅನೇಕ ಕುಟುಂಬಗಳಿಗೆ ಬಿ.ಪಿ.ಎಲ್. ಪಡಿತರ ಚೀಟಿ ಲಭಿಸಿಲ್ಲ. ಹಾಗಾಗಿ ಸರ್ಕಾರ ಬಡವರಿಗಾಗಿ, ಆದಿವಾಸಿಗಳಿಗಾಗಿ ನೀಡುತ್ತಿರುವ ಪೌಷ್ಠಿಕಾಂಶ ಆಹಾರಗಳು ಪಡಿತರ ಚೀಟಿ ಮೂಲಕ ಕೊರಗರಿಗೆ ಲಭಿಸುತ್ತಿಲ್ಲ. ಈ ಮೊದಲು ಪ್ರಸ್ತಾಪಿಸಿದಂತೆ ಪೌಷ್ಠಿಕ ಆಹಾರದ ಕೊರತೆಯಿಂದಾಗಿ ಅನೇಕ ಕೊರಗರು ಅನಾರೋಗ್ಯ ಪೀಡಿತರಾಗಿರುವುದು ಕಂಡುಬರುತ್ತದೆ.

ಸರಿಯಾದ ರೀತಿಯಲ್ಲಿ ಕೊರಗರ ಅಂಕಿ ಅಂಶಗಳನ್ನು ಪರಿಗಣಿಸಿ ಕೂಲಂಕಷವಾಗಿ ಪರಿಶೀಲಿಸಿ ಪಡಿತರ ಆಹಾರ ಪೂರೈಕೆಯಾಗುವಂತೆ ಯೋಜನೆಗಳ ಅನುಷ್ಠಾನವಾಗಬೇಕಾಗಿದೆ. ಪ್ರಾದೇಶಿಕ ಭಿನ್ನತೆಯನ್ನು, ಪರಿಸರವನ್ನು ಹೊಂದಿರುವ ಕೊರಗರು ಕರಾವಳಿ ಪ್ರದೇಶದ ವಾತಾವರಣಕ್ಕೆ ಪೂರಕವಾಗುವ ಆಹಾರಗಳನ್ನೇ ಸೇವಿಸುತ್ತಿದ್ದಾರೆ. ಹಾಗಾಗಿ ಈ ವಾತಾವರಣಕ್ಕೆ ಪೂರಕವಾಗುವ, ಕೊರಗರ ಆರೋಗ್ಯಕ್ಕೆ ಪೂರಕವಾಗುವ ಆಹಾರಗಳ ಜೊತೆಗೆ ಉತ್ತಮ ಪೌಷ್ಠಿಕಾಂಶಗಳನ್ನು ನೀಡುವ ಬಗೆಗೆ ಗಮನಹರಿಸಬೇಕು. ಜೊತೆಗೆ ಕೊರಗರಲ್ಲಿ ಬಹುತೇಕ ಕೊರಗರಲ್ಲಿ ಮದ್ಯಪಾನ ಸೇವನೆಯಿರುವುದರಿಂದ ಅವರನ್ನು ಅದರಿಂದ ಮುಕ್ತಗೊಳಿಸುವ ಕಾರ್ಯಕ್ರಮವನ್ನು ಸರ್ಕಾರ ಆಯೋಜಿಸಬೇಕಾಗಿದೆ. ದಿನಕ್ಕೆ ದುಡಿದ ಹಣವನ್ನೆಲ್ಲ ಸಾರಾಯಿ ಅಂಗಡಿಗೆ ಹಾಕಿದರೆ ಯಾವುದೇ ರೀತಿಯ ಅಭಿವೃದ್ಧಿ ಕಾಣಲು ಕಷ್ಟಸಾಧ್ಯ. ಈ ಹಿನ್ನೆಲೆಯಲ್ಲಿ ಕಟ್ಟುನಿಟ್ಟಾಗಿ ಮದ್ಯಪಾನಮುಕ್ತ ಕೊರಗರನ್ನು ಸೃಜಿಸಿದರೆ ಇತರೆ ಅಭಿವೃದ್ಧಿ ಕಾರ್ಯಗಳಿಗೆ ಪೂರಕವಾಗುವುದರಲ್ಲಿ ಸಂಶಯವಿಲ್ಲ.

ಕೊರಗರಿಗೆ ಸರ್ಕಾರದಿಂದ ಸಿಗಬೇಕಾದ ಸವಲತ್ತುಗಳ ಬಗ್ಗೆ ವಕ್ತೃಗಳು ನೀಡಿದ ಅಭಿಪ್ರಾಯಗಳು ಹೀಗಿವೆ,

೧. ವಸತಿ ಸೌಲಭ್ಯ, ಶೌಚಾಲಯ ಹಾಗೂ ಸ್ನಾನಗೃಹ.

೨. ಕುಡಿಯುವ ನೀರಿನ ಸೌಲಭ್ಯ.

೩. ವಿದ್ಯುತ್‌ಚ್ಛಕ್ತಿ ಸೌಲಭ್ಯ.

೪. ದುಡಿಮೆಗಾಗಿ ಸಾಲ ಸೌಲಭ್ಯ ನೀಡುವುದು.

೫. ಕುಲಕಸುಬಿಗಾಗಿ ಕಚ್ಚಾವಸ್ತುಗಳು ಸುಲಭವಾಗಿ ಸಿಗುವಂತೆ ಸಹಾಯ ಮಾಡುವುದು.

೬. ಕೊರಗ ಮಕ್ಕಳಿಗೆ ಸರ್ಕಾರವು ಕಟ್ಟುನಿಟ್ಟಾಗಿ ಶಿಕ್ಷಣ ಒದಗಿಸುವುದು.

೭. ಕೊರಗರ ದುಡಿಮೆಯನ್ನು ಹೆಚ್ಚಿಸಲು ನೇರವಾಗುವುದು.

೮. ಕೊರಗರ ಆರ್ಥಿಕ ಚಟುವಟಿಕೆಯನ್ನು ಸುಧಾರಿಸುವುದು.

೯. ಕೊರಗರಿಗೆ ಕೃಷಿ ಭೂಮಿ ಹಾಗೂ ನೀರಾವರಿ ಸೌಲಭ್ಯವನ್ನು ಒದಗಿಸುವುದು.

೧೦. ಶಾಶ್ವತ ಉದ್ಯೋಗವನ್ನು ನೀಡುವುದು.

೧೧. ವಿಧವಾ ಹಾಗೂ ವೃದ್ಧಪ್ಯ ವೇತನವನ್ನು ನೀಡುವುದು.

೧೨. ಕೊರಗರಲ್ಲಿ ಜಾಗೃತಿ ಕಾರ್ಯಕ್ರಮವನ್ನು ಹಮ್ಮಿಕೊಳ್ಳುವುದು.

೧೩. ಸಮಾಜವು ಕೊರಗರನ್ನು ಮನಷ್ಯರನ್ನಾಗಿ ನೋಡುವುದು.

೧೪. ಕೊರಗರಿಗೆ ಸ್ವ-ಉದ್ಯೋಗ ತರಬೇತಿಯನ್ನು ನೀಡುವುದು.

ಕರಾವಳಿ ಕರ್ನಾಟಕ ಪ್ರದೇಶದ ಕೊರಗರಿಗೆ ಭೂಮಿ ಇಲ್ಲ. ಕೆಲವು ಸಂಘಟನೆಗಳ ಹೋರಾಟದ ಫಲವಾಗಿ ಎರಡು ಮೂರು ಹಂತಗಳಲ್ಲಿ ಅಲ್ಪಸ್ವಲ್ಪ ಭೂಮಿ ದೊರಕಿರುವುದು ಬಿಟ್ಟರೆ ಎಲ್ಲಾ ಭಾಗದ ಕೊರಗರಿಗೆ ಭೂಮಿ ಸಿಕ್ಕಿಲ್ಲ. ಈ ಹಿನ್ನೆಲೆಯಲ್ಲಿ ಸರ್ಕಾರ ಗಂಭೀರವಾಗಿ ಚಿಂತಿಸಿ ಕೊರಗರಿಗೆಲ್ಲರಿಗೂ ಒಂದೆರಡು ಎಕರೆ ಭೂಮಿಯನ್ನು ಮಂಜೂರು ಮಾಡಿದರೆ ಕೊರಗರಿಗಿರುವ ಸರ್ಕಾರದ ಯೋಜನೆಗಳನ್ನು ಅನುಷ್ಠಾನಗೊಳಿಸಲು ಸಹಾಯಕವಾಗುವುದರಲ್ಲಿ ಎರಡು ಮಾತಿಲ್ಲ. ಅದರಲ್ಲಿಯೂ ಕೃಷಿಭೂಮಿಯನ್ನು ಕೊರಗರಿಗೆ ಕೊಡಮಾಡಲು ಕಂದಾಯ ಇಲಾಖೆ, ಅರಣ್ಯ ಇಲಾಖೆ ಮತ್ತು ಜಿಲ್ಲಾಡಳಿತಗಳು ಯೋಜನೆಯನ್ನು ರೂಪಿಸಿಕೊಳ್ಳುವ ಅಗತ್ಯವಿದೆ. ಈ ನಿಟ್ಟಿನಲ್ಲಿ ಗ್ರಾಮ ಪಂಚಾಯತ್, ತಾಲೂಕು ಪಂಚಾಯತ್, ಜಿಲ್ಲಾ ಪಂಚಾಯತ್ ಆಡಳಿತ ವಿಭಾಗಗಳು ಮುತುವರ್ಜಿ ವಹಿಸಿದರೆ ಕೊರಗರಿಗೆ ಭೂಮಿ ನೀಡಿ ಕೃಷಿ, ಇನ್ನಿತರೆ ಕಸುಬುಗಳನ್ನು ಮಾಡಿಕೊಂಡು ಜೀವನ ನಿರ್ವಹಿಸಲು ಸಹಾಯವಾಗುತ್ತದೆ.

ಈ ಮೊದಲು ಭೂಮಿಗಾಗಿ ಹೋರಾಟ ಮಾಡಿದಾಗ ಅನೇಕ ಕೊರಗರಿಗೆ ಲಾಟಿಚಾರ್ಜು, ಬಂಧನವಾದ ನಿದರ್ಶನಗಳಿವೆ. ಹಾಗಾಗಿ ನೇರವಾಗಿ ಸರ್ಕಾರವೇ ಮುಂದೆ ನಿಂತು ಭೂಮಿ ನೀಡುವ ಕಾರ್ಯ ಆಗಬೇಕಾಗಿದೆ. ಕಾಡು-ಕಾಡಂಚುಗಳಲ್ಲಿ ಜೀವನ ಮಾಡಿದ ಕೊರಗರನ್ನು ಒಕ್ಕಲೆಬ್ಬಿಸಲಾಯಿತು. ಏಕಾಏಕಿ ನೂರಾರು ವರ್ಷಗಳಿಂದ

ಜೀವನ ಮಾಡಿಕೊಂಡು ಬಂದಂಥ ಕೊರಗರಿಗೆ ಅತ್ಯಂತ ಪರಿಣಾಮ ಬೀರಿದ ಸಂಗತಿಯಾಯಿತು. ಅವರ ಅಸ್ತಿತ್ವವನ್ನೇ ಅಲುಗಾಡಿಸಿದಂತಾಯಿತು. ಆ ಮೂಲಕ ಸಂಪೂರ್ಣ ಆರ್ಥಿಕತೆಯಿಂದ ಮುಗ್ಗರಿಸಿದಂತಾಯಿತು.

ಕೊರಗರಿಗೆ ನೀಡಿರುವ ಜಮೀನಿನಲ್ಲಿ ಮಲ್ಲಿಗೆ ಕೃಷಿ ಮಾಡಲು ತರಬೇತಿ ಮತ್ತು ಭೂಮಿಯನ್ನು ನೀಡಲಾಗಿದೆ. ಇದು ಒಂದು ಸರ್ಕಾರದ ಯೋಜನೆಯಾಗಿದ್ದು, ಅಲ್ಪ ಪ್ರಮಾಣದಲ್ಲಿ ಕೊರಗರಿಗೆ ಲಭಿಸಿದೆ. ಆದರೆ ಇನ್ನುಳಿದ ಕೊರಗರಿಗೂ(ಭೂಮಿರಹಿತ) ವಿಸ್ತರಿಸುವ ಕೆಲಸವಾಗಬೇಕಾಗಿದೆ. ಮಲ್ಲಿಗೆ ಕೃಷಿ ಮಾಡಲು ತರಬೇತಿಯನ್ನು ನೀಡಬೇಕಾಗಿದೆ. ಹಾಗೆಯೇ ಕಡ್ಡಾಯ ಷರತ್ತುಗಳನ್ನು ವಿಧಿಸಿ ಕಾಲಕಾಲಕ್ಕೆ ಬೆಳವಣಿಗೆಯನ್ನು ಗಮನಿಸಿದರೆ ಈ ಯೋಜನೆ ಸಫಲವಾಗುವುದರಲ್ಲಿ ಸಂಶಯವಿಲ್ಲ. ಈ ಯೋಜನೆಯ ಮೂಲಕ ಸ್ವಾಭಿಮಾನದ ಬದುಕು ಸಾಗಿಸಲು ಕೊರಗರಿಗೆ ಸಾಧ್ಯ. ಒಂದು ಕಡೆ ಭೂಮಿ ಸಿಕ್ಕರೆ ಇನ್ನೊಂದು ಕಡೆ ಮಲ್ಲಿಗೆ ಕೃಷಿಗೆ ಸಹಾಯಧನವನ್ನು ಸರ್ಕಾರ ನಿಗದಿ ಮಾಡಿದೆ. ಆದರೆ ಸಮರ್ಪಕವಾಗಿ ಅನುಷ್ಠಾನಗೊಳ್ಳಬೇಕಾಗಿದೆ. ಹಾಗೆಯೇ ಕೃಷಿಭೂಮಿಯನ್ನೇ ನೀಡುವ ಸರ್ಕಾರ ಇತರೆ ಪ್ರಾದೇಶಿಕ ಕೃಷಿಗಳಿಗೆ ಸಂಬಂಧಿಸಿದಂತೆ ಕೊರಗರಿಗೆ ತರಬೇತಿಯನ್ನು ನೀಡಿದರೆ ಒಳಿತು. ಆ ಮೂಲಕ ನಿರುದ್ಯೋಗವನ್ನು ಹೋಗಲಾಡಿಸಲು ಸಾಧ್ಯ. ಈ ನಿಟ್ಟಿನಲ್ಲಿ ಜನಪ್ರತಿನಿಧಿಗಳು, ಸಂಘ-ಸಂಸ್ಥೆಗಳು, ಹೆಚ್ಚಾಗಿ ಸರ್ಕಾರ ಮುತುವರ್ಜಿ ವಹಿಸಬೇಕಾಗಿದೆ. ಸರ್ಕಾರದ ಸವಲತ್ತುಗಳನ್ನು ಸಮಪರ್ಕವಾಗಿ ಸ್ವಹಿತಾಸಕ್ತಿಗಾಗಿ ಬಳಸುವಂತೆ ಕೊರಗರಿಗೆ ಮನವರಿಕೆ ಮಾಡಬೇಕಾಗಿದೆ. ಭೂಮಿಯನ್ನು ಬೇರೆಯವರಿಗೂ ಮಾರಾಟ ಮಾಡದಂತೆ ಅಥವಾ ಬೇರೆ ಸಮುದಾಯದವರಿಗೆ ಭೂಮಿಯನ್ನು ಉಳುಮೆ ಮಾಡಲು ನೀಡುವಂಥ ಯಾವುದೇ ಕಾರ್ಯಕ್ಕೆ ಕೈಹಾಕದಂತೆ ಕಾಲಕಾಲಕ್ಕೆ ಪರಿಶೀಲಿಸಿದರೆ ಸರ್ಕಾರದ ಯೋಜನೆಗಳು ಶೇ. ನೂರರಷ್ಟು ಸಫಲವಾಗುತ್ತದೆ.

ಕೊರಗರ ಕಾಲೋನಿಗಳಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸುವ ನಿಟ್ಟಿನಲ್ಲಿ ಸರ್ಕಾರ ಇನ್ನಷ್ಟು ಚುರುಕಾಗಬೇಕಾಗಿದೆ. ಕರಾವಳಿ ಕರ್ನಾಟಕದ ಕೊರಗರ ವಾಸಸ್ಥಳಗಳಿಗೆ ಸಂಬಂಧಿಸಿದಂತೆ ಕೆಲವೊಂದು ಕಾಲೋನಿಗಳು ಅಭಿವೃದ್ಧಿಯನ್ನು ಹೊಂದಿರುವುದು ನಿಜ. ಆದರೆ ಇನ್ನು ಅನೇಕ ಕಾಲೋನಿಗಳಿಗೆ ಸರಿಯಾದ ರಸ್ತೆ ಸಂಪರ್ಕಗಳಿಲ್ಲ. ಕೆಲವು ಪ್ರದೇಶಗಳಲ್ಲಿ ಕಾಂಕ್ರೀಟ್ ರಸ್ತೆ ಮಾಡಲಾಗಿದೆ. ಅದೇ ರೀತಿ ಎಲ್ಲ ಕೊರಗರು ವಾಸಿಸುವ ಕಾಲನಿಗಳಿಗೆ ಡಾಂಬರು ಅಥವಾ ಕಾಂಕ್ರೀಟ್ ರಸ್ತೆ ಮಾಡಿದರೆ ಅನುಕೂಲ. ಕೊರಗರ

ಆರೋಗ್ಯ ದೃಷ್ಟಿಯಿಂದ ನಿರ್ಮಲ ಕಾಲನಿ ಆಗಬೇಕಾಗಿದೆ. ಮೊದಲೇ ಅಪೌಷ್ಠಿಕತೆಯಿಂದ ಬಳಲುತ್ತಿರುವ ಕೊರಗರಿಗೆ ನೈರ್ಮಲ್ಯೀಕರಣದ ಬಗೆಗೆ ತಿಳಿಸಿ ಹೇಳಬೇಕು. ಆ ನಿಟ್ಟಿನಲ್ಲಿ ರಸ್ತೆ ಸಂಪರ್ಕಗಳನ್ನು ಸರ್ಕಾರ ಒದಗಿಸಿಕೊಡಬೇಕಾಗಿದೆ.

ಇತ್ತೀಚಿನ ವರದಿಗಳ ಪ್ರಕಾರ ಕೊರಗರ ಜೀವಿತಾವಧಿ ಸರಾಸರಿ ೪೦ ವರ್ಷಗಳೆಂದು ಅಂದಾಜಿಸಲಾಗಿದೆ. ವಿವಿಧ ರೋಗರುಜಿನಗಳಿಂದ ಬಳಲುತ್ತಿರುವವರ ಸಂಖ್ಯೆ, ಸಾಯುವವರ ಸಂಖ್ಯೆ ಹೆಚ್ಚಾಗಿರುವುದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಸರ್ಕಾರ ಆದಿವಾಸಿಗಳು ವಾಸಿಸುವ ಕಾಲನಿಗಳಿಗೆ ತಿಂಗಳಿಗೆ ಒಂದು ಸಾರಿ ವೈದ್ಯರು ವಿವಿಧ ಔಷಧಿಗಳೊಂದಿಗೆ ಧಾವಿಸಿ ಆರೋಗ್ಯ ಪರೀಕ್ಷಿಸಿ ಔಷಧಿ ಕೊಡುವ ಯೋಜನೆಯಿದೆ. ಆದರೆ ಅದು ಸರಿಯಾಗಿ ಕಾರ್ಯರೂಪಕ್ಕೆ ಇನ್ನೂ ಬಂದಿಲ್ಲ. ಹೈಟೆಕ್ ಆಸ್ಪತ್ರೆಗಳಿಗೆ ಹೋಗಲು ಕೊರಗರಿಗೆ ಹಣವಿಲ್ಲ. ರೋಗ ರುಜಿನಗಳನ್ನು ಮರೆಯಲು ಹಿರಿಯ ಕೊರಗರು ಮದ್ಯಪಾನದತ್ತ ದೃಷ್ಟಿಹಾಯಿಸುವುದು ಕಂಡುಬರುತ್ತದೆ.

ದಕ್ಷಿಣ ಕನ್ನಡ ಜಿಲ್ಲೆಗೆ ಸಂಬಂಧಪಟ್ಟಂತೆ ಸರ್ಕಾರ ಮತ್ತು ಜಿಲ್ಲಾ ಪಂಚಾಯತ್ ನೀಡಿದ ಕೊರಗರಿಗೆ ಸಂಬಂಧಿಸಿದಂತೆ ಅನೇಕ ಯೋಜನೆಗಳು ಕಾರ್ಯರೂಪಕ್ಕೆ ಬರದಿರುವುದನ್ನು ಗಮನಸಿಬಹುದು. ಕೊರಗರು ತಯಾರಿಸಿದ ಬುಟ್ಟಿಗಳ ಮಾರಾಟಕ್ಕಾಗಿ ಪುತ್ತೂರು ನಗರದಲ್ಲಿ ಕೊರಗ ಸಮುದಾಯ ಭವನ ನಿರ್ಮಿಸುವ ಯೋಜನೆ ೧೯೯೮ರಲ್ಲಿ ಸಿದ್ಧಗೊಂಡಿದ್ದರೂ ಕಾರ್ಯರೂಪಕ್ಕೆ ಬಂದಿಲ್ಲ. ಈ ಸಮುದಾಯ ಭವನಕ್ಕಾಗಿ ೨೦,೦೦೦ ರೂ. ಅನುದಾನ ಮತ್ತು ನಿವೇಶನ ಒದಗಿಸಿದ್ದರೂ ಸರ್ಕಾರಿ ಅಧಿಕಾರಿಗಳಿಂದ ಯೋಜನೆಯನ್ನು ಅನುಷ್ಠಾನಗೊಳಿಸಲು ಸಾಧ್ಯವಾಗದಿರುವುದನ್ನು ಗಮನಿಸಬಹುದು.

ಪುತ್ತೂರು ತಾಲೂಕಿನ ನೀರಕಟ್ಟೆ, ಕೋಡಿಂಬಾಡಿ, ಪಾಣಾಜೆ, ಬೆಳ್ಳಿಪ್ಪಾಡಿ, ಬಜತ್ತೂರು ಇತ್ಯಾದಿ ಗ್ರಾಮಗಳಲ್ಲಿ ಕೊರಗರಿಗಾಗಿ ವಸತಿ, ಕೃಷಿಗಾಗಿ ಭೂಮಿಯನ್ನು ಮಂಜೂರು ಮಾಡಲಾಗಿತ್ತು. ಹಾಗೆಯೇ ಹಕ್ಕುಪತ್ರಗಳನ್ನು ನೀಡಲಾಗಿತ್ತು. ಆದರೆ ಒಂದೆರಡು ಕೊರಗ ಕುಟುಂಬಗಳನ್ನು ಹೊರತುಪಡಿಸಿ ಯಾವುದೇ ಕುಟುಂಬ ಬಂದ ಸವಲತ್ತನ್ನು ಸಮರ್ಪಕವಾಗಿ ಉಪಯೋಗಿಸಿಕೊಂಡಿಲ್ಲ ಎಂಬುದು ಗಮನಾರ್ಹ. ಈ ನಿಟ್ಟಿನಲ್ಲಿ ಸರ್ಕಾರ ಅಥವಾ ಸರ್ಕಾರಿ ಅಧಿಕಾರಿಗಳು ಯೋಜನೆಯನ್ನು ಕಟ್ಟುನಿಟ್ಟಾಗಿ ಅನುಷ್ಠಾನಗೊಳಿಸದಿರುವುದು ಇಲ್ಲಿ ಕಂಡುಬರುತ್ತದೆ.

ಸಮಗ್ರ ಗಿರಿಜನ ಅಭಿವೃದ್ಧಿ ಇಲಾಖೆ, ಸಮಾಜ ಕಲ್ಯಾಣ ಇಲಾಖೆ, ಇಂಜಿನಿಯರಿಂಗ್ ಇಲಾಖೆ, ಶಿಕ್ಷಣ ಇಲಾಖೆ, ಪಶುಸಂಗೋಪನಾ ಇಲಾಖೆ, ತೋಟಗಾರಿಕೆ ಮತ್ತು ಕೃಷಿ ಇಲಾಖೆ ಹೀಗೆ ಅನೇಕ ಇಲಾಖೆಗಳ ಮೂಲಕ ಕೊರಗರಿಗಾಗಿಯೇ ಅನೇಕ ಯೋಜನೆಗಳನ್ನು ಸರ್ಕಾರ ಹಮ್ಮಿಕೊಂಡಿದೆ. ಆದರೆ ಈ ಎಲ್ಲಾ ಇಲಾಖೆಗಳ ಮಧ್ಯೆ ಸಮನ್ವಯತೆ ಕೊರತೆ ಇರುವುದರಿಂದ ಕಾರ್ಯರೂಪಕ್ಕೆ ಬಂದಿರುವ ಯೋಜನೆಗಳ ಬಗೆಗೆ ಮಾಹಿತಿಗಳೇ ಇಲ್ಲ. ಸರಿಯಾದ ಸಮನ್ವಯಾಧಿಕಾರಿಗಳ ಕೊರತೆ ಇದೆ. ಇದು ಶೇ. ೭೫ರಷ್ಟು ಅನುದಾನ ವಿನಿಯೋಗವಾಗದೇ ಇರಲು ಕಾರಣವಾಗಿದೆ. ಸಮಗ್ರ ಗಿರಿಜನ ಅಭಿವೃದ್ಧಿ ಇಲಾಖೆ (ಐಟಿಡಿಪಿ)ಯ ಮೂಲಕ ಅನೇಕ ಯೋಜನೆಗಳಿದ್ದು ಅವ್ಯಾವುವೂ ಕೊರಗರಿಗೆ ತಲುಪುತ್ತಿಲ್ಲ. ಬದಲಾಗಿ ಅಧಿಕಾರಿಗಳೇ ಅವ್ಯವಹಾರ ನಡೆಸುತ್ತಿದ್ದಾರೆ. ಯಾರೂ ಕೇಳುವವರಿಲ್ಲ, ಶಿಕ್ಷಿಸುವುದಿಲ್ಲ. ಮನೆ ನಿರ್ಮಿಸಲು ನೀಡುವ ಅನುದಾನದಿಂದ ಮನೆಗಳು ನಿರ್ಮಾಣವಾಗುತ್ತಿಲ್ಲ. ಅಡಿಪಾಯದಲ್ಲೇ ಸಮಾಪ್ತಿಯಾಗಿರುವುದನ್ನು ಜಿಲ್ಲೆಯ ಅನೇಕ ಕಡೆ ಗಮನಿಸಬಹುದು.

ಕೊರಗರ ಅಭಿವೃದ್ಧಿಗಾಗಿ ಸರ್ಕಾರವು ಅನೇಕ ಸವಲತ್ತುಗಳನ್ನು ನೀಡಿದರೂ ಸಹ ಫಲಾನುಭವಿಗಳಿಗೆ ಅದು ತಲುಪುತ್ತಿಲ್ಲ. ಕೊರಗ ಅಭಿವೃದ್ಧಿ ಸಂಘಗಳ ಒಕ್ಕೂಟ ಕರ್ನಾಟಕ-ಕೇರಳ, ಉಡುಪಿಯ ಶಾಸಕರಾದ ಪ್ರಮೋದ್ ಮಧ್ವರಾಜ್‌ರವರ ನೇತೃತ್ವದಲ್ಲಿ ತಾಲೂಕು ಪಂಚಾಯತ್ ಸಭಾಭವನದಲ್ಲಿ ದಿನಾಂಕ ೧೫/೧೦/೨೦೧೩ರಂದು ಕೊರಗರ ಸಮಲೋಚನಾ ಸಭೆ ಜರುಗಿತು. ಅಲ್ಲಿ ಕೊರಗರು ತಮ್ಮ ಸಮಸ್ಯೆಗಳನ್ನು ಶಾಸಕರಲ್ಲಿ ಹೇಳಿಕೊಂಡರು. ಶಾಸಕರೂ ಹಲವು ಭರವಸೆಗಳನ್ನು ನೀಡಿದರು. ಆದರೆ ಅಧಿಕಾರಿಗಳ ನಿರ್ಲಕ್ಷ್ಯದಿಂದಾಗಿ ಅವರು ನೀಡಿದ ಭರವಸೆಗಳು ಸರಿಯಾಗಿ ನಿರ್ವಹಣೆಯಾಗುತ್ತಿಲ್ಲ.

ಉಡುಪಿ ಜಿಲ್ಲೆಯ ಕೋಟ, ಕೋಟೇಶ್ವರ, ಸಿದ್ಧಾಪುರ, ಕೊಲ್ಲೂರು ಹಾಗೂ ದಕ್ಷಿಣ ಕನ್ನಡ ಜಿಲ್ಲೆಯ ಮುಲ್ಕಿ, ಕಲ್ಲಮುಂಡ್ಕೂರು, ಬೆಳ್ತಂಗಡಿಗಳಲ್ಲಿ ಕೊರಗರಿಗೆ ಸರ್ಕಾರ ನೀಡಿದ ಜಮೀನು ಯೋಗ್ಯವಾಗಿಲ್ಲ ಇದರಲ್ಲಿ ಯಾವುದೇ ರೀತಿಯ ಕೃಷಿ ಚಟುವಟಿಕೆಯನ್ನು ನಡೆಸುವುದು ಕಷ್ಟಕರವಾಗಿದೆ. ಆದ್ದರಿಂದ ಸ್ಥಳೀಯ ಪಂಚಾಯತ್‌ಗಳು ಕೊರಗರ ಕೊಪ್ಪಗಳಿಗೆ ಭೇಟಿ ನೀಡಿ ಅಲ್ಲಿನ ಸಮಸ್ಯೆಯನ್ನು ಆಲಿಸಿ ಸರ್ಕಾರಕ್ಕೆ ಮನವರಿಕೆ ಮಾಡಿ ಕೃಷಿಯೋಗ್ಯ ಭೂಮಿಯನ್ನು ನೀಡಬೇಕಾಗಿದೆ.

ಕೊರಗರಿಗೆ ಶೈಕ್ಷಣಿಕವಾಗಿ ಹಲವು ಸವಲತ್ತುಗಳಿವೆ. ಆದರೆ ಆ ಸವಲತ್ತುಗಳು ಬಡ ಕೊರಗ ಮಕ್ಕಳಿಗೆ ಸಿಗುತ್ತಿಲ್ಲ. ದಕ್ಷಿಣ ಕನ್ನಡ ಜಿಲ್ಲೆಯ ಕೋಣಾಜೆ, ಸುಳ್ಯ ಉಡುಪಿ

ಜಿಲ್ಲೆಯ ರಾಮನಗರ, ಕೊಲ್ಲೂರು ಪ್ರದೇಶಗಳಲ್ಲಿ ಕೊರಗ ಮಕ್ಕಳಿಗೆ ಶೈಕ್ಷಣಿಕ ಸವಲತ್ತುಗಳು ತಲುಪುತ್ತಿಲ್ಲ. ಮಕ್ಕಳು ಮಧ್ಯೆದಲ್ಲಿಯೇ ಶಾಲೆ ಬಿಡುವ ಸಂಖ್ಯೆ ಇಲ್ಲಿ ಹೆಚ್ಚಾಗಿದೆ. ಕೊರಗ ಮಕ್ಕಳು ಶಾಲೆಗೆ ಬರುವಂತೆ ಮಾಡಲು ಕೊರಗರ ಕೊಪ್ಪಗಳಿಗೆ ಅಧಿಕಾರಿಗಳು ತೆರಳಿ ಶೈಕ್ಷಣಿಕ ಸವಲ್ತತುಗಳು ಶಿಕ್ಷಣದ ಪ್ರಯೋಜನಗಳು ಮೊದಲಾದ ವಿಷಯವಾಗಿ ಮಾಹಿತಿ ನೀಡಬೇಕಾಗಿದೆ. ಆದರೆ ಅದನ್ನು ಕೂಡ ಅಧಿಕಾರಿಗಳು ಸರಿಯಾಗಿ ಮಾಡುತ್ತಿಲ್ಲ. ಆದ್ದರಿಂದ ಈ ಪ್ರದೇಶಗಳಲ್ಲಿ ಕೊರಗ ಮಕ್ಕಳು ಮಧ್ಯದಲ್ಲಿಯೇ ಶಾಲೆಗಳನ್ನು ತೊರೆಯುತ್ತಿದ್ದಾರೆ.

ದಕ್ಷಿಣ ಕನ್ನಡ ಜಿಲ್ಲೆಯ ಮುಲ್ಕಿ, ಪಕ್ಷಿಕೆರೆ, ಕಿನ್ನಿಗೋಳಿ, ಉಡುಪಿ ಜಿಲ್ಲೆಯ ಸ್ಯಾಬರಕಟ್ಟೆ, ಸಿದ್ಧಾಪುರ, ಆಲೂರಿನ ವಾಸಿಸುತ್ತಿರುವ ಕೊರಗರ ಜನಸಂಖ್ಯೆ ತುಂಬಾ ವಿರಳವಾಗಿದೆ. ಇಲ್ಲಿ ಅತೀ ಚಿಕ್ಕ ವಯಸ್ಸಿನಲ್ಲಿ ಸಾವನ್ನಪ್ಪುವವರ ಸಂಖ್ಯೆ ಹೆಚ್ಚಾಗಿದೆ. ಮಹಿಳೆಯರು ಮತ್ತು ಚಿಕ್ಕಮಕ್ಕಳಲ್ಲಿ ಅಪೌಷ್ಠಿಕತೆಯನ್ನು ಹೆಚ್ಚಾಗಿ ಕಾಣುತ್ತೇವೆ. ಮಹಿಳೆಯರು ಮತ್ತು ಪುರುಷರಲ್ಲಿ ಕುಡಿತದ ಸಮಸ್ಯೆಯಿದೆ. ತಂಬಾಕು ಸೇವನೆ ಹೆಚ್ಚಾಗಿದೆ. ಇಂತಹ ಪ್ರದೇಶಗಳಿಗೆ ಪಿಲಾರ್‌ಖಾನ್‌ನ ಸಮಗ್ರ ಗ್ರಾಮೀಣ ಆಶ್ರಮ, ಕೊರಗ ಅಭಿವೃದ್ಧಿ ಸಂಘ, ಸ್ಥಳೀಯ ಆಸ್ಪತ್ರೆಗಳು ಆರೋಗ್ಯದ ಸಮಸ್ಯೆಗಳನ್ನು ಹೋಗಲಾಡಿಸಲು ಪ್ರಯತ್ನಿಸಿದರೂ ಸಹ ಸಾವನ್ನಪ್ಪುವವರ ಸಂಖ್ಯೆ ಕಡಿಮೆಯಾಗಿಲ್ಲ. ಕೊರಗರ ರಕ್ತ ಪರೀಕ್ಷೆಯನ್ನು ಮಾಡಿ ಅವರ ಸಾವಿಗೆ ಕಾರಣವನ್ನು ತಿಳಿಯಬೇಕಿದೆ. ಆದರೆ ಸರ್ಕಾರದಿಂದ ಈ ನಿಟ್ಟಿನಲ್ಲಿ ಕಾರ್ಯವು ಇನ್ನು ವಿಳಂಬವಾಗುತ್ತಿದೆ. ಅವರಲ್ಲಿರುವ ಬಡತನದಿಂದಾಗಿ ಸರಿಯಾಗಿ ಕೊರಗರು ತಮ್ಮ ಆರೋಗ್ಯದ ಸಮಸ್ಯೆಯನ್ನು ಹೋಗಲಾಡಿಸಲು ಆಸ್ಪತ್ರೆಗಳಿಗೂ ಹೋಗುತ್ತಿಲ್ಲ. ಇದು ಕೂಡ ಅವರ ಆರೋಗ್ಯದ ಸಮಸ್ಯೆ ಹೆಚ್ಚಿಸುವಂತೆ ಮಾಡಿದೆ.

ಕೊರಗರಿಗೆ ಐಟಿಡಿಪಿಯಿಂದ ವರ್ಷದಲ್ಲಿ ೬ ತಿಂಗಳು ಆಹಾರ ಧಾನ್ಯಗಳನ್ನು ಪೂರೈಸಲಾಗುತ್ತಿದೆ. ಆದರೆ ಕೆಲವೊಮ್ಮೆ ಕಳಪೆ ಮಟ್ಟದ ಆಹಾರ ಮತ್ತು ಸಮರ್ಪಕವಾಗಿ ಆಹಾರ ಪೂರೈಸದೆ ಇರುವ ಬಗ್ಗೆ ಹೆಬ್ರಿ, ಮುನಿಯಾಲು, ಅಜೆಕಾರು, ಹಿರಿಯಡ್ಕ, ಮದಿಪು ಪ್ರದೇಶದ ಕೊರಗ ವಕ್ತೃಗಳು ಮಾಹಿತಿ ನೀಡಿದ್ದಾರೆ. ಅನ್ನ ಯೋಜನೆ ಸೌಲಭ್ಯಗಳು ಅವರಿಗೆ ಇನ್ನೂ ಸರಿಯಾಗಿ ಸಿಗುತ್ತಿಲ್ಲ.

ಉಡುಪಿ ಜಿಲ್ಲೆಯಲ್ಲಿ ಐಟಿಡಿಪಿ ಮೂಲಕ ಕೊರಗ ನಿವಾಸಿಗಳಿಗೆ ಮನೆಗಳ ನಿರ್ಮಾಣಕ್ಕಾಗಿ ರೂ. ೨೫,೦೦೦/– ಬಿಡುಗಡೆಗೊಳಿಸಬೇಕೆಂದು ಸ್ಥಳೀಯ ಶಾಸಕರಿಗೆ ಮನವರಿಕೆ ಮಾಡಲಾಗಿದೆ. ಅದು ಕೂಡ ಸಮರ್ಪಕವಾಗಿ ಅನುಷ್ಠಾನಗೊಂಡಿಲ್ಲ.

ಕೊರಗರು ಅಜಲು ನಿಷೇಧ ಘೋಷಣೆಯನ್ನು ಮಾಡುತ್ತಲೆ ಇದ್ದಾರೆ. ಸಮಾಜವು ಅವರನ್ನು ಅಸ್ಪೃಶ್ಯರನ್ನಾಗಿ ನೋಡಲು ಅಜಲು ಪದ್ಧತಿ ಕಾರಣ ಎಂಬ ಅಭಿಪ್ರಾಯ ಕೊರಗ ಮುಖಂಡರಲ್ಲಿದೆ. ಆದರೆ ಉಡುಪಿ ಜಿಲ್ಲೆಯ ಹಾಗೂ ದಕ್ಷಿಣ ಕನ್ನಡ ಜಿಲ್ಲೆಯ ಕೆಲವು ಪ್ರದೇಶಗಳಲ್ಲಿ ಕೊರಗ ಕುಟುಂಬಗಳು ಅಜಲನ್ನು ಆಚರಿಸುತ್ತಿವೆ. ಅಜಲು ನಿಷೇಧ ಕಾಯ್ದೆ ೨೦೦೦ ಅಜಲು ನಿಷೇಧ ಹೋರಾಟಗಳು ನಡೆದರೂ ಕೆಲವು ಕುಟುಂಬಗಳು ಅಜಲನ್ನು ಬಿಡುತ್ತಿಲ್ಲ. ಏಕೆಂದರೆ ಅಜಲನ್ನು ನಂಬಿಕೊಂಡೇ ಬದುಕುವ ಕೊರಗ ಕುಟುಂಬಗಳಿವೆ. ಈ ಕುಟುಂಬಗಳಿಗೆ ಸರಕಾರವು ಸವಲತ್ತುಗಳನ್ನು ನೀಡಿದರೆ. ಸ್ವಉದ್ಯೋಗಕ್ಕೆ ಆರ್ಥಿಕ ಸಹಕಾರ ಮಾಡಿದರೆ, ಖಂಡಿತವಾಗಿ ಅಜಲನ್ನು ಆಚರಿಸುತ್ತಿರುವ ಕೊರಗ ಕುಟುಂಬಗಳು ಅದನ್ನು ಬಿಡುತ್ತವೆ. ಆದರೆ ಸರಕಾರದಿಂದ ಯಾವುದೇ ಇಂತಹ ಯೋಜನೆ ಕೊರಗರಿಗಾಗಿ ಅನುಷ್ಠಾನಗೊಳ್ಳುತ್ತಿಲ್ಲ ಬೇರೆ ಉದ್ಯೋಗ ಇಲ್ಲದೆ ತಮ್ಮ ಕುಲಕಸುಬಾದ ಬುಟ್ಟಿ ಹೆಣೆಯುವುದನ್ನು ಮಾಡಲು ಸರಿಯಾದ ಉತ್ಪನ್ನಗಳು ಸಿಗದೆ ಇರುವುದು, ಉತ್ಪನ್ನಗಳಿಗೆ ಮಾರುಕಟ್ಟೆ ಇಲ್ಲದೆ ಇರುವುದು ಇಂದಿಗೂ ಕೆಲವು ಕೊರಗ ಕುಟುಂಬಗಳು ಅಜಲನ್ನು ಆಚರಿಸಲು ಕಾರಣವಾಗಿದೆ.

ಇಂದು ಕೊರಗರು ಸರ್ಕಾರಿ ಸವಲತ್ತನ್ನು ಪಡೆಯಲು ಅವರಿಗೆ ಜಾತಿ ಪ್ರಮಾಣ ಪತ್ರದ ಅಗತ್ಯವಿದೆ ಆದರೆ ಅದನ್ನು ಪಡೆಯಲು ಗ್ರಾಮಲೆಕ್ಕಾಧಿಕಾರಿ ತಾಲೂಕು ಪಂಚಾಯತ್ ಮೊದಲಾದ ಕಡೆ ಅಲೆಯಬೇಕಾಗಿದೆ. ಇದು ಶಿಕ್ಷಣ ಇಲ್ಲದೆ ಇರುವ ಕೊರಗರಿಗೆ ಕಷ್ಟ ವಾಗುತ್ತದೆ. ಬ್ರಹ್ಮಾವರ ಪೇತ್ರಿ, ಸಾಸ್ತಾನ, ಮಾಬುಕಳ ಪ್ರದೇಶದ ಕೊರಗರಲ್ಲಿ ಈ ಸಮಸ್ಯೆ ಇದೆ. ಆದ್ದರಿಂದ ಈ ವಿಧಾನವನ್ನು ಸರಳೀಕರಿಸಬೇಕು ಎನ್ನುವುದು ಇಲ್ಲಿನ ವಕ್ತೃಗಳ ಅಭಿಪ್ರಾಯವಾಗಿದೆ.

ಉಡುಪಿ ಜಿಲ್ಲೆಯ ಸಾಲಿಗ್ರಾಮ, ಸಿದ್ಧಾಪುರ, ಕೋಟ ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು, ಸುಳ್ಯ, ಬೆಳ್ತಂಗಡಿಯಲ್ಲಿ ಕೊರಗರಿಗೆ ಸ್ವಂತ ಉದ್ಯೋಗವಿಲ್ಲ, ಅವರು ಇನ್ನೊಬ್ಬರ ಆಶ್ರಯದಲ್ಲಿದ್ದಾರೆ. ಇಂತಹ ಕೊರಗರಿಗೆ ಸರ್ಕಾರದಿಂದ ಸ್ವ–ಉದ್ಯೋಗ

ತರಬೇತಿಯ ಅಗತ್ಯತೆ ಇದೆ. ಆದರೆ ಇಲ್ಲಿಯವರೆಗೂ ಅಂತಹ ಅವಶ್ಯಕತೆ ಇದೆ. ಇದಕ್ಕೆ ಸರ್ಕಾರವು ಸೂಕ್ತ ರೀತಿಯಲ್ಲಿ ಸ್ಪಂದಿಸಬೇಕಾಗಿದೆ.

ಕೊರಗರಿಗೆ ಇರುವ ಸರ್ಕಾರಿ ಸವಲತ್ತುಗಳು ಅವರಿಗೆ ತಲುಪುತ್ತಿದೆಯೇ ಎಂದು ಗಮನಿಸಲು ಪಂಚಾಯತ್ ಮಟ್ಟದಲ್ಲಿ ಪ್ರಗತಿ ಪರಿಶೀಲನಾ ಸಭೆ ನಡೆಯಬೇಕಾಗಿದೆ. ಇದರಿಂದ ಕೊರಗರಿಗೆ ಇರುವ ಸರ್ಕಾರಿ ಸವಲತ್ತುಗಳು ಅವರಿಗೆ ಮುಟ್ಟುತ್ತಿದೆಯೇ ಅಥವಾ ಇಲ್ಲವೇ ಮುಟ್ಟದೇ ಇರಲು ಕಾರಣವಾಗಿರುವ ಅಂಶಗಳೇನು ಕಾರಣವಾಗಿರುವವರಿಗೆ ಯಾವ ರೀತಿಯಲ್ಲಿ ಕಾನೂನು ಕ್ರಮವನ್ನು ಕೈಗೊಳ್ಳಬಹುದು ಎಂದು ತಿಳಿಯಬಹುದು. ಆದರೆ ಸರ್ಕಾರದಿಂದ ಇಂತಹ ಪ್ರಯತ್ನ ಸರಿಯಾಗಿ ಅನುಷ್ಠಾನವಾಗುತ್ತಿಲ್ಲ.

**೫.೩ ಅನುಷ್ಠಾನಗೊಳ್ಳದಿರುವ ಸರ್ಕಾರದ ಸವಲತ್ತುಗಳು**

ಉಡುಪಿಯ ಶಾಸಕರಾದ ಪ್ರಮೋದ್ ಮಧ್ವರಾಜ್ ಬಳಿಯಲ್ಲಿ ಕೊರಗರ ಸಮಸ್ಯೆಗಳ ಬಗ್ಗೆ ತಿಳಿಸಿದಾಗ ಅವರು ಕೊರಗ ಬುಡಕಟ್ಟು ಅತ್ಯಂತ ಪುರಾತನ ಬುಡಕಟ್ಟಾಗಿದೆ. ಆದರೆ ಅವರು ಇಂದು ನಿರ್ಲಕ್ಷ್ಯಕ್ಕೆ ಒಳಗಾಗಿದ್ದಾರೆ. ಅವರು ಅತ್ಯಂತ ಮುಗ್ಧ ಜನರಾಗಿದ್ದಾರೆ. ಸರಕಾರ ಕೊರಗರಿಗೆ ಅನೇಕ ಸವಲತ್ತುಗಳನ್ನು ನೀಡಿದರೂ ಅದು ಅವರಿಗೆ ತಲುಪದಿರಲು ಕಾರಣವನ್ನು ಪತ್ತೆಹಚ್ಚುವುದಾಗಿ ತಿಳಿಸಿದ್ದಾರೆ. ಅಷ್ಟೇ ಅಲ್ಲದೆ ಅವರು ಅಧಿಕಾರಿಗಳು ಕೊರಗರ ಮನೆಮನೆಗಳಿಗೆ ತೆರಳಿ ಅವರ ಸಮಸ್ಯೆಗಳನ್ನು ಆಲಿಸಿ ಅದಕ್ಕೆ ಪರಿಹಾರ ಕೊಡಬೇಕೆಂದು ತಮ್ಮ ಅಭಿಪ್ರಾಯ ತಿಳಿಸಿದ್ದಾರೆ.

ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಕೊರಗ ಮಹಿಳೆಯರು ನಡೆಸುವ ಪ್ರಮುಖ ಚಟುವಟಿಕೆಗಳೆಂದರೆ,

೧. ಬುಟ್ಟಿ ಹೆಣೆಯುವುದು

೨. ಕೂಲಿ ಕೆಲಸಕ್ಕೆ ಹೋಗುವುದು

೩. ಬೀಡಿ ಕಟ್ಟುವುದು

೪. ಕೃಷಿ ಕೂಲಿ ಆಗಿ ದುಡಿಮೆ

೫. ಸ್ವಚ್ಛತೆ ಕೆಲಸಗಳಲ್ಲಿ ತೊಡಗುವುದು

೬. ಪಾಲಿಕೆಗಳಲ್ಲಿ ಕೆಲಸ ನಿರ್ವಹಿಸುವುದು.

ಆದರೆ ಇಂತಹ ಕೆಲಸ ನಿರ್ವಹಿಸುವ ಕೊರಗ ಮಹಿಳೆಯರಿಗೆ ಯಾವುದೇ ರೀತಿಯ ವಿಶೇಷ ಸವಲತ್ತುಗಳು ಸರ್ಕಾರದಿಂದ ಅನುಷ್ಠಾನವಾಗಿಲ್ಲ.

ಸರ್ಕಾರದಿಂದ ಅನುಷ್ಠಾನಗೊಳ್ಳಬೇಕಾಗಿರುವ ಪ್ರಮುಖ ವಿಷಯಗಳೆಂದರೆ,

೧. ಕೊರಗರಿಗೆ ಜೀವನ ನಿರ್ವಹಿಸಲು ಸರಿಯಾದ ಮಾರ್ಗದರ್ಶನ ನೀಡುವುದು.

೨. ಕೊರಗರಿಗೆ ಹಣಕಾಸಿನ ನೆರವನ್ನು ನೀಡುವುದು.

೩. ಕೊರಗರಲ್ಲಿ ಜಾಗೃತಿ ಕಾರ್ಯಕ್ರಮವನ್ನು ಮೂಡಿಸುವುದು.

೪. ಕೊರಗ ಮಕ್ಕಳು ಶಾಲೆಗೆ ಬರುವಂತೆ ಮಾಡಲು ವಿದ್ಯಾರ್ಥಿ ವೇತನ ಸೌಲಭ್ಯಗಳನ್ನು ಒದಗಿಸುವುದು.

೫. ಕೊರಗರಿಗೆ ಇರುವ ಸವಲತ್ತುಗಳ ಕುರಿತಾದ ಸಮರ್ಪಕ ಮಾಹಿತಿಯನ್ನು ಆಗಿಂದಾಗೆ ಅವರಿಗೆ ನೀಡುವುದು.

೬. ಕೊರಗರಿಗೆ ಪುಸ್ತಕ ಮತ್ತು ಬಟ್ಟೆಗಳ ವಿತರಣೆ ಮಾಡುವುದು.

ಆದರೆ ಇಂದಿಗೂ ಕೂಡ ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಕೊರಗರಿಗೆ ಸರ್ಕಾರದಿಂದ ಇಂತಹ ಯಾವುದೇ ಕಾರ್ಯಕ್ರಮಗಳು ಅನುಷ್ಠಾನವಾಗಿಲ್ಲ. ಇದಕ್ಕೆ ಸ್ಥಳೀಯ ಅಧಿಕಾರಿಗಳು ಕೂಡ ಕಾರಣರಾಗಿದ್ದಾರೆ.

**ಸರ್ಕಾರಿ ಆಶ್ರಮ ಶಾಲೆಗಳಲ್ಲಿ ಕಂಡುಬರುವ ಸಾಮಾನ್ಯ ಸಮಸ್ಯೆಗಳು**

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇಂದು ಹನ್ನೆರಡು ಹಾಗೂ ಉಡುಪಿ ಜಿಲ್ಲೆಯಲ್ಲಿ ಆರು ಆಶ್ರಮ ಶಾಲೆಗಳಿವೆ. ಆದರೆ ಕುಂದಾಪುರ ಹಾಗೂ ಬೈಂದೂರಿನಲ್ಲಿರುವ ಆಶ್ರಮ ಶಾಲೆಗಳಿಗೆ ಕೊರಗ ಮಕ್ಕಳ ದಾಖಲಾತಿ ಇಲ್ಲ. ಉಡುಪಿಯ ಬನ್ನಂಜೆಯಲ್ಲಿರುವ ಆಶ್ರಮ ಶಾಲೆಗಳಲ್ಲೂ ಕೊರಗ ಮಕ್ಕಳು ಕಂಡುಬರುವುದಿಲ್ಲ. ಆದ್ದರಿಂದ ಕೊಪ್ಪಳ, ರಾಯಚೂರು, ಬಾಗಲಕೋಟೆಯಲ್ಲಿನ ಮಕ್ಕಳು ಇಂತಹ ಆಶ್ರಮ ಶಾಲೆಗಳಲ್ಲಿ ಸೇರ್ಪಡೆಗೊಳ್ಳುತ್ತಿದ್ದಾರೆ.

ಕಾರ್ಕಳ, ಬಂಡಿಮಠದಲ್ಲಿರುವ ಆಶ್ರಮ ಶಾಲೆಗಳು ಬುಡಕಟ್ಟುಗಳಿಗಾಗಿಯೇ ಮೀಸಲಾಗಿದೆ. ಇಲ್ಲಿ ವಿದ್ಯಾರ್ಥಿ ನಿಲಯದ ಸೌಲಭವ್ಯವಿದೆ. ಆದರೆ, ಇಲ್ಲೂ ಕೊರಗ

ಮಕ್ಕಳ ದಾಖಲಾತಿ ಕಡಿಮೆ ಇದೆ. ಹೆಬ್ರಿಯಲ್ಲಿರುವ ಆಶ್ರಮ ಶಾಲೆಯಲ್ಲಿಯೂ ಬೆರಳೆಣಿಕೆಯಷ್ಟು ಮಾತ್ರ ಕೊರಗ ಮಕ್ಕಳಿದ್ದಾರೆ.

ಇಂದು ಆಶ್ರಮ ಶಾಲೆಗಳಲ್ಲಿ ಭ್ರಷ್ಟಾಚಾರ ಹೆಚ್ಚಾಗಿದೆ. ಕೊರಗ ಮಕ್ಕಳ ಸಂಖ್ಯೆ ಕಡಿಮೆಯಿರುವುದರಿಂದ ಬೇರೆ ಕಡೆಗಳಿಂದ ಮುಖ್ಯವಾಗಿ ಕೊಡಗು, ಚಿಕ್ಕಮಗಳೂರು ಪ್ರದೇಶದ ಮಕ್ಕಳನ್ನು ಇಲ್ಲಿ ಶಾಲೆಗಳಿಗೆ ದಾಖಲಿಸಲಾಗಿದೆ. ಮಕ್ಕಳ ಸಂಖ್ಯೆ ಕಡಿಮೆ ಇದ್ದರೂ ಸಂಖ್ಯೆಯನ್ನು ಹೆಚ್ಚು ತೋರಿಸುವುದು ಸಾಮಾನ್ಯವಾಗಿದೆ. ಆಹಾರದಲ್ಲಿರುವ ದಿನಚರಿಯನ್ನು ಸರಿಯಾಗಿ ಪಾಲಿಸುವುದಿಲ್ಲ. ಮಕ್ಕಳಿಗೆ ಕೊಡುವ ಆಹಾರವು ಕಳಪೆ ಮಟ್ಟದ್ದಾಗಿದೆ. ಕೊಡುವ ಆಹಾರವನ್ನೇ ಪುನರಾವರ್ತಿತ ರೂಪದಲ್ಲಿ ಮಕ್ಕಳಿಗೆ ನೀಡುವುದು ಕಂಡುಬರುತ್ತಿದೆ.

ಆಶ್ರಮ ಶಾಲೆಗಳ ಟೆಂಡರ್‌ಗಳಲ್ಲೂ ಅವ್ಯವಹಾರಗಳು ನಡೆಯುವುದನ್ನು ಕಾಣುತ್ತೇವೆ. ಸಮಾಜಕಲ್ಯಾಣ ಇಲಾಖೆ ಇತ್ತ ಕಡೆ ಗಮನ ಕೊಡುತ್ತಿಲ್ಲ. ಸಮಾಜ ಕಲ್ಯಾಣ ಇಲಾಖೆಯಲ್ಲಿ ಅಧಿಕಾರಿಗಳ ಕೊರತೆ ಇರುವುದರಿಂದ ಆಶ್ರಮ ಶಾಲೆಗಳಲ್ಲಿ ನಡೆಯುವ ಅವ್ಯವಹಾರಗಳಿಗೆ ಕಡಿವಾಣ ಇಲ್ಲವಾಗಿದೆ. ಒಬ್ಬ ವ್ಯಕ್ತಿಯೂ ಆಶ್ರಮ ಶಾಲೆಯ ಎಲ್ಲ ಉಸ್ತುವಾರಿಕೆಯನ್ನು ನೋಡಿಕೊಳ್ಳುವುದು ಸಾಮಾನ್ಯವಾಗಿದೆ. ಇದು ಅವ್ಯವಹಾರ ಹೆಚ್ಚಲು ಕಾರಣವಾಗಿದೆ. ಅದೇ ಕೇರಳದಲ್ಲಿರುವ ಆಶ್ರಮ ಶಾಲೆಗಳು ಬಹಳ ಉತ್ತಮವಾಗಿ ಕಾರ್ಯ ನಿರ್ವಹಿಸುತ್ತಿವೆ. ಇದನ್ನು ಗಮನಿಸಿದಾಗ ಸರ್ಕಾರವು ಈ ಸಮಸ್ಯೆಗೆ ಸೂಕ್ತ ರೀತಿಯಲ್ಲಿ ಸ್ಪಂದಿಸಿ ಕೊರಗರ ಮಕ್ಕಳಿಗೆ ಸೂಕ್ತ ನ್ಯಾಯವನ್ನು ಒದಗಿಸುವ ಮೂಲಕ ಕೊರಗ ಮಕ್ಕಳು ಕೂಡ ಉತ್ತಮ ಶಿಕ್ಷಣ ಪಡೆಯಲು ನೆರವಾಗುತ್ತದೆ.

ಉಡುಪಿಯ ಬುಡಕಟ್ಟು ಅಭಿವೃದ್ಧಿ ನಿರ್ದೇಶಕರು ಕೊರಗರಿಗೆ ಸರಕಾರದಿಂದ ವಿಶೇಷ ಪ್ಯಾಕೇಜ್‌ಗಳು ಇವೆ ಎಂದು ತಿಳಿಸಿದ್ದಾರೆ. ಇದನ್ನು ಕೊರಗರ ಗಮನಕ್ಕೆ ತರಬೇಕೆಂದು ಅಧಿಕಾರಿಗಳಿಗೆ ತಿಳಿಸಿದರು. ಕೊರಗರು ಇಂತಹ ಸವಲತ್ತುಗಳನ್ನು ಪಡೆಯಬೇಕೆಂದು ಅವರು ತಿಳಿಸಿದರು.

ಮಣಿಪಾಲದಲ್ಲಿ ಕ್ಷೇತ್ರಕಾರ್ಯ ಕೈಗೊಂಡಾಗ ಕೆಲವೊಂದು ಕೊರಗ ಕುಟುಂಬಗಳಿಗೆ ಎ.ಪಿ.ಎಲ್ ಕಾರ್ಡನ್ನು ವಿತರಿಸಿದ್ದು ಗಮನಕ್ಕೆ ಬಂದಿದೆ. ಅವರು ಬಡವರಾಗಿರುವುದರಿಂದ ಅವರಿಗೂ ಬಿ.ಪಿ.ಎಲ್ ಕಾರ್ಡುಗಳ ಅವಶ್ಯಕತೆಯಿದೆ. ರಾಜೀವ್ ಗಾಂಧಿ ವಿದ್ಯುಚ್ಛಕ್ತಿಕರಣ

ಯೋಜನೆಯ ಮೂಲಕ ಗ್ರಾಮೀಣ ಪ್ರದೇಶಗಳಿಗೆ ಉಚಿತವಾದ ವಿದ್ಯುತ್ ಸೌಕರ್ಯವನ್ನು ನೀಡಲಾಗುತ್ತಿದೆ. ಇದು ನಗರದ ಬಡವರಿಗೂ ಅನ್ವಯವಾಗುತ್ತದೆ. ಈ ಯೋಜನೆಯಲ್ಲಿ ಮೊದಲ ಪ್ರಾಶಸ್ತ್ಯ ಕೊರಗರಿಗೆ ನೀಡಲಾಗಿದೆ. ಆದರೆ ಮಾಹಿತಿಯ ಕೊರತೆಯಿಂದ ಈ ಯೋಜನೆಯು ಕೊರಗರಿಗೆ ತಲುಪುತ್ತಿಲ್ಲ. ಮಾಹಿತಿ ನೀಡುವಂಥ ಕೆಲಸ ಅಗಬೇಕಿದೆ.

ಕೊರಗರಲ್ಲಿ ಆರೋಗ್ಯದ ಸಮಸ್ಯೆಯಿದೆ. ಆದರೆ ಅವರು ಅದಕ್ಕೆ ಸೂಕ್ತ ರೀತಿಯಲ್ಲಿ ಚಿಕಿತ್ಸೆಯನ್ನು ಪಡೆಯುತ್ತಿಲ್ಲ. ಕೊರಗರ ಚಿಕಿತ್ಸಾ ವೆಚ್ಚವನ್ನು ಸರ್ಕಾರವೇ ಭರಿಸುತ್ತಿದೆ. ಆದರೂ ಸಹಃ ಕೊರಗರು ತಮಗೆ ಯಾವುದೇ ಕಾಯಿಲೆ ಬಂದಾಗ ಆಸ್ಪತ್ರೆಗೆ ಹೋಗದೇ ಇರುವುದು ದುರದೃಷ್ಟಕರ. ಇದಕ್ಕೆ ಪ್ರಮುಖವಾದ ಕಾರಣ. ಆಸ್ಪತ್ರೆ ವೆಚ್ಚವನ್ನು ಸರ್ಕಾರವೇ ಭರಿಸುತ್ತದೆ. ಉಚಿತವಾಗಿ ಚಿಕಿತ್ಸೆ ನೀಡಲಾಗುತ್ತದೆ. ಎಂಬ ಮಾಹಿತಿಯನ್ನು ಕೊರಗರಿಗೆ ಸರಿಯಾಗಿ ನೀಡಲಾಗುತ್ತಿಲ್ಲ. ಇಂದು ಕೊರಗರಿಗೆ ಇರುವ ಸವಲತ್ತುಗಳು ಸರಿಯಾಗಿ ಅವರಿಗೆ ತಲುಪದೇ ಇರಲು ಕಂದಾಯ ಇಲಾಖೆಯೂ ಕಾರಣವಾಗಿದೆ. ಆದ್ದರಿಂದ ಕಂದಾಯ ಇಲಾಖೆ ತಮ್ಮ ಸಮಸ್ಯೆಗಳನ್ನು ಬಗೆಹರಿಸಿಕೊಂಡು ಕೊರಗರಿಗೆ ಸವಲತ್ತುಗಳನ್ನು ನೀಡಬೇಕಾಗಿದೆ. ಗ್ರಾಮ ಪಂಚಾಯತ್‌ನಲ್ಲಿ ಇಬ್ಬರು ಕೊರಗರನ್ನು ಅಥವಾ ಇತರೆ ವ್ಯಕ್ತಿಯನ್ನು ಆರಿಸಿ ಕೊರಗರ ಬಗ್ಗೆ ಸಮಗ್ರವಾಗಿ ಅಧ್ಯಯನ ನಡೆಸಿ ಅವರ ಸಮಸ್ಯೆಗೆ ಪರಿಹಾರ ದೊರಕಿಸಿಕೊಡಬೇಕಾಗಿದೆ.

ಸರ್ಕಾರದಿಂದ ೧೦೦-೧೨೦ ಎಕರೆ ಜಾಗ ಕೊರಗರಿಗಾಗಿ ಮಂಜೂರಾಗಿದೆ. ಆದರೆ ಕೊರಗರು ಅದರಲ್ಲಿ ಕೃಷಿಯನ್ನು ಮಾಡುತ್ತಿಲ್ಲ. ಅದಕ್ಕೆ ಹಲವಾರು ಕಾರಣಗಳಿವೆ. ಮುಖ್ಯವಾಗಿ ಭೂಮಿಯು ಕೃಷಿ ಯೋಗ್ಯವಾಗಿಲ್ಲ. ಕೃಷಿ ಭೂಮಿಗೆ ಸಂಚಾರದ ಸಮಸ್ಯೆ ಇದೆ. ನೀರು ಸರಬರಾಜು ಸಮಸ್ಯೆಯಿದೆ. ಕೆಲವೊಮ್ಮೆ ಕೆಲವು ಕೊರಗರ ಉದಾಸೀನ ಮನೋಭಾವ ಕೂಡ ಕೃಷಿಭೂಮಿಯು ಬಂಜರು ಭೂಮಿಯಾಗಿ ಪರಿವರ್ತನೆಯಾಗಿದೆ.

ಉಡುಪಿ ನಗರಸಭೆಯು ಸಾಲಿಗ್ರಾಮದಲ್ಲಿ ಕೊರಗರ ಸಮೀಕ್ಷೆ ನಡೆಸಿತು. ಅಲ್ಲಿನ ಸುತ್ತಮುತ್ತಲಿನ ಪರಿಸರದ ಕೊರಗರ ಸಮಸ್ಯೆ ಪರಿಹರಿಸಲು ರೂಪುರೇಷೆ ಸಿದ್ಧಪಡಿಸಿತು. ಆದರೆ ಅದು ಯಾವಾಗ ಅನುಷ್ಠಾನವಾಗುತ್ತದೆ ಎನ್ನುವುದು ಕೊರಗರಿಗೆ ತಿಳಿದಿಲ್ಲ. ಕೊಕ್ಕರ್ಣೆ, ಪೆರ್ಡೂರು ಪ್ರದೇಶಗಳಲ್ಲಿ ಕೊರಗರು ಆರ್ಥಿಕ ಸಾಮಾಜಿಕ ಸಮಸ್ಯೆಯಿಂದ ಬಳಲುತ್ತಿದ್ದಾರೆ. ಉಡುಪಿ ಜಿಲ್ಲೆಯ ಕೊರಗರ ಸರ್ವೇ ಆಗಬೇಕೆಂದು ಶಾಸಕರಾದ ಪ್ರಮೋದ್ ಮಧ್ವರಾಜ್‌ರವರು ತಿಳಿಸಿದ್ದಾರೆ.

ಕೊರಗರಿಗೆ ಆದಾಯ ಪ್ರಮಾಣ ಪತ್ರವು ಅವಶ್ಯಕತೆಯಿಲ್ಲ; ಆದರೆ ಸರ್ಕಾರಿ ಸವಲತ್ತನ್ನು ಪಡೆಯಲು ಜಾತಿ ಪ್ರಮಾಣಪತ್ರ ಅವಶ್ಯಕವಾಗಿದೆ. ಅಷ್ಟೇ ಅಲ್ಲದೆ ಸರ್ಕಾರ ಭೂಮಿಯನ್ನು ಕೊಡುವಾಗ ಕೊರಗರಿಗೆ ವಾಸ್ತವ್ಯ ಪ್ರದೇಶಕ್ಕಿಂತ ತುಂಬಾ ದೂರದಲ್ಲಿ ನೀಡುತ್ತದೆ. ಇದರಿಂದ ಕೊರಗರಿಗೆ ಕೃಷಿ ಚಟುವಟಿಕೆ ಮಾಡಲು ಕಷ್ಟವಾಗುತ್ತಿದೆ. ಸರ್ಕಾರಿ ಕೆಲಸವಿಲ್ಲದ ಎಲ್ಲಾ ಕೊರಗರಿಗೆ ಬಿಪಿಎಲ್ ಕಾರ್ಡ್ ನೀಡಬೇಕಾಗಿದೆ. ಮನೆ ಕಟ್ಟಲು ೧ ಲಕ್ಷದ ೨೦ ಸಾವಿರ ಮಂಜೂರಾಗಬೇಕಾದರೆ ಆರ್.ಟಿ.ಸಿ.ಯ ಅಗತ್ಯವಿಲ್ಲ. ಇದು ಇಂದಿಗೂ ಸರಿಯಾಗಿ ಅನುಷ್ಠಾನವಾಗಿಲ್ಲ.

**೫.೪. ಕ್ರಿಯಾತ್ಮಕ ಸಂಘಟನೆಗಳ ಕೊರತೆ**

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕೊರಗರಿರುವ ಪ್ರದೇಶಗಳಲ್ಲಿ ಅನೇಕ ಸಂಘಟನೆಗಳು ಸಕ್ರಿಯವಾಗಿದ್ದು ಕೊರಗರ ಹಕ್ಕು ಸವಲತ್ತುಗಳಿಗಾಗಿ ಶ್ರಮಿಸುತ್ತಿವೆ. ಆಡಳಿತದ ಜೊತೆ ಹೊಂದಾಣಿಕೆಯಿಂದ ವ್ಯವಹರಿಸಿ ತಮ್ಮ ಬೇಕು-ಬೇಡಗಳನ್ನು ಪೂರೈಸಿ ಕೊಳ್ಳುವ ಸಲುವಾಗಿ, ತಮ್ಮ ಹಕ್ಕುಗಳಿಗಾಗಿ ಹೋರಾಟ ಮಾಡುವ ಸಲುವಾಗಿ ಕೊರಗರು ಸಂಘಟನೆಗಳನ್ನು ಹುಟ್ಟುಹಾಕಿದ್ದಾರೆ. ಆ ಮೂಲಕ ಅಮಾನುಷ ಪದ್ಧತಿಯಾದ ಅಜಲು ಪದ್ಧತಿಯನ್ನು ನಿಷೇಧಿಸುವಲ್ಲಿ ಅವಿರತ ಹೋರಾಟ ಮಾಡಿ ಫಲ ಕಂಡಿದ್ದಾರೆ. ಸರಿಸುಮಾರು ೧೯೮೩ರಿಂದಲೂ ಅನೇಕ ಸಂಘಟನೆಗಳೆಲ್ಲ ಸೇರಿ ಮನವಿಪತ್ರ, ಜಾಥಾ, ಅಹೋರಾತ್ರಿ ಪ್ರತಿಭಟನೆ, ಮುತ್ತಿಗೆ ಇನ್ನಿತರ ಸ್ವರೂಪದಲ್ಲಿ ಸಂಘಟನಾತ್ಮಕ ಹೋರಾಡಿ ಅಜಲು ಪದ್ಧತಿಯನ್ನು ರಾಜ್ಯ ಸರ್ಕಾರ ನಿಷೇಧಿಸುವಲ್ಲಿ ಶ್ರಮವಹಿಸಿರುವುದು ಕಂಡುಬರುತ್ತದೆ. ಬಹುತೇಕ ಕೊರಗರಿಗೆ ಕೃಷಿಭೂಮಿ, ವಸತಿಗಾಗಿ ಭೂಮಿ ಇಲ್ಲ. ಈ ಮೂಲಭೂತ ಅವಶ್ಯಕತೆಯನ್ನು ಕಂಡು ಸಂಘಟನೆಗಳು ಹೋರಾಟ ಮಾಡಿರುವುದನ್ನು ಕಾಣಬಹುದು. ಸಂಘಟನೆಗಳ ಅವಿರತ ಹೋರಾಟದಿಂದಾಗಿ ಒಂದೆರಡು ಕಂತುಗಳಲ್ಲಿ ಸರ್ಕಾರ ೨೦೦-೫೦೦ ಎಕರೆ ಭೂಮಿಯನ್ನು ಕೊರಗರಿಗೆ ನೀಡಿತು. ತದನಂತರದಲ್ಲಿ ಭೂಮಿಯನ್ನು ಕೊರಗರಿಗೆ ನೀಡಬೇಕಾಗಿದೆ. ಇದಕ್ಕಾಗಿ ಕೆಲವೇ ಕೆಲವು ಸಂಘಟನೆಗಳು ಈಗಲೂ ಧನಿ ಎತ್ತಿರುವುದು ಕಂಡುಬರುತ್ತಿದೆ.

ಕೊರಗರ ಅಭಿವೃದ್ಧಿಗಾಗಿ ಅವಿರತವಾಗಿ ಶ್ರಮಿಸಿದ ಪ್ರಮುಖವಾದ ಸರ್ಕಾರೇತರ ಸಂಘಟನೆಗಳೆಂದರೆ,

೧. ಸಮಗ್ರ ಗ್ರಾಮೀಣ ಆಶ್ರಮ

೨. ಗ್ರಾಮೀಣ ಅಭಿವೃದ್ಧಿ ಯೋಜನಾ

೩. ಯುನೆಸ್ಕೋ ಕ್ಲಬ್, ಮಂಗಳೂರು

೪. ಸೇವಾ ಸಂಗಮ

೫. ಆಶಿಕಾ ಕುಂದಾಪುರ

೬. ಸ್ಫೂರ್ತಿ

೭. ಭೀಮ ಸಂಘ

೮. ಧರ್ಮಜ್ಯೋತಿ

೯. ಗ್ರಾಮಾಶ್ರಮ, ಬಸ್ರೂರು

೧೦. ಸುಭಧ, ಸರಳ್‌ಪಾಡಿ

೧೧. ಶ್ರೀಜನ, ಯಕ್ಕೂರು

ಮೇಲಿನ ಸರ್ಕಾರೇತರ ಸಂಘಟನೆಗಳಿಂದಾಗಿ ಸ್ವಲ್ಪಮಟ್ಟಿಗಾದರೂ ಕೊರಗರು ಸಾಮಾಜಿಕ ಪರಿವರ್ತನೆ ಹಾದಿಯಲ್ಲಿದ್ದಾರೆ.

**೫.೫. ಕೊರಗರ ಆರೋಗ್ಯ ಮತ್ತು ಶಿಕ್ಷಣ**

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸರಿಸುಮಾರು ೧೫ ಸಾವಿರದಷ್ಟು ಜನಸಂಖ್ಯೆಯನ್ನು ಹೊಂದಿರುವ ಕೊರಗರಲ್ಲಿ ಶಿಕ್ಷಣ ಪಡೆದವರ ಶೇಕಡವಾರು ಸಂಖ್ಯೆ ಎರಡಂಕಿಯನ್ನು ದಾಟಿಲ್ಲ ಎಂಬುದು ಆಶ್ಚರ್ಯದ ಸಂಗತಿ. ಕರಾವಳಿ ಕರ್ನಾಟಕದ ಉಡುಪಿ ಮತ್ತು ದಕ್ಷಿಣ ಕನ್ನಡ ಎರಡು ಜಿಲ್ಲೆಯಲ್ಲಿ ಹತ್ತನೇ ತರಗತಿಗಿಂತ ಕಡಿಮೆ ವಿದ್ಯಾಭ್ಯಾಸ ಮಾಡಿದವರು ಕೇವಲ ೬೦೨ ಮಾತ್ರ. ೧೦ನೇ ತರಗತಿ ಪಾಸು ಮಾಡಿದವರು ೧೨೦ ಕೊರಗರಿದ್ದಾರೆ. ಪಿಯುಸಿ ವಿದ್ಯಾಭ್ಯಾಸ ಮಾಡಿದವರು ೧೩೩ ಜನ ಕೊರಗರು ಮಾತ್ರ. ೭೦ ಜನ ಕೊರಗ ವಿದ್ಯಾರ್ಥಿಗಳು ಪದವಿ ಪಡೆದಿದ್ದಾರೆ. ಸ್ನಾತಕೋತ್ತರ ಪದವಿಯನ್ನು ೫೨ ಜನ ಪಡೆದಿದ್ದರೆ, ಬಿಎಸ್‌ಡಬ್ಲ್ಯೂ ಪದವಿಯನ್ನು ೬ ಜನ ಕೊರಗರು ಪಡೆದಿದ್ದಾರೆ. ೨೨ ಜನ ಐಟಿಪಿ/ಡಿಪ್ಲೊಮಾ ಓದಿದ್ದಾರೆ. ಇಬ್ಬರು ಇಂಜಿನಿಯರಿಂಗ್ ಪದವಿ ಪಡೆದಿದ್ದಾರೆ. ೧೮ ಜನ ಬಿಎಬಿಎಡ್, ೩೦ ಜನ ನರ್ಸಿಂಗ್ ಮತ್ತು ಇಬ್ಬರು ಕಾನೂನು ಪದವಿಯನ್ನು ಪಡೆದಿದ್ದಾರೆ. ಹೀಗಾಗಿ ಕೊರಗರಲ್ಲಿ ಅನೇಕರು ಇನ್ನು ಶಿಕ್ಷಣ ಪಡೆಯದಿರುವುದು ಕಂಡು ಬರುತ್ತದೆ.

ಒಂದರಿಂದ ೪ನೇ ತರಗತಿಯವರೆಗೆ ಪ್ರಾಥಮಿಕ ಶಿಕ್ಷಣವೆಂದು, ೫ರಿಂದ ೭ನೇ ತರಗತಿಯವರೆಗೆ ಮಾಧ್ಯಮಿಕ ಶಿಕ್ಷಣವೆಂದು, ೮ರಿಂದ ೧೦ನೇ ತರಗತಿಯವರೆಗೂ ಪ್ರೌಢ ಶಿಕ್ಷಣವೆಂದು, ೧೧ ರಿಂದ ೧೨ನೇ ತರಗತಿವರೆಗೂ ಪಿಯುಸಿ, ಪದವಿಪೂರ್ವ ಶಿಕ್ಷಣವೆಂದು, ಅದರ ನಂತರದ ೩ ವರ್ಷಗಳ ಶಿಕ್ಷಣವನ್ನು ಪದವಿ ಶಿಕ್ಷಣವೆಂದು, ಇತರೆ ಶಿಕ್ಷಣವನ್ನು ತಾಂತ್ರಿಕ ಶಿಕ್ಷಣ ಮತ್ತು ಇತರೆ ಶಿಕ್ಷಣವನ್ನು ಅದನ್ನು ಇತರೆ ವಿಭಾಗದಲ್ಲಿ ನೋಡಲಾಗಿದೆ.

**ಶಾಲೆಯಿಂದ ಹೊರಗುಳಿದ ೭-೧೪ ವಯೋಮಾನದ ಮಕ್ಕಳ ವಿವರ**

ಆರ್ಥಿಕ ಹಾಗೂ ಸಾಂಖ್ಯಿಕ ನಿರ್ದೇಶನಾಲಯವು ೨೦೦೪ರಲ್ಲಿ ಪರಿಶಿಷ್ಟ ಪಂಗಡದ ಕುಟುಂಬಗಳ ಕುರಿತು ಮಾದರಿ ಸಮೀಕ್ಷೆಯನ್ನು ಕೈಗೊಂಡಿತ್ತು. ಅದು ೯-೩೫ ವಯೋಮಾನದೊಳಗಿನ ಜನರ ಮಾಹಿತಿಯನ್ನು ಪಡೆದಿದೆ. ಈ ಸಮೀಕ್ಷೆಯು ಹೆಣ್ಣುಮಕ್ಕಳು ಶಾಲೆಯನ್ನು ಬಿಡಲು ಕೆಲವು ಕಾರಣಗಳನ್ನು ಗುರುತಿಸಿದೆ. ಅವುಗಳಾವುವೆಂದರೆ ಕ್ರಮವಾಗಿ

೧. ಮನೆಯಲ್ಲಿ ಗೃಹಕೃತ್ಯದ ಕೆಲಸಗಳಲ್ಲಿ ತೊಡಗುವುದು.

೨. ಪಾಲಕರಿಗೆ ಮಕ್ಕಳ ಶಿಕ್ಷಣದ ಹೊರೆ ಭರಿಸಲು ಸಾಧ್ಯವಾಗದೇ ಇರುವುದು.

೩. ಮಕ್ಕಳ ಪಾಲನೆ ಪೋಷಣೆಗಾಗಿ ಶಾಲೆ ತೊರೆಯುವುದು.

೪. ಹೊರಗೆ ಕೂಲಿ ಕೆಲಸಗಳಲ್ಲಿ ತೊಡಗುವುದು.[೩]

ಪ್ರೌಢ ಶಿಕ್ಷಣದಲ್ಲಿಯ ದಾಖಲಾತಿ ಪ್ರಮಾಣವು ಪ್ರಾಥಮಿಕ ಹಂತಕ್ಕಿಂತಲೂ ಕಡಿಮೆ ಯಾಗಿದೆ. ಹಾಗೇ ಉನ್ನತ ಶಿಕ್ಷಣ ಹಂತದಲ್ಲಿ ಈ ಪ್ರಮಾಣ ಇನ್ನು ಕುಗ್ಗುತ್ತದೆ. ತಾಂತ್ರಿಕ ಶಿಕ್ಷಣದಲ್ಲಂತೂ (ಡಿಪ್ಲೊಮಾ, ಬಿ.ಇ, ಬಿಟೆಕ್, ವೈದ್ಯಕೀಯ ಇತ್ಯಾದಿ) ಪರಿಶಿಷ್ಟ ಪಂಗಡದ ಮಕ್ಕಳ ಪಾಲು ೨೦೦೦ದಲ್ಲಿ ಶೇಕಡ ೦.೧ರಷ್ಟು ಇದ್ದು ೨೦೦೨-೦೩ರ ಹೊತ್ತಿಗೆ ಅದು ಶೇಕಡ ೧.೭ರಷ್ಟು ಏರಿಕೆ ಕಂಡಿದೆ. ಡಿಪೊಮಾ ಕೋರ್ಸ್‌ಗಳಲ್ಲಿ ಪರಿಶಿಷ್ಟ ಪಂಗಡಗಳ ವಿದ್ಯಾರ್ಥಿಗಳ ದಾಖಾಲಾತಿಯು ಕನಿಷ್ಠ ಶೇಕಡ ೦.೭ರಷ್ಟು ಕಂಡು ಬಂದಿದೆ(ಮಾನವಾಭಿವೃದ್ಧಿ ವರದಿ:೨೦೦೫:೨೫೯) ಅಂದರೆ ತಾಂತ್ರಿಕ ಶಿಕ್ಷಣವನ್ನು ಪಡೆಯುವಲ್ಲಿ ಪರಿಶಿಷ್ಟ ಪಂಗಡಗಳು ಸೋತಿವೆ ಎಂದೇ ಇದರರ್ಥ.

ಸರ್ಕಾರದ ಹೊಸ ಹೊಸ ಯೋಜನೆಗಳಾದ ವಿದ್ಯಾರ್ಥಿವೇತನ, ಉಚಿತ ವಸತಿ ನಿಲಯಗಳ ಸೌಲಭ್ಯ ಇತ್ಯಾದಿಗಳು ಇಂದು ಪರಿಶಿಷ್ಟ ಪಂಗಡದ ಮಕ್ಕಳಿಗೆ ದೊರೆಯುತ್ತಿವೆ ಯಾದರೂ ಆ ಸಮುದಾಯಗಳು ನಿರೀಕ್ಷಿತ ಮಟ್ಟದಲ್ಲಿ ಶೈಕ್ಷಣಿಕ ಪ್ರಗತಿಯನ್ನು ಪಡೆಯಲು ಸಾಧ್ಯವಾಗುತ್ತಿಲ್ಲ.

ಕೊರಗ ಸಮುದಾಯ ಸಾಕ್ಷರತೆಯಲ್ಲಿ ಅತ್ಯಂತ ಹಿಂದುಳಿದಿದೆ. ಇವರ ಸಾಕ್ಷರತೆ ಶೇ. ೫೧ರಷ್ಟು ಇದ್ದು ರಾಜ್ಯದ ಹಾಗೂ ಜಿಲ್ಲೆಯ ಸಾಕ್ಷರತೆಗಿಂತ ಅತ್ಯಂತ ಕಡಿಮೆ ಇದೆ. ಅರಣ್ಯ ಪ್ರದೇಶದಲ್ಲಿ ಇರುವವರಲ್ಲಿ ಸಾಕ್ಷರತೆ ಎಂಬುದು ಇನ್ನೂ ಕನಸಿನ ಮಾತಾಗಿಯೇ ಉಳಿದಿದೆ. ಸರ್ಕಾರದ ಸಾಮೂಹಿಕ ಸಾಕ್ಷರತಾ ಆಂದೋಲನದ ಪ್ರಭಾವವು ಸಹ ಇವರನ್ನು ಇನ್ನೂ ಮುಟ್ಟದೇ ಇರುವುದು ವಿಪರ್ಯಾಸವೇ ಸರಿ. ಔಪಚಾರಿಕ ಆಧುನಿಕ ಶಿಕ್ಷಣ ಅಂದರೆ ಶಾಲಾ ಶಿಕ್ಷಣ ಕೊರಗ ಸಮುದಾಯಕ್ಕೆ ಅತ್ಯಂತ ಹೊಸತು ಮತ್ತು ಇತ್ತೀಚಿನದು. ಬಹು ಹಿಂದೆ ಮಕ್ಕಳು ತಮ್ಮ ತಂದೆ-ತಾಯಿ ಮತ್ತು ಕುಟುಂಬದ ಸದಸ್ಯರಿಂದ ಅನೌಪಚಾರಿಕ ಶಿಕ್ಷಣವನ್ನು ಕೆಲಸ ಕಾರ್ಯಗಳ ಮೂಲಕ ಪಡೆಯುತ್ತಿದ್ದರು.

ದಕ್ಷಿಣ ಕನ್ನಡ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಮಂಗಳೂರು, ಬಂಟ್ವಾಳ, ಪುತ್ತೂರು, ಬೆಳ್ತಂಗಡಿ ಹಾಗೂ ಸುಳ್ಯ ತಾಲೂಕಿನ ಐದು ತಾಲೂಕಗಳನ್ನೊಳಗೊಂಡಂತೆ ಸಾಕ್ಷರರಲ್ಲಿ ಶೈಕ್ಷಣಿಕ ಹಂತಗಳನ್ನು ಗಮನಿಸಿದಾಗ ಪ್ರಾಥಮಿಕ ಶೇ. ೪೦ರಷ್ಟು ಕಂಡುಬಂದಿದೆ. ಮಾಧ್ಯಮಿಕ ಶೇ. ೨೩ರಷ್ಟು ಕಾಣಸಿಗುತ್ತದೆ. ಇನ್ನುಳಿದ ಹಂತಗಳಾದ ಪ್ರೌಢ ಶೇ. ೧೯, ಪದವಿಪೂರ್ವ ಶೇ. ೯, ಪದವಿ ಶೇ. ೬, ಸ್ನಾತಕೋತ್ತರ ಶೇ. ೧, ಇತರೆ ಶೇ. ೧ರಷ್ಟಿದ್ದು, ಯಾವುದೇ ಡಿಪ್ಲೊಮಾ ಶಿಕ್ಷಣದಲ್ಲಿ ಶೇ. ೧ರಷ್ಟು ಹಾಗೂ ಉಳಿದ ಅನಕ್ಷರಸ್ಥರ ಪ್ರಮಾಣ ಇರುವುದು ಕ್ಷೇತ್ರಕಾರ್ಯದ ಅಂಕಿಅಂಶಗಳ ಮಾಹಿತಿಯಿಂದ ತಿಳಿದುಬರುತ್ತದೆ.

**ಕೋಷ್ಟಕ ೧. ಸಮೀಕ್ಷೆಗೊಳಪಟ್ಟ ದಕ್ಷಿಣ ಕನ್ನಡ ಜಿಲ್ಲೆಯ ಕೊರಗ ಸಮುದಾಯದ ತಾಲೂಕುವಾರು ಮತ್ತು ಲಿಂಗವಾರು ಶೈಕ್ಷಣಿಕ ಮಟ್ಟ**

| ಕ್ರ ಸಂ. | ಕಸುಬುಗಳು | ಮಂಗಳೂರು | | ಬಂಟ್ವಾಳ | | ಪುತ್ತೂರು | | ಬೆಳ್ತಂಗಡಿ | | ಸುಳ್ಯ | |
|---|---|---|---|---|---|---|---|---|---|---|---|
| | | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು |
| ೧ | ಪ್ರಾಥಮಿಕ | ೧೨೮ | ೯೮ | ೧೦೫ | ೮೨ | ೯೬ | ೬೫ | ೭೫ | ೫೩ | ೫೦ | ೩೭ |
| ೨ | ಮಾಧ್ಯಮಿಕ | ೬೨ | ೫೩ | ೫೮ | ೪೪ | ೪೬ | ೩೦ | ೪೮ | ೩೬ | ೪೩ | ೩೩ |
| ೩ | ಪ್ರೌಢ | ೫೦ | ೩೯ | ೫೦ | ೩೮ | ೩೮ | ೨೮ | ೩೮ | ೨೨ | ೩೯ | ೨೦ |
| | ಡಿಪ್ಲೊಮಾ | ೬ | | ೪ | ೧ | ೪ | ೧ | ೩ | | ೨ | ೧ |
| ೪ | ಪದವಿಪೂರ್ವ | ೨೬ | ೧೨ | ೨೪ | ೧೮ | ೨೦ | ೧೨ | ೧೯ | ೧೩ | ೧೬ | ೯ |
| ೫ | ಪದವಿಯೇತರ | ೨೦ | ೧೫ | ೧೮ | ೧೨ | ೧೨ | ೮ | ೧೧ | ೮ | ೧೦ | ೩ |
| ೬ | ಸ್ನಾತಕೋತ್ತರ | ೪ | ೨ | ೩ | ೧ | ೨ | | ೧ | | ೧ | ೧ |
| ೭ | ಇತರೆ | ೩ | ೧ | ೨ | ೩ | ೧ | ೨ | ೧ | ೩ | ೨ | ೧ |
| | ಒಟ್ಟು | ೨೯೯ | ೨೨೦ | ೨೬೪ | ೧೯೯ | ೨೧೯ | ೧೪೬ | ೧೯೬ | ೧೩೫ | ೧೬೩ | ೧೦೫ |

ದಕ್ಷಿಣ ಕನ್ನಡ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಮಂಗಳೂರು, ಬಂಟ್ವಾಳ, ಪುತ್ತೂರು, ಬೆಳ್ತಂಗಡಿ ಹಾಗೂ ಸುಳ್ಯ ತಾಲೂಕಿನ ಐದು ತಾಲೂಕಗಳನ್ನೊಳಗೊಂಡಂತೆ ಸಾಕ್ಷರರಲ್ಲಿ ಶೈಕ್ಷಣಿಕ ಹಂತಗಳನ್ನು ಗಮನಿಸಿದಾಗ ಪ್ರಾಥಮಿಕ ಶೇ. ೪೦ರಷ್ಟು ಕಂಡುಬಂದಿದೆ. ಮಾಧ್ಯಮಿಕ ಶೇ. ೨೩ರಷ್ಟು ಕಾಣಸಿಗುತ್ತದೆ. ಇನ್ನುಳಿದ ಹಂತಗಳಾದ ಪ್ರೌಢ ಶೇ. ೧೯, ಪದವಿಪೂರ್ವ ಶೇ. ೯, ಪದವಿ ಶೇ. ೬, ಸ್ನಾತಕೋತ್ತರ ಶೇ. ೧, ಇತರೆ ಶೇ. ೧ರಷ್ಟಿದ್ದು, ಯಾವುದೇ ಡಿಪ್ಲೊಮಾ ಶಿಕ್ಷಣದಲ್ಲಿ ಶೇ. ೧ರಷ್ಟು ಹಾಗೂ ಉಳಿದ ಅನಕ್ಷರಸ್ಥರ ಪ್ರಮಾಣ ಇರುವುದು ಕ್ಷೇತ್ರಕಾರ್ಯದ ಅಂಕಿಅಂಶಗಳ ಮಾಹಿತಿಯಿಂದ ತಿಳಿದುಬರುತ್ತದೆ.

ಮಂಗಳೂರು ತಾಲೂಕಿನ ಗ್ರಾಮ ಪಂಚಾಯತ್ ಸಾಕ್ಷರರಲ್ಲಿ ಶೈಕ್ಷಣಿಕ ಹಂತಗಳನ್ನು ಗಮನಿಸಿದಾಗ ಪ್ರಾಥಮಿಕ ಶೇ. ೪೪ರಷ್ಟು ಕಂಡುಬಂದರೆ, ಮಾಧ್ಯಮಿಕ ಶೇ. ೨೨ರಷ್ಟು ಕಾಣಸಿಗುತ್ತದೆ. ಇನ್ನುಳಿದ ಹಂತಗಳಾದ ಪ್ರೌಢ ಶೇ. ೧೭, ಪದವಿಪೂರ್ವ ಶೇ. ೭, ಡಿಪ್ಲೊಮಾ, ಶೇ. ೧, ಪದವಿ ಶೇ. ೭, ಸ್ನಾತಕೋತ್ತರ ಶೇ. ೧, ಇತರೆ ಶಿಕ್ಷಣದಲ್ಲಿ ಶೇ. ೧, ಹಾಗೂ ಶೇ. ೪೩.೯ರಷ್ಟು ಅನಕ್ಷರಸ್ಥರ ಪ್ರಮಾಣ ಇರುವುದು ಕ್ಷೇತ್ರಕಾರ್ಯದ ಅಂಕಿಅಂಶಗಳ ಮಾಹಿತಿಯಿಂದ ತಿಳಿದುಬರುತ್ತದೆ.

ಬಂಟ್ವಾಳ ತಾಲೂಕಿನ ವ್ಯಾಪ್ತಿಯಲ್ಲಿ ಬರುವ ಗ್ರಾಮ ಪಂಚಾಯತ್ ಕ್ಷೇತ್ರಗಳಲ್ಲಿರುವ ಸಾಕ್ಷರರಲ್ಲಿ ಶೈಕ್ಷಣಿಕ ಹಂತಗಳನ್ನು ಗಮನಿಸಿದಾಗ ಪ್ರಾಥಮಿಕ ಶೇ. ೪೦ರಷ್ಟು ಕಂಡುಬಂದರೆ, ಮಾಧ್ಯಮಿಕ ಶೇ. ೨೨ರಷ್ಟು ಕಾಣಸಿಗುತ್ತದೆ. ಇನ್ನುಳಿದ ಹಂತಗಳಾದ ಪ್ರೌಢ ಶೇ. ೧೯, ಡಿಪ್ಲೊಮಾ ಶೇ. ೧, ಪದವಿಪೂರ್ವ ಶೇ. ೯, ಪದವಿ ಶೇ. ೭, ಸ್ನಾತಕೋತ್ತರ ಶೇ. ೧, ಇತರೆ ಶೇ. ೧ರಷ್ಟಿದ್ದು, ಹಾಗೂ ಶೇ. ೪೮.೪೧ರಷ್ಟು ಅನಕ್ಷರಸ್ಥರ ಪ್ರಮಾಣ ಇರುವುದು ಕ್ಷೇತ್ರಕಾರ್ಯದ ಅಂಕಿಅಂಶಗಳ ಮಾಹಿತಿಯಿಂದ ತಿಳಿದುಬರುತ್ತದೆ.

ಪುತ್ತೂರು ತಾಲೂಕಿನ ವ್ಯಾಪ್ತಿಯಲ್ಲಿ ಬರುವ ಗ್ರಾಮ ಪಂಚಾಯತ್ ಕ್ಷೇತ್ರಗಳಲ್ಲಿರುವ ಸಾಕ್ಷರರಲ್ಲಿ ಶೈಕ್ಷಣಿಕ ಹಂತಗಳನ್ನು ಗಮನಿಸಿದಾಗ ಪ್ರಾಥಮಿಕ ಶೇ. ೪೪ರಷ್ಟು ಕಂಡುಬಂದರೆ, ಮಾಧ್ಯಮಿಕ ಶೇ. ೨೧ರಷ್ಟು ಕಾಣಸಿಗುತ್ತದೆ. ಇನ್ನುಳಿದ ಹಂತಗಳಾದ ಪ್ರೌಢ ಶೇ. ೧೮, ಡಿಪ್ಲೊಮಾ ಶೇ. ೧, ಪದವಿಪೂರ್ವ ಶೇ. ೯, ಪದವಿ ಶೇ. ೧, ಇತರೆ ಶೇ. ೧ರಷ್ಟಿದೆ. ಹಾಗೂ ಶೇ. ೩೯.೧೧ರಷ್ಟು ಅನಕ್ಷರಸ್ಥರ ಪ್ರಮಾಣ ಇರುವುದು ಕಂಡುಬಂದಿದೆ.

ಬೆಳ್ತಂಗಡಿ ತಾಲೂಕಿನ ವ್ಯಾಪ್ತಿಯಲ್ಲಿ ಬರುವ ಗ್ರಾಮ ಪಂಚಾಯತ್ ಕ್ಷೇತ್ರಗಳಲ್ಲಿರುವ ಸಾಕ್ಷರರಲ್ಲಿ ಶೈಕ್ಷಣಿಕ ಹಂತಗಳನ್ನು ಗಮನಿಸಿದಾಗ ಪ್ರಾಥಮಿಕ ಶೇ. ೩೯ರಷ್ಟು ಕಂಡುಬಂದರೆ,

ಮಾಧ್ಯಮಿಕ ಶೇ. ೨೫ರಷ್ಟು ಕಾಣಸಿಗುತ್ತದೆ. ಇನ್ನುಳಿದ ಹಂತಗಳಾದ ಪ್ರೌಢ ಶೇ. ೧೮, ಡಿಪ್ಲೊಮಾ ಶೇ. ೧, ಪದವಿಪೂರ್ವ ಶೇ. ೫, ಪದವಿ ಶೇ. ೬, ಇತರೆ ಶೇ. ೧ರಷ್ಟಿದೆ. ಹಾಗೂ ಶೇ. ೪೦.೧೧ರಷ್ಟು ಅನಕ್ಷರಸ್ಥರ ಪ್ರಮಾಣ ಇರುವುದು ಕಂಡುಬಂದಿದೆ.

ಸುಳ್ಯ ತಾಲೂಕಿನ ವ್ಯಾಪ್ತಿಯಲ್ಲಿ ಬರುವ ಗ್ರಾಮಪಂಚಾಯತ್ ಕ್ಷೇತ್ರಗಳಲ್ಲಿರುವ ಸಾಕ್ಷರರಲ್ಲಿ ಶೈಕ್ಷಣಿಕ ಹಂತಗಳನ್ನು ಗಮನಿಸಿದಾಗ ಪ್ರಾಥಮಿಕ ಶೇ. ೩೩ರಷ್ಟು ಕಂಡುಬಂದರೆ, ಮಾಧ್ಯಮಿಕ ಶೇ. ೨೮ರಷ್ಟು ಕಾಣಸಿಗುತ್ತದೆ. ಇನ್ನುಳಿದ ಹಂತಗಳಾದ ಪ್ರೌಢ ಶೇ. ೨೨, ಡಿಪ್ಲೊಮಾ ಶೇ. ೧, ಪದವಿಪೂರ್ವ ಶೇ. ೯, ಪದವಿ ಶೇ. ೫, ಸ್ನಾತಕೋತ್ತರ ಶೇ. ೧, ಇತರೆ ಶೇ. ೧ರಷ್ಟಿದ್ದು, ಹಾಗೂ ಶೇ. ೪೬.೪೧ರಷ್ಟು ಅನಕ್ಷರಸ್ಥರ ಪ್ರಮಾಣ ಇರುವುದು ಕ್ಷೇತ್ರಕಾರ್ಯದ ಅಂಕಿಅಂಶಗಳ ಮಾಹಿತಿಯಿಂದ ತಿಳಿದುಬರುತ್ತದೆ.

**ವೃತ್ತಚಿತ್ರ ೧. ದಕ್ಷಿಣ ಕನ್ನಡ ಜಿಲ್ಲೆಯ ಕೊರಗ ಸಮುದಾಯದ ತಾಲೂಕುವಾರು ಮತ್ತು ಲಿಂಗವಾರು ಶೈಕ್ಷಣಿಕ ಪ್ರಮಾಣ**



**ಕೋಷ್ಟಕ ೨. ಸಮೀಕ್ಷಿಸಿಗೊಳಪಟ್ಟ ಉಡುಪಿ ಜಿಲ್ಲೆಯ ಕೊರಗ ಸಮುದಾಯದ ತಾಲೂಕುವಾರು ಮತ್ತು ಲಿಂಗವಾರು ಶೈಕ್ಷಣಿಕ ಮಟ್ಟ**

| ಕ್ರ ಸಂ | ಕಸುಬುಗಳು | ಉಡುಪಿ | | | ಕಾರ್ಕಳ | | | ಕುಂದಾಪುರ | | |
|---|---|---|---|---|---|---|---|---|---|---|
| | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧ | ಪ್ರಾಥಮಿಕ | ೧೫೩ | ೧೧೫ | ೨೬೮ | ೧೦೨ | ೯೬ | ೧೯೮ | ೧೦೮ | ೮೯ | ೧೯೭ |
| ೨ | ಮಾಧ್ಯಮಿಕ | ೧೨೨ | ೯೮ | ೨೨೦ | ೯೯ | ೭೫ | ೧೭೪ | ೯೬ | ೭೫ | ೧೭೧ |
| ೩ | ಪ್ರೌಢ | ೧೧೨ | ೮೯ | ೨೦೧ | ೯೫ | ೬೯ | ೧೬೪ | ೮೯ | ೬೯ | ೧೫೮ |
| | ಡಿಪ್ಲೊಮಾ | ೧೨ | ೨ | ೧೪ | ೩ | | ೩ | ೪ | ೧ | ೫ |
| ೪ | ಪದವಿಪೂರ್ವ | ೧೦೦ | ೭೫ | ೧೭೫ | ೮೭ | ೬೯ | ೧೫೬ | ೭೫ | ೬೬ | ೧೪೧ |
| ೫ | ಪದವಿಯೇತರ | ೯೨ | ೬೯ | ೧೬೧ | ೭೪ | ೫೫ | ೧೨೯ | ೬೯ | ೫೬ | ೧೨೫ |
| ೬ | ಸ್ನಾತಕೋತ್ತರ | ೧೫ | ೪ | ೧೯ | ೧೨ | ೨ | ೧೪ | ೧೧ | ೨ | ೧೩ |
| ೭ | ಇತರೆ | ೧೩ | ೪ | ೧೭ | ೮ | ೨ | ೧೦ | ೭ | ೩ | ೧೦ |
| | ಒಟ್ಟು | ೬೧೯ | ೪೫೬ | ೧೦೭೫ | ೪೮೦ | ೩೬೮ | ೮೪೮ | ೪೫೯ | ೩೬೧ | ೮೨೦ |

ಉಡುಪಿ ಜಿಲ್ಲೆಯನ್ನೊಳಗೊಂಡಂತೆ ವ್ಯಾಪ್ತಿಯಲ್ಲಿ ಬರುವ ಉಡುಪಿ, ಕಾರ್ಕಳ, ಹಾಗೂ ಕುಂದಾಪುರ ತಾಲೂಕಿನ ಮೂರು ತಾಲೂಕುಗಳನ್ನೊಳಗೊಂಡಂತೆ ಸಾಕ್ಷರರಲ್ಲಿ ಶೈಕ್ಷಣಿಕ ಹಂತಗಳನ್ನು ಗಮನಿಸಿದಾಗ ಪ್ರಾಥಮಿಕ ಶೇ. ೨೪ರಷ್ಟು ಕಂಡುಬಂದಿದೆ. ಮಾಧ್ಯಮಿಕ ಶೇ. ೨೧ರಷ್ಟು ಕಾಣಸಿಗುತ್ತದೆ. ಇನ್ನುಳಿದ ಹಂತಗಳಾದ ಪ್ರೌಢ ಶೇ. ೧೯, ಡಿಪ್ಲೊಮಾ ಶಿಕ್ಷಣದಲ್ಲಿ ಶೇ. ೧ರಷ್ಟು, ಪದವಿಪೂರ್ವ ಶೇ. ೧೭, ಪದವಿ ಶೇ. ೧೫, ಸ್ನಾತಕೋತ್ತರ ಶೇ. ೨, ಇತರೆ ಶೇ. ೧ರಷ್ಟಿದ್ದು, ಉಳಿದಂತೆ ಅನಕ್ಷರಸ್ಥರ ಪ್ರಮಾಣ ಇರುವುದು ಕ್ಷೇತ್ರಕಾರ್ಯದ ಅಂಕಿಅಂಶಗಳ ಮಾಹಿತಿಯಿಂದ ತಿಳಿದುಬರುತ್ತದೆ.

**ವೃತ್ತಚಿತ್ರ ೨. ಉಡುಪಿ ಜಿಲ್ಲೆಯ ಕೊರಗ ಸಮುದಾಯದ ತಾಲೂಕುವಾರು ಮತ್ತು ಲಿಂಗವಾರು ಶೈಕ್ಷಣಿಕ ಪ್ರಮಾಣ**




ಉಡುಪಿ ತಾಲೂಕಿನ ಗ್ರಾಮ ಪಂಚಾಯತ್ ಸಾಕ್ಷರರಲ್ಲಿ ಶೈಕ್ಷಣಿಕ ಹಂತಗಳನ್ನು ಗಮನಿಸಿದಾಗ ಪ್ರಾಥಮಿಕ ಶೇ. ೨೫ರಷ್ಟು ಕಂಡುಬಂದರೆ, ಮಾಧ್ಯಮಿಕ ಶೇ. ೨೦ರಷ್ಟು ಕಾಣಸಿಗುತ್ತದೆ. ಇನ್ನುಳಿದ ಹಂತಗಳಾದ ಪ್ರೌಢ ಶೇ. ೧೯, ಪದವಿಪೂರ್ವ ಶೇ. ೧೬, ಡಿಪ್ಲೊಮಾ, ಶೇ. ೧, ಪದವಿ ಶೇ. ೧೫, ಸ್ನಾತಕೋತ್ತರ ಶೇ. ೨, ಇತರೆ ಶಿಕ್ಷಣದಲ್ಲಿ ಶೇ. ೨, ಹಾಗೂ ಶೇ. ೪೨.೯೧ರಷ್ಟು ಅನಕ್ಷರಸ್ಥರ ಪ್ರಮಾಣ ಇರುವುದು ಕ್ಷೇತ್ರಕಾರ್ಯದ ಅಂಕಿಅಂಶಗಳ ಮಾಹಿತಿಯಿಂದ ತಿಳಿದುಬರುತ್ತದೆ.

ಕಾರ್ಕಳ ತಾಲೂಕಿನ ವ್ಯಾಪ್ತಿಯಲ್ಲಿ ಬರುವ ಗ್ರಾಮ ಪಂಚಾಯತ್ ಕ್ಷೇತ್ರಗಳಲ್ಲಿರುವ ಸಾಕ್ಷರರಲ್ಲಿ ಶೈಕ್ಷಣಿಕ ಹಂತಗಳನ್ನು ಗಮನಿಸಿದಾಗ ಪ್ರಾಥಮಿಕ ಶೇ. ೨೩ರಷ್ಟು ಕಂಡುಬಂದರೆ, ಮಾಧ್ಯಮಿಕ ಶೇ. ೨೧ರಷ್ಟು ಕಾಣಸಿಗುತ್ತದೆ. ಇನ್ನುಳಿದ ಹಂತಗಳಾದ ಪ್ರೌಢ ಶೇ. ೧೯, ಡಿಪ್ಲೊಮಾ ಶೇ. ೦, ಪದವಿಪೂರ್ವ ಶೇ. ೧೯, ಪದವಿ ಶೇ. ೧೫, ಸ್ನಾತಕೋತ್ತರ ಶೇ. ೨, ಇತರೆ ಶೇ. ೧ರಷ್ಟಿದ್ದು, ಹಾಗೂ ಶೇ. ೪೫.೪೧ರಷ್ಟು ಅನಕ್ಷರಸ್ಥರ ಪ್ರಮಾಣ ಇರುವುದು ಕ್ಷೇತ್ರಕಾರ್ಯದ ಅಂಕಿಅಂಶಗಳ ಮಾಹಿತಿಯಿಂದ ತಿಳಿದುಬರುತ್ತದೆ.

ಕುಂದಾಪುರ ತಾಲೂಕಿನ ವ್ಯಾಪ್ತಿಯಲ್ಲಿ ಬರುವ ಗ್ರಾಮಪಂಚಾಯತ್ ಕ್ಷೇತ್ರಗಳಲ್ಲಿರುವ ಸಾಕ್ಷರರಲ್ಲಿ ಶೈಕ್ಷಣಿಕ ಹಂತಗಳನ್ನು ಗಮನಿಸಿದಾಗ ಪ್ರಾಥಮಿಕ ಶೇ. ೨೪ರಷ್ಟು ಕಂಡುಬಂದರೆ, ಮಾಧ್ಯಮಿಕ ಶೇ. ೨೧ರಷ್ಟು ಕಾಣಸಿಗುತ್ತದೆ. ಇನ್ನುಳಿದ ಹಂತಗಳಾದ ಪ್ರೌಢ ಶೇ. ೧೯, ಡಿಪ್ಲೊಮಾ ಶೇ. ೧, ಪದವಿಪೂರ್ವ ಶೇ. ೧೭, ಪದವಿ ಶೇ. ೧೫, ಸ್ನಾತಕೋತ್ತರ ಶೇ. ೨, ಇತರೆ ಶೇ. ೧ರಷ್ಟಿದ್ದು, ಹಾಗೂ ಶೇ. ೪೬.೪೧ರಷ್ಟು ಅನಕ್ಷರಸ್ಥರ ಪ್ರಮಾಣ ಇರುವುದು ಕ್ಷೇತ್ರಕಾರ್ಯದ ಅಂಕಿಅಂಶಗಳ ಮಾಹಿತಿಯಿಂದ ತಿಳಿದುಬರುತ್ತದೆ.

ಮೇಲಿನ ಒಟ್ಟಾರೆ ತಾಲ್ಲೂಕುವಾರು ಹಾಗೂ ಗ್ರಾಮ ಪಂಚಾಯತ್‌ವಾರು ಶೈಕ್ಷಣಿಕ ಪ್ರಗತಿಯನ್ನು ಗಮನಿಸಿದರೆ ಜಿಲ್ಲೆಯ ಇತರೆ ತಳಸಮುದಾಯಗಳಲ್ಲಿರುವಂತೆ ಶೈಕ್ಷಣಿಕ ಮಟ್ಟದಲ್ಲಿ ಸಾಕಷ್ಟು ಬದಲಾವಣೆ ಕಾಣದೆ ಹಾಗೂ ಸಾಮಾಜಿಕವಾಗಿ ಪ್ರಗತಿ ಹೊಂದ ದಿರುವುದು ಕೊರಗ ಸಮುದಾಯದಲ್ಲಿ ಕಂಡುಬರುತ್ತದೆ. ಹೀಗಾಗಿ ಕೊರಗ ಸಮುದಾಯ ಶಿಕ್ಷಣಕ್ಕೆ ಮಹತ್ವ ನೀಡದೆ ಸಾಮಾಜಿಕ ವ್ಯವಸ್ಥೆಯಲ್ಲಿ ಇತರೆ ಸಮುದಾಯ ಗಳೊಂದಿಗೆ ಸಮಾನತೆ ಕಾಯ್ದುಕೊಳ್ಳದೆ ಇಂದಿಗೂ ಆಧುನಿಕ ಪ್ರಭಾವಕ್ಕೆ ತೆರೆದು ಕೊಳ್ಳದಿರುವುದನ್ನು ಕಾಣಬಹುದು.

೧ರಿಂದ ೧೦ನೇ ತರಗತಿಯವರೆಗೆ ೧೦೦ ಜನ ವಿದ್ಯಾರ್ಥಿಗಳು ದಾಖಲಾದರೆ ಈ ತರಗತಿಗಳನ್ನು ಪೂರ್ಣಗೊಳಿಸುವುದರ ಒಳಗೆ ಶೇ. ೫೦ರಷ್ಟು ವಿದ್ಯಾರ್ಥಿಗಳು ಶಾಲೆಯನ್ನು ಮಧ್ಯದಲ್ಲಿ ಬಿಡುತ್ತಾರೆ. ಇದಕ್ಕೆ ಸಂಬಂಧಿಸಿದ ಕಾರಣಗಳೇನು ಎನ್ನುವುದನ್ನು ವಿದ್ಯಾರ್ಥಿಗಳ ದೃಷ್ಟಿಯಿಂದ ಗಮನಿಸಿದಾಗ

* ಅರಣ್ಯ ಪ್ರದೇಶದಲ್ಲಿ ವಾಸ ಮಾಡುವುದು ಹಾಗೂ ಸಾಮಾಜಿಕವಾಗಿ ಜನರ ಜೊತೆ ಇದ್ದರೂ ಶಿಕ್ಷಣದ ಮಹತ್ವದ ಬಗ್ಗೆ ಅರಿವು ಇಲ್ಲದೇ ಇರುವುದು.
* ಚಿಕ್ಕ ವಯಸ್ಸಿನಲ್ಲೇ ಹೆಣ್ಣುಮಕ್ಕಳಿಗೆ ವಿವಾಹ ಮಾಡುವುದು. ಹೆಣ್ಣುಮಕ್ಕಳು ದಾಖಲಾತಿ ಹಾಜರಾತಿಗಳು ಇಂದಿಗೂ ಕಡಿಮೆ ಮಟ್ಟದಲ್ಲಿರುವುದಕ್ಕೆ ಕಾರಣವಾಗಿದೆ.
* ಅರಣ್ಯ ಪರಿಸರದಲ್ಲಿ ಬರುತ್ತಿದ್ದವರಿಗೆ ಶಾಲೆಗೆ ಹಾಜರಾದ ಕೂಡಲೇ ಕಟ್ಟುನಿಟ್ಟಾದ ಶಿಸ್ತು ಸಹಿಸಲಾಗದೇ ಇರುವುದರಿಂದ ಶಾಲೆಯನ್ನು ಮಧ್ಯದಲ್ಲಿ ಬಿಡುತ್ತಾರೆ.
* ತಾವು ವಾಸಿಸುವ ಕಾಲೋನಿ ಹಾಗೂ ಪರಿಸರದಲ್ಲಿ ವ್ಯಾಸಂಗಕ್ಕೆ ಪೂರಕವಾದ ವಾತಾವರಣ ಇಲ್ಲದೇ ಇರುವುದು.

* ಗಿರಿಜನ ವಿದ್ಯಾರ್ಥಿಗಳ ಮಾನಸಿಕ ಸ್ಥಿತಿಯನ್ನು ಅರಿತು ಬೋಧಿಸುವ ಶಿಕ್ಷಕರ ಅಭಾವ.

ವಿಭಕ್ತ ಕುಟುಂಬದ ಜೀವನದಿಂದಾಗಿ ಕುಟುಂಬ ನಿರ್ವಹಣೆ ಹಾಗೂ ಕುಟುಂಬದ ಜವಾಬ್ದಾರಿಯನ್ನು ಹೊರಬೇಕಾಗಿರುವುದರಿಂದ ಕೂಲಿಕಾರ್ಮಿಕರಾಗಿ ದುಡಿಯಬೇಕಾದ ಅನಿವಾರ್ಯತೆ ಮಕ್ಕಳಿಗೆ ಇದೆ. ಸ್ವಂತ ದುಡಿಮೆಗೆ ಬೇಕಾದ ಕೌಶಲ್ಯವಾಗಲೀ ಹಾಗೂ ಆಸ್ತಿಪಾಸ್ತಿಯಿಲ್ಲದೆ ಜೀವನ ನಿರ್ವಹಣೆಗೆ ಕಷ್ಟ ಪಡಬೇಕಾಗುತ್ತದೆ. ಇಂತಹ ಸನ್ನಿವೇಶದಲ್ಲಿ ಕೊರಗ ಸಮುದಾಯದಲ್ಲಿ ವಿದ್ಯೆ ಕಲಿಯಲು ಪ್ರಾಥಮಿಕ ಹಂತದಿಂದ ಮುಂದಿನ ಶೈಕ್ಷಣಿಕ ವ್ಯಾಸಂಗ ಸಾಧ್ಯವಾಗದ ಪರಿಸ್ಥಿತಿಯಿದ್ದಾಗ ಹೆಣ್ಣುಮಕ್ಕಳ ವಿದ್ಯಾಭ್ಯಾಸ ಕುರಿತು ಆಲೋಚಿಸುವುದು ದೂರದ ಮಾತೇ ಸರಿ.

ದುಡಿದು ತಿನ್ನುವ ಅನಿವಾರ್ಯತೆ, ಕೂಲಿಗಾಗಿ ವಲಸೆ ಹೋಗುವ ಪಾಲಕರು ಹಾಗೂ ತಮ್ಮ ಮಕ್ಕಳನ್ನು ವಿದ್ಯಾರ್ಥಿನಿಲಯ ಅಥವಾ ಆಶ್ರಮ ಶಾಲೆಯಂತಹ ಶೈಕ್ಷಣಿಕ ವ್ಯವಸ್ಥೆಯನ್ನು ಬೆಳೆಸಿಕೊಳ್ಳಲು ನಿರಾಕರಿಸುವ ಪೋಷಕರ ಮನೋಭಾವ ಹೀಗೆ ಹತ್ತು ಹಲವು ಕಾರಣಗಳಿಂದಾಗಿ ಕೊರಗ ಸಮುದಾಯದ ಶೈಕ್ಷಣಿಕ ಪ್ರಗತಿಯು ಕುಂಠಿತವಾಗಿದೆ ಎಂಬುದು ಕ್ಷೇತ್ರಕಾರ್ಯದ ಮೂಲಕ ತಿಳಿದುಬಂದಿದೆ.

ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಕೊರಗರಿಗೆ ಉತ್ತಮವಾದ ಶಿಕ್ಷಣ ವ್ಯವಸ್ಥೆಯಿಲ್ಲ. ಶಿಕ್ಷಣದ ಬಗೆಗಿನ ಜ್ಞಾನದ ಕೊರತೆಯು ಕೊರಗರಲ್ಲಿದೆ. ಕೊರಗರಲ್ಲಿ ಹೆಚ್ಚಿನ ಜನರು ಅವಿದ್ಯಾವಂತರಾಗಿದ್ದಾರೆ. ಆದ್ದರಿಂದ ಶಿಕ್ಷಣದಿಂದಾಗುವ ಉಪಯೋಗದ ಬಗ್ಗೆ ಅವರಿಗೆ ತಿಳಿದಿಲ್ಲ. ಆದ್ದರಿಂದ ಮಕ್ಕಳನ್ನು ಶಾಲೆಗೆ ಕಳುಹಿಸದೆ ತಮ್ಮೊಂದಿಗೆ ಕೂಲಿ ಕೆಲಸಗಳಿಗೆ ಕರೆದುಕೊಂಡು ಹೋಗುತ್ತಾರೆ. ಇದರಿಂದ ಕೊರಗರ ಮಕ್ಕಳು ಕೂಡ ಹಿರಿಯರಂತೆ ಯಾವುದೇ ಬದಲಾವಣೆ ಹೊಂದಲು ಸಾಧ್ಯವಾಗುತ್ತಿಲ್ಲ.

ಬದಲಾವಣೆಯೆಂಬಂತೆ ಉಡುಪಿ ಜಿಲ್ಲೆಯ ಕುಂಭಾಶಿ, ಆಲೂರು, ಕುಂದಾಪುರ ಇತ್ಯಾದಿ ಪ್ರದೇಶಗಳಲ್ಲಿ ಕೊರಗಾಭಿವೃದ್ಧಿ ಸಂಘಗಳು ಕೊರಗ ಮಕ್ಕಳ ಶಿಕ್ಷಣಕ್ಕಾಗಿ ಸಭೆ ಗಳನ್ನು ನಡೆಸಿ ಅದಕ್ಕೆ ಸೂಕ್ತ ಪರಿಹಾರವನ್ನು ಕಂಡುಕೊಳ್ಳುತ್ತಿದ್ದಾರೆ. ಮಕ್ಕಳು ಮಧ್ಯದಲ್ಲಿಯೇ ಶಾಲೆ ಬಿಡಲು ಕಾರಣವೇನು ಎನ್ನುವುದನ್ನು ಪತ್ತೆ ಹಚ್ಚಿದ್ದಾರೆ. ಕೊರಗರ ಮನೆ ಮನೆಗಳಿಗೆ ತೆರಳಿ ಪೋಷಕರ ಮನವೊಲಿಸಿ ಮಕ್ಕಳನ್ನು ಶಾಲೆಗೆ ಕರೆತರುವ ಪ್ರಯತ್ನವನ್ನು ಮಾಡುತ್ತಿದ್ದಾರೆ. ಕುಂಭಾಶಿಯ ಸಮೀಪದಲ್ಲಿರುವ ಡಾ. ಅಂಬೇಡ್ಕರ್ ನಗರದ "ಮಕ್ಕಳ

ಮನೆ" ಕೊರಗ ಮಕ್ಕಳ ಶಿಕ್ಷಣಕ್ಕಾಗಿ ಹಲವಾರು ಕಾರ್ಯಕ್ರಮಗಳನ್ನು ನಡೆಸುತ್ತದೆ. ಮುಖ್ಯವಾಗಿ

೧. ಮಕ್ಕಳಿಗೆ ಶುಚಿತ್ವದ ಬಗ್ಗೆ ಪಾಠ

೨. ಮಕ್ಕಳ ಮನೆಯಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸುವುದು

೩. ದಿನನಿತ್ಯ ಮಕ್ಕಳ ಹಾಜರಾತಿಯನ್ನು ತೆಗೆದು ಗೈರುಹಾಜರಾದ ಮಗುವಿನ ಪೋಷಕರಿಗೆ ತಿಳಿಸಿ ಗೈರುಹಾಜರಿಗೆ ಕಾರಣವನ್ನು ತಿಳಿದುಕೊಳ್ಳುವುದು.

೪. ಮಕ್ಕಳಿಗೆ ಕ್ರೀಡೆಗಳನ್ನು ನಡೆಸುವುದು.

೫. ಕೊರಗರ ಪ್ರಮುಖ ಮುಖಂಡರನ್ನು ಕರೆಸಿ ಶೈಕ್ಷಣಿಕ ಲಾಭಗಳ ಬಗ್ಗೆ ಮಕ್ಕಳಿಗೆ ತಿಳಿಸುವುದು.

೬. ಕೊರಗರ ಕರಕುಶಲ ಕಲೆಗಳ ಬಗ್ಗೆ ಜ್ಞಾನ ನೀಡುವುದು

೭. ಕೊರಗ ಮಕ್ಕಳಿಗೆ ಇಂಗ್ಲೀಷ್ ಹಾಗೂ ಕನ್ನಡ ಭಾಷೆಯ ಅಕ್ಷರ ಅಭ್ಯಾಸ, ವ್ಯಾಕರಣ ಮೊದಲಾದವುಗಳ ಬಗ್ಗೆ ತಿಳುವಳಿಕೆ ಮೂಡಿಸಲಾಗುತ್ತದೆ.

೮. ಈ ಮೂಲಕ ಮಕ್ಕಳೇ ಅಕ್ಷರಗಳನ್ನು ಬರೆಯುವುದು, ಅಕ್ಷರಗಳ ಚಾರ್ಟ್‌ಗಳನ್ನು ತಯಾರಿಸುವುದು ಮೊದಲಾದವುಗಳ ಕಲಿಕೆಗಳ ಮೂಲಕ ಮಕ್ಕಳನ್ನು ಶಾಲೆಗೆ ಹೋಗಲು ತಯಾರಿ ನಡೆಸುವುದು ಕೊರಗರ "ಮಕ್ಕಳ ಶಾಲೆ"ಯ ಉದ್ದೇಶವಾಗಿದೆ.

ಇಂದು ಕೊರಗ ಮಕ್ಕಳ ಶಿಕ್ಷಣಕ್ಕಾಗಿ ಸರ್ಕಾರವು ಹಲವು ಯೋಜನೆಗಳನ್ನು ಜಾರಿಗೊಳಿಸಿದೆ. ಆದರೂ ಮಕ್ಕಳ ಶಾಲೆಯ ದಾಖಲಾತಿ ಕಳಪೆಯಾಗಿದೆ. ಪ್ರಾಥಮಿಕ ಶಾಲೆಗಳಲ್ಲಿ ದಾಖಲಾತಿಗಳಾದರೂ ಸಹಾ ಮಾಧ್ಯಮಿಕ ಪ್ರೌಢಶಾಲಾ ಹಂತದಲ್ಲಿ ಕೆಲವು ಮಕ್ಕಳು ಮಧ್ಯದಲ್ಲಿಯೇ ಶಾಲೆ ಬಿಡುತ್ತಿದ್ದಾರೆ. ಇನ್ನು ಬೆರಳೆಕೆಯಷ್ಟು ಕೊರಗರು ಮಾತ್ರ ಕಾಲೇಜು ಮತ್ತು ಉನ್ನತ ವ್ಯಾಸಂಗ ಮಾಡುತ್ತಿದ್ದಾರೆ.

ಕೊರಗರ ಶಿಕ್ಷಣದಲ್ಲಿ ಇಳಿಮುಖವಿರಲು ಕೊರಗ ವಕ್ತೃಗಳು ನೀಡಿದ ಮಾಹಿತಿಯಂತೆ ಕಂಡುಬರುವ ವೈಜ್ಞಾನಿಕ ಅಂಶಗಳೆಂದರೆ

೧. **ಶಾಲೆ ಮತ್ತು ಮನೆಗೆ ಇರುವ ಅಂತರ:** ಕೊರಗರ ವಾಸ್ತವ್ಯಕ್ಕೂ ಹಾಗೂ ಶಾಲೆಗೂ ನಡುವಿನ ಅಂತರ ಹೆಚ್ಚಾಗಿದೆ. ಉಡುಪಿ ಜಿಲ್ಲೆಯ ಮುನಿಯಾಲು, ಕಾರ್ಕಳ,

ಬಜಗೋಳಿ ಪ್ರದೇಶಗಳಲ್ಲಿ ಈ ಕಾರಣಕ್ಕಾಗಿಯೇ ಪೋಷಕರು ತಮ್ಮ ಮಕ್ಕಳನ್ನು ಅದರಲ್ಲೂ ಹೆಣ್ಣುಮಕ್ಕಳನ್ನು ಶಾಲೆಗಳಿಗೆ ಕಳುಹಿಸುತ್ತಿಲ್ಲ.

೨. **ಶೈಕ್ಷಣಿಕ ಮಹತ್ವ ಪೋಷಕರಿಗೆ ತಿಳಿಯದಿರುವುದು:** ಕೊರಗರಿಗೆ ಶಿಕ್ಷಣದಿಂದಾಗುವ ಉಪಯೋಗಗಳ ಬಗ್ಗೆ ಸರಿಯಾದ ಅರಿವು ಇರುವುದಿಲ್ಲ. ಅವರೇ ಅನಕ್ಷರಸ್ಥರಾಗಿ ರುವುದರಿಂದ ತಮ್ಮ ಮಕ್ಕಳ ಶಿಕ್ಷಣದ ಬಗೆಗಿನ ಅವರ ಕಾಳಜಿ ಕಡಿಮೆಯಾಗಿದೆ. ಸುಳ್ಯ, ಬೆಳ್ತಂಗಡಿ, ಬಂಟ್ವಾಳ ಪರಿಸರದ ಕೊರಗರಲ್ಲಿ ಇದು ಹೆಚ್ಚಿದೆ.

೩. **ಮಹಿಳಾ ಶಿಕ್ಷಣದ ಕೊರತೆ:** ಕೊರಗರದ್ದು ಮಾತೃಮೂಲ ಕುಟುಂಬ. ಬಹುಪಾಲು ನಿರ್ಧಾರ ತೆಗೆದುಕೊಳ್ಳುವುದಲ್ಲಿ ಸ್ತ್ರೀಯರು ಪ್ರಮುಖರು. ಆದರೆ ಕೊರಗ ಮಹಿಳೆಯರಿಗೆ ಶೈಕ್ಷಣಿಕ ಜ್ಞಾನ ಕಡಿಮೆಯಿದೆ. ಇದು ಮಕ್ಕಳ ಶಿಕ್ಷಣದ ಮೇಲೆ ದುಷ್ಪರಿಣಾಮ ಬೀರಿದೆ.

೪. **ಶುಚಿತ್ವದ ಸಮಸ್ಯೆ:** ಕೊರಗರಲ್ಲಿ ಶುಚಿತ್ವದ ಜ್ಞಾನ ಕಡಿಮೆಯಿದೆ. ಮುಖ್ಯವಾಗಿ ಮಕ್ಕಳ ಸ್ನಾನದ ವಿಷಯಕ್ಕೂ ಗಮನಹರಿಸುವುದಿಲ್ಲ. ಸಾಮಾನ್ಯವಾಗಿ ಸ್ನಾನ ಮಾಡದೆ ಶಾಲೆಗೆ ತೆರಳುವುದರಿಂದ ಇತರ ಮಕ್ಕಳ ಅಪಹಾಸ್ಯ, ಶಿಕ್ಷಕರು ಗದರಿಸುವಿಕೆಯಿಂದಾಗಿ ಕೊರಗ ಮಕ್ಕಳು ಶಾಲೆ ಬಿಡಲು ಕಾರಣವಾಗಿದೆ.

೫. **ಶಿಕ್ಷಕರು ನೀಡುವ ಶಿಕ್ಷೆ:** ಶಿಕ್ಷಕರು ಮನೆಪಾಠ ಮಾಡಿಕೊಂಡು ಬರದಿದ್ದರೆ ಮಕ್ಕಳ ಮೇಲೆ ಕ್ರಮವನ್ನು ತೆಗೆದುಕೊಳ್ಳುತ್ತಾರೆ. ಮಕ್ಕಳು ಏಕೆ ಮನೆಪಾಠ ಮಾಡಿಕೊಂಡು ಬಂದಿಲ್ಲ, ಆ ಮಗುವಿನ ಶೈಕ್ಷಣಿಕ ಹಿನ್ನೆಲೆಯೇನು? ಮನೆಯ ಪರಿಸರ ಹೇಗಿದೆ? ಎನ್ನುವ ಹಿನ್ನೆಲೆಗೆ ಹೋಗುವುದಿಲ್ಲ. ಶಿಕ್ಷಕರ ದಿನನಿತ್ಯದ ಬೈಗುಳ ಮತ್ತು ಶಿಕ್ಷೆಯ ಭಯದಿಂದಾಗಿ ಕೊರಗ ಮಕ್ಕಳು ಮಧ್ಯದಲ್ಲಿಯೇ ಶಾಲೆ ಬಿಡುತ್ತಿದ್ದಾರೆ.

೬. **ವಸತಿ ನಿಲಯದ ಸಮಸ್ಯೆ:** ಇಂದು ಸರ್ಕಾರದ ವಸತಿ ನಿಲಯಗಳು ಕಳಪೆ ಮಟ್ಟದಲ್ಲಿವೆ. ಒಂದೇ ಕೋಣೆಯಲ್ಲಿ ಹಲವು ಮಕ್ಕಳನ್ನು ಇರಿಸುವುದು, ಸ್ನಾನದ ಸಮಸ್ಯೆ, ಶೌಚಾಲಯದ ಸಮಸ್ಯೆ, ಕಳಪೆ ಆಹಾರ ಪೂರೈಕೆ ಮೊದಲಾದವುಗಳು ಕೊರಗ ಮಕ್ಕಳ ಶಿಕ್ಷಣಕ್ಕೆ ಹಿನ್ನಡೆಯಾಗಿದೆ.

೭. **ಅನಕ್ಷರತೆ:** ಕೊರಗ ಪುರುಷ ಮತ್ತು ಮಹಿಳೆಯರಲ್ಲಿ ಅನಕ್ಷರತೆ ಹೆಚ್ಚಾಗಿದೆ. ಶಿಕ್ಷಣದ ಉಪಯೋಗದ ಬಗ್ಗೆ ಅವರಿಗೆ ಅರಿವಿಲ್ಲ. ಆದ್ದರಿಂದ ತಮ್ಮ ಮಕ್ಕಳನ್ನು ಶಾಲೆಗೆ

ಕಳುಹಿಸದೆ ಕೂಲಿ ಕೆಲಸಗಳಿಗೆ ಕಳುಹಿಸುತ್ತಿದ್ದಾರೆ. ಇದು ಕೊರಗರ ಶೈಕ್ಷಣಿಕ ಪ್ರಗತಿ ಕುಂಠಿತಗೊಳ್ಳಲು ಕಾರಣವಾಗಿದೆ.

೮. **ಆರೋಗ್ಯದ ಸಮಸ್ಯೆ:** ಕೊರಗ ಮಕ್ಕಳಲ್ಲಿ ಪದೇ ಪದೇ ಆರೋಗ್ಯದ ಸಮಸ್ಯೆಗಳು ಕಂಡುಬರುತ್ತದೆ. ಅಪೌಷ್ಠಿಕತೆ ಕೊರಗ ಮಕ್ಕಳಲ್ಲಿ ಹೆಚ್ಚಾಗಿದೆ, ಮನೆಯಲ್ಲಿ ಸಾಕಾಗುವಷ್ಟು ಆಹಾರ ಮಕ್ಕಳಿಗೆ ಸಿಗುತ್ತಿಲ್ಲ. ಆಹಾರ ದೊರಕಿದರೂ ಅದು ಪೌಷ್ಠಿಕ(ವಿಟಮಿನ್)ಯುಕ್ತ ಆಹಾರ ಆಗಿರುವುದಿಲ್ಲ. ಅಪೌಷ್ಠಿಕತೆಯಿಂದ ಬಳಲುತ್ತಿರುವ ಮಕ್ಕಳು ಶಾಲೆಯನ್ನು ಮಧ್ಯದಲ್ಲಿಯೇ ಬಿಡುತ್ತಾರೆ ಅಥವಾ ಶಾಲೆಗೆ ಹೋಗುವುದಿಲ್ಲ.

ಸಮಾಜವು ಕೊರಗರ ಸಾಂಸ್ಕೃತಿಕ ನೆಲೆಯನ್ನು ಗುರುತಿಸುವಲ್ಲಿ ವಿಫಲವಾಗಿದೆ. ಸಮಾಜದ ಮೇಲು-ಕೀಳು ಧೋರಣೆ ಕೊರಗರ ಹೀನಾಯ ಬದುಕಿಗೆ ಕಾರಣವಾಗಿದೆ. ಮೇಲ್ವರ್ಗಗಳಿಗೆ ಮಾತ್ರ ಶಿಕ್ಷಣ, ಅಸ್ಪೃಶ್ಯ ಜಾತಿಗಳಿಗೆ ಇಲ್ಲ ಎಂಬ ಧೋರಣೆಗಳು ಕೊರಗರಂತಹ ಬುಡಕಟ್ಟುಗಳ ಮೇಲೆ ಕೊಡಲಿಯೇಟು ನೀಡಿದೆ. ಶಿಕ್ಷಣ ಪದ್ಧತಿ ಹಾಗೂ ಕೊರಗರ ಜೀವನಕ್ರಮ ಪರಸ್ಪರ ತದ್ವಿರುದ್ಧ ದಿಕ್ಕಿನಲ್ಲಿ ಸಾಗುತ್ತಿದೆ. ಶಾಲೆಯ ವಾತಾವರಣ, ಶಿಕ್ಷಕರು, ಪಠ್ಯವಿಷಯಗಳು, ಉಡುಗೆ ತೊಡುಗೆಗಳು ಕೊರಗ ಮಕ್ಕಳಲ್ಲಿ ಗೊಂದಲವನ್ನು ಸೃಷ್ಟಿಸಿವೆ. ಕೊರಗ ಮಕ್ಕಳಿಗೆ ಶಾಲೆ ನಮ್ಮದು ಎಂಬ ಭಾವನೆ ಸೃಷ್ಠಿಸುವ ವಾತಾವರಣ ಇಂದಿಗೂ ಕೆಲವು ಪ್ರದೇಶಗಳಲ್ಲಿ ಕಾಣುವುದಿಲ್ಲ. ಇದೇ ಕಾರಣಕ್ಕೆ ಕೊರಗ ಮಕ್ಕಳು ಮಧ್ಯದಲ್ಲಿಯೇ ಶಾಲೆ ಬಿಡಲು ಕಾರಣವಾಗಿದೆ. ಕೊರಗ ಮಕ್ಕಳೊಂದಿಗೆ ಇರುವ ಅಂತರ, ಇತರ ಮಕ್ಕಳ ಲವಲವಿಕೆ, ಆರೋಗ್ಯ ಸ್ಥಿತಿ, ಮಾನಸಿಕ ಸ್ಥಿತಿ ಕೊರಗ ಮಕ್ಕಳಲ್ಲಿ ಇಲ್ಲದಿರುವುದು ಕೂಡ ಅವರು ಶೈಕ್ಷಣಿಕವಾಗಿ ಹಿಂದುಳಿಯಲು ಕಾರಣವಾಗಿದೆ. ಕೊರಗ ಮಕ್ಕಳು ಕಲಿಯುವುದಿಲ್ಲ, ಆ ಮಕ್ಕಳಲ್ಲಿ ಶುಚಿತ್ವದ ಪ್ರಜ್ಞೆ ಇಲ್ಲ ಎಂದು ಹೇಳುವ ಶಿಕ್ಷಣ ಸಂಸ್ಥೆಗಳು ಮಕ್ಕಳಲ್ಲಿ ಇಂತಹ ಸಮಸ್ಯೆಯಿರಲು ಆ ಮಕ್ಕಳ ಮನೆಯ ಪರಿಸರದ ಬಗ್ಗೆ ಸರಿಯಾಗಿ ಗಮನ ಹರಿಸಿಲ್ಲ.

ವಿದ್ಯಾರ್ಥಿವೇತನ, ಸಮವಸ್ತ್ರ ಆಶ್ರಮ ಶಾಲೆ, ಮಾದರಿ ಶಾಲೆ, ಹೆತ್ತವರಿಗೆ ಸೌಲಭ್ಯಗಳನ್ನು ನೀಡುವುದರಿಂದ ಕೊರಗರಲ್ಲಿ ಶೈಕ್ಷಣಿಕ ಬದಲಾವಣೆ ತರಲು ಸಾಧ್ಯವಿಲ್ಲ. ಮೊದಲು ಅವರನ್ನು ಮಾನಸಿಕವಾಗಿ ಸಿದ್ಧಗೊಳಿಸಬೇಕಾಗಿದೆ. ಮಕ್ಕಳಿಗೆ ಕೇವಲ ಸರ್ಕಾರಿ ಸವಲತ್ತುಗಳನ್ನು ನೀಡಿದರೆ ಸಾಕಾಗುವುದಿಲ್ಲ. ಶಾಲೆಯ ಒಳಗೆ ಹಾಗೂ ಊರಿನಲ್ಲಿ ಕೊರಗರಿಗೆ ಸಮಾನತೆ ದೊರೆಯಬೇಕಾಗಿದೆ. ಕೊರಗ ಮಕ್ಕಳು ಶಾಲೆಗೆ ಬರುವಂತೆ ಮಾಡಲು ಇರುವ

ಪ್ರೋತ್ಸಹದಾಯಕ ಅಂಶಗಳು ಯಾವುದು? ಶಿಕ್ಷಣದಿಂದ ಕೊರಗರ ಕೊಪ್ಪದಲ್ಲಿ ಯಾವ ರೀತಿಯ ಪರಿವರ್ತನೆ ತರಬಹುದು? ಕೊರಗ ಮಕ್ಕಳು ಶಾಲೆ ತಪ್ಪಿಸದಂತೆ ಏನು ಮಾಡಬಹುದು? ಇದರಲ್ಲಿ ಸಮಾಜ ಹಾಗೂ ಶೈಕ್ಷಣಿಕ ಸಂಸ್ಥೆಗಳ ಪಾತ್ರವೇನು? ಎಂದು ಅಧ್ಯಯನ ನಡೆಸಿ ಅದಕ್ಕೆ ತಕ್ಕನಾಗಿ ಪಠ್ಯಕ್ರಮಗಳನ್ನು ತಯಾರಿಸಿದಾಗ ಖಂಡಿತವಾಗಿಯೂ ಕೊರಗರಲ್ಲಿಯೂ ಶೈಕ್ಷಣಿಕ ಕ್ರಾಂತಿ ತರಲು ಸಾಧ್ಯವಿದೆ.

ಕೊರಗರ ಆರೋಗ್ಯದ ಸ್ಥಿತಿಗತಿಗಳನ್ನು ವಿವರಿಸುವಾಗ ವಕ್ತೃಗಳು ನೀಡಿದ ಮಾಹಿತಿಯಂತೆ ಕೊರಗರ ಹಿರಿಯರು ಹಲವು ವರ್ಷಗಳೂ ಬದುಕುತ್ತಿದ್ದರು. ಅವರಲ್ಲಿ ಅಷ್ಟೊಂದು ಆರೋಗ್ಯದ ಸಮಸ್ಯೆಯಿರಲಿಲ್ಲ. ಹೆಚ್ಚಿನ ಹಿರಿಯರು ಊರುಗೋಲು ಬಳಸುತ್ತಿರಲಿಲ್ಲ, ದೃಷ್ಟಿ ದೋಷವಿರಲಿಲ್ಲ, ಅವರಿಗೆ ಆಸ್ಪತ್ರೆ, ಇಂಜೆಕ್ಷನ್ ಎನ್ನುವುದೇ ತಿಳಿದಿರಲಿಲ್ಲ. ಅವರಿಗೆ ಅವರದೇ ಆದ ವೈದ್ಯ ಪದ್ಧತಿ ತಿಳಿದಿತ್ತು. ಆದರೆ ಇಂದು ಕೊರಗರಲ್ಲಿ ಆರೋಗ್ಯದ ಸಮಸ್ಯೆಯನ್ನು ಕಾಣುತ್ತಿದ್ದೇವೆ. ಯೌವನಾವಸ್ಥೆಯಲ್ಲಿಯೇ ಕೆಲವು ಕೊರಗರು ಸಾವನ್ನಪ್ಪುತ್ತಿದ್ದಾರೆ.

ಕೊರಗರಲ್ಲಿ ಉಂಟಾಗುತ್ತಿರುವ ಮಾನಸಿಕ ಆಘಾತಗಳು, ಅಶಾಂತಿ, ದೌರ್ಜನ್ಯ, ಭಯದ ವಾತಾವರಣ, ಕುಡಿತದ ಚಟ ಆರೋಗ್ಯದ ಮೇಲೆ ದುಷ್ಪರಿಣಾಮ ಬೀರಲು ಕಾರಣವಾಗಿದೆ. ಕೊರಗರಿಗೆ ಇರುವ ಆರೋಗ್ಯ ಸಮಸ್ಯೆಯ ತಪಾಸಣೆಗೆ ಹೋಗಬೇಕಾದರೆ, ಸರ್ಕಾರಿ ಸವಲತ್ತುಗಳನ್ನು ಪಡೆಯಬೇಕಾಗದೆ ಜಾತಿ ಪ್ರಮಾಣಪತ್ರ ರೇಷನ್ ಕಾರ್ಡ್, ವಾಸ್ತವ್ಯಪತ್ರ ಮೊದಲಾದ ದಾಖಲೆಗಳನ್ನು ಆಸ್ಪತ್ರೆಗಳಿಗೆ ಒದಗಿಸಬೇಕಾಗುತ್ತದೆ. ಇಷ್ಟೆಲ್ಲಾ ಒಟ್ಟುಗೂಡಿಸುವಾಗ ಕಾಯಿಲೆ ಪೀಡಿತ ವ್ಯಕ್ತಿಯು ಸಾವನ್ನಪ್ಪುತ್ತಾನೆ. ಮೆಡಿಕಲ್ ಬಿಲ್ಲನ್ನು ಪಾವತಿಸುವಷ್ಟು ಸಾಮರ್ಥ್ಯ ಕೆಲವು ಕೊರಗ ಕುಟುಂಬಗಳಿಗೆ ಇಲ್ಲ. ಕೇವಲ ಸರ್ಕಾರಿ ಅನುದಾನವನ್ನು ಪಡೆಯಲು, ಚಿಕಿತ್ಸೆಯ ಅಂಕಿ-ಅಂಶಗಳಿಗಾಗಿ, ವೈದ್ಯರ ದಂಡು ಕೊರಗರ ಕೊಪ್ಪಗಳಿಗೆ ಆಗಮಿಸುವುದು, ಸರಕಾರಿ ವಾಹನದಲ್ಲಿ ಕಒರಗರನ್ನು ಆಸ್ಪತ್ರೆಗೆ ಸಾಗಿಸುವುದು, ಕಾಟಾಚಾರದ ಚಿಕಿತ್ಸೆ ಮಾಡಿ ಪುನಃ ಕೊಪ್ಪಗಳಿಗೆ ಕಳುಹಿಸುವುದರಿಂದ ಕೊರಗರ ಸಮಸ್ಯೆ ಪರಿಹಾರವಾಗುವುದಿಲ್ಲ. ಕೊರಗರ ಆರೋಗ್ಯದ ಸಮಸ್ಯೆಗಳಿಗೆ ಕಾರಣಗಳು ಏನು? ಕೊರಗರ ಜನಸಂಖ್ಯೆ ಕ್ಷೀಣಿಸುತ್ತಿರಲು ಇರುವ ಮೂಲಗಳು ಯಾವುವು? ಕೊರಗರಲ್ಲಿ ಆರೋಗ್ಯದ ಕಾಳಜಿ ಮೂಡಿಸಲು ಇರುವ ದಾರಿಗಳು ಯಾವುವು? ಕೊರಗರ ಆರೋಗ್ಯದ ವಿಚಾರವಾಗಿ ಸರ್ಕಾರ, ಸರ್ಕಾರೇತರ ಸಂಸ್ಥೆಗಳು, ಸ್ಥಳೀಯ

ಪಂಚಾಯತ್‌ಗಳು, ಸ್ಥಳೀಯರು, ಕೊರಗ ಸಂಘಟಣೆಗಳು ಹಾಗೂ ಸ್ವತಃ ಕೊರಗರಲ್ಲಿಯೇ ಜಾಗೃತಿ ಮೂಡಿದಾಗ ಅವರಲ್ಲಿ ಆರೋಗ್ಯದ ಸಮಸ್ಯೆ ಹೋಗಲಾಡಿಸಲು ಸಾಧ್ಯವಿದೆ.

ಹಿಂದೂ ಜಾತಿಪದ್ಧತಿಯ ಚತುವರ್ಣಗಳಲ್ಲಿ ಕೊರಗರು ಸೇರದಿರುವುದರಿಂದ ಅವರನ್ನು "ಪಂಚಮರು" ಎಂದು ಆರೋಪಿಸಲಾಗಿದೆ. ಊರಲ್ಲಿ ಯಾರಾದರೂ ಕಾಯಿಲೆಗೆ ಬಿದ್ದಾಗ ಜ್ಯೋತಿಷ್ಕರ (ಬಲಿಮೆಯರ) ಆದೇಶದಂತೆ ಕೊರಗರಿಗೆ ಈ ಪಂಚಮ ದಾನವನ್ನು ನೀಡಲಾಗುತ್ತದೆ. ರೋಗಿಯನ್ನು ಅಂಗಳದಲ್ಲಿ ಪೂರ್ವಾಭಿಮುಖವಾಗಿ ಕುಳ್ಳಿರಿಸಿ ಆತನ ಎದುರು ಗೆರಸೆಯಲ್ಲಿ ಬಾಳೆ ಎಲೆಯನ್ನು ಹಾಕಿ, ಅರೆಬೆಂದ ಅನ್ನವನ್ನು ಬಡಿಸುತ್ತಾರೆ. ಅದಕ್ಕೆ ಬೂದುಕುಂಬಳದ ನೀರು ಸಾರನ್ನು ಸುರಿದ ಬಳಿಕ, ರೋಗಿಯ ಕೆಲವು ತಲೆಗೂದಲು ಹಾಗೂ ಉಗುರುಗಳನ್ನು ಕತ್ತರಿಸಿ ಅನ್ನಕ್ಕೆ ಬೆರೆಸುತ್ತಾರೆ. ಕೊನೆಗೆ ದಾನ ಪಡೆಯುವುದಕ್ಕಾಗಿ ಕರೆಸಲಾದ ಕೊರಗ ಹೆಂಗಸು ಅಂಗಳಕ್ಕೆ ಬಂದು, ಅನ್ನ ಸಮೇತ ಗೆರಸೆಯನ್ನು ಎತ್ತಿ ರೋಗಿಯ ತಲೆಗೆ ನೀವಾಳಿಸಿ, ಅದನ್ನು ತನ್ನ ವಶಕ್ಕೆ ಪಡೆಯುತ್ತಾಳೆ. ಜೊತೆಗೆ ಆ ಹೆಂಗಸಿನ ತಲೆಗೆ ಎಣ್ಣೆಯನ್ನು ಸುರಿಯುತ್ತಾರೆ. ರೋಗಿಯ ಚಿಂದಿ ಬಟ್ಟೆಗಳನ್ನು ಆಕೆಗೆ ಕೊಡುತ್ತಾರೆ. ಇಲ್ಲಿ ಜನರ ನಂಬಿಕೆಯಂತೆ ರೋಗಿಯ ಕಾಯಿಲೆಯನ್ನು ಆ ಹೆಂಗಸಿಗೆ ವರ್ಗಾಯಿಸುವುದಾಗಿದೆ. ಆದರೆ ಅನ್ನ ಬಟ್ಟೆ ಎಣ್ಣೆ ಇತ್ಯಾದಿಗಳನ್ನು ದಾನವಾಗಿ ನೀಡುವುದರೊಂದಿಗೆ ಆ ನಂಬಿಕೆಯನ್ನು ಬಹಳ ನಾಜೂಕಾಗಿಯೇ ಬಳಸಿಕೊಳ್ಳಲಾಗಿದೆ. ಅದರ ವಿಮರ್ಶೆಯ ಗೋಜಿಗೆ ಹೋಗದ ಕೊರಗರು ಇಲ್ಲಿ ಬಲಿಪಶುಗಳು.(ಬಾಬು ಕೊರಗ ಪಾಂಗಾಳ, ಕೊರಗರ ಅಜಲು, ೨೦೦೯, ಪು.ಸಂ. ೫)

ಇಂದು ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಜಾತಿ ಪದ್ಧತಿಗೆ ಅಷ್ಟೊಂದು ಪ್ರಾಮುಖ್ಯತೆಯನ್ನು ನೀಡಲಾಗುತ್ತಿಲ್ಲ. ಆದ್ದರಿಂದ 'ಪಂಚಮರು" ಎಂಬ ಪರಿಕಲ್ಪನೆ ಕಂಡುಬರುವುದಿಲ್ಲ. ವಕ್ತೃಗಳ ಮಾಹಿತಿಯಂತೆ ಪಂಚಮ ದಾನವನ್ನು **ನೀಡುವ ಪದ್ಧತಿಯು** ಕಡಿಮೆಯಾಗಿದೆ. ಮೇಲ್ಜಾತಿಯ ಯಾರಿಗಾದರೂ ಕಾಯಿಲೆ ಬಂದರೆ ವೈದ್ಯರಲ್ಲಿಗೆ **ಹೋಗುತ್ತಿರೇಯೇ ಹೊರತು ಕೊರಗ** ಮಹಿಳೆಯರನ್ನು ಕರೆಸಿ ಅನಿಷ್ಟ ಪದ್ಧತಿಯನ್ನು ಅನುಸರಿಸುವುದು ಕಡಿಮೆಯಾಗಿದೆ. ಅದರಲ್ಲೂ ಪಂಚಮ ದಾನದ ಹೆಸರಲ್ಲಿ ರೋಗಿಯ ತಲೆಕೂದಲು ಹಾಗೂ ಉಗುರುಗಳನ್ನು ಕತ್ತರಿಸಿ ಅನ್ನಕ್ಕೆ ಬೆರೆಸಿ ತಿನ್ನಲು ಕೊಡುವುದನ್ನು ಕೊರಗರು ಮಾತ್ರವಲ್ಲದೆ ಸಮಾಜವೂ ಅದನ್ನು ಒಪ್ಪುವುದಿಲ್ಲ. ಕೊರಗರೂ ಕೂಡ ತಮ್ಮ ತಿಂಗಳ ಸಭೆಯಲ್ಲಿ ಇಂತಹ ವಿಷಯದ ಬಗ್ಗೆ ಚರ್ಚಿಸುತ್ತಾರೆ. ಇಂದು ಅದರ ಬಗ್ಗೆ

ಹಲವು ವಿಮರ್ಶೆಗಳನ್ನು ಕೂಡ ಕೊರಗರು ನಡೆಸಿದ್ದಾರೆ. ಉಡುಪಿ ಕುಂದಾಪುರ ಕಾರ್ಕಳ, ಮಂಗಳೂರು ಮೊದಲಾದ ಕಡೆ ಇಂತಹ ಆಚರಣೆ ಕಂಡು ಬರದಂತೆ ಜಿಲ್ಲಾಧಿಕಾರಿಗಳಿಗೆ ಕೊರಗಾಭಿವೃದ್ಧಿ ಸಂಘಗಳು ಜಿಲ್ಲಾಧಿಕಾರಿಗಳಲ್ಲಿ ಮನವಿ ಮಾಡಿದೆ.

ಇಂದು ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಜನರು ಕೊರಗ ಮಹಿಳೆಯರನ್ನು ಕರೆಸಿ ಪಂಚಮ ದಾನ ನೀಡುವುದನ್ನು ಅನುಸರಿಸುತ್ತಿಲ್ಲ. ಇದಕ್ಕೆ ಶಿಕ್ಷಣ ಇಲ್ಲವೇ ಕಠಿಣ ಶಿಕ್ಷೆಯ ಭಯ ಕಾರಣವಾಗಿದೆ.

ಕೊರಗರ ಅಜಲು ಚಾಕ್ರಿ ಎಂಬುವುದೇ ಒಂದು ಅಸ್ಪೃಶ್ಯತೆಯ ಕ್ರಿಯೆ. ಅಜಲಿನ ಯಾವ ಕೆಲಸಗಳೂ ಅಸ್ಪೃಶ್ಯತೆಯಿಂದಮುಕ್ತವಾಗಿಲ್ಲ. ಯಾವುದೇ ಧಾರ್ಮಿಕ, ಸಾಂಸ್ಕೃತಿಕ ಕಾರ್ಯಗಳಲ್ಲಿ ಇವರಿಗೆ ಪ್ರವೇಶವಿರುವುದಿಲ್ಲ. ದಾನ ಸ್ವೀಕರಿಸುವಾಗಲೂ ಕೊರಗ ಮಹಿಳೆ ದೂರವೇ ನಿಂತು ಅನ್ನ ತುಂಬಿದ ಗೆರಸೆಯನ್ನು ಎತ್ತಿ ನೀವಾಳಿಸಬೇಕು. ಜಾತ್ರೆ, ನೇಮಗಳಲ್ಲಿ ಕೊರಗರು ಅರ್ಧ ಕಿಲೋಮೀಟರ್‌ನಷ್ಟು ದೂರ ನಿಂತು ಚಾಕ್ರಿ ಮಾಡಬೇಕು. ಸತ್ತವರ ಹೆಣದ ಹತ್ತಿರವೂ ಇವರು ಸುಳಿಯುವಂತಿಲ್ಲ. ದೇವಸ್ಥಾನಗಳ ಎದುರಿನ ಗದ್ದೆಗಳಿಗೆ ಇಳಿಯುವಂತಿಲ್ಲ. ಊರವರು ದಾರಿಯಲ್ಲಿ ಹೋಗುತ್ತಿರುವಾಗ ಎದುರಾದರೆ, ಇವರು ದಾರಿಬಿಟ್ಟು ದೂರ ಸರಿದು ನಿಲ್ಲಬೇಕು. ನಡುಬಗ್ಗಿಸಿ ಕೈ ಜೋಡಿಸಿ ಊರವನ್ನು ಗೌರವಿಸಬೇಕು. ಈಗ ಅಸ್ಪೃಶ್ಯತೆ ಇಲ್ಲ ಎನ್ನುವ ಮಂದಿಯೂ ಇದನ್ನೆಲ್ಲಾ ಪ್ರತಿದಿನ ಎಂಬಂತೆ ಕಣ್ಣಾರೆ ಕಾಣುತ್ತಿರುವುದು ನಿತ್ಯ ಸತ್ಯ.(ಬಾಬು ಕೊರಗ ಪಾಂಗಾಳ, ಕೊರಗರ ಅಜಲು, ೨೦೦೯ ಪು.ಸಂ.೧೩)

ಹೆಬ್ರಿ ಮುನಿಯಾಲು, ಕಾಪು ಕೋಟ, ಕುಂದಾಪುರ, ಮುಲ್ಕಿ ಮೊದಲಾದ ಕಡೆ ಕ್ಷೇತ್ರ ಕಾರ್ಯ ನಡೆಸಿದಾಗ ಕೊರಗ ವಕ್ತೃಗಳು ನೀಡಿದ ಮಾಹಿತಿಯಂತೆ ಅಜಲು ಚಾಕ್ರಿಯಲ್ಲಿ ಭಾಗವಹಿಸುವ ಕೊರಗರು ಅದನ್ನು ತಮ್ಮ ಜಾತಿಯ ಕಸುಬು ಎಂದು ಭಾವಿಸಿದ್ದಾರೆ. ತಲತಲಾಂತರದಿಂದ ತಮ್ಮ ಕುಟುಂಬಗಳು ಈ ಕಸುಬನ್ನು ಮಾಡುತ್ತಿವೆ. ಅವರ ಪ್ರಕಾರ ಇದು ಅಸ್ಪೃಶ್ಯತೆಯ ಆಚರಣೆಯಲ್ಲಿ ಕೆಲವೊಂದು ಧಾರ್ಮಿಕ ಮತ್ತು ಸಾಂಸ್ಕೃತಿಕ ಕಾರ್ಯಗಳಲ್ಲಿ ಇರುವ ಕಾಠಿಣ್ಯತೆ ಕಡಿಮೆಯಾಗಿದೆ, ದಾನ ಸ್ವೀಕರಿಸುವಾಗ ದೂರ ನಿಲ್ಲುವ ಕ್ರಮವು ಕಡಿಮೆಯಾಗಿದೆ. ದೇವಸ್ಥಾನದ ಜಾತ್ರೆ, ನೇಮಗಳಲ್ಲಿ ಕಿಲೋ. ಮೀಟರ್‌ನಷ್ಟು ದೂರ ನಿಲ್ಲುವುದು ಕಡಿಮೆಯಾಗಿರುವುದನ್ನು ಸಾಲಿಗ್ರಾಮ, ಕೋಟೇಶ್ವರ,

ಮೂಲ್ಕಿ, ಮೂಡಬಿದ್ರೆ ಮೊದಲಾದ ದೇವಸ್ಥಾನಗಳ ಜಾತ್ರೆಗಳಲ್ಲಿ ಕಂಡುಬರುತ್ತದೆ. ಊರವರು ದಾರಿಯಲ್ಲಿ ಹೋಗುತ್ತಿರುವಾಗ ದಾರಿ ಬಿಟ್ಟು ದೂರ ಸರಿದು ನಿಲ್ಲುವುದು ಕೂಡ ಕಂಡುಬರುವುದಿಲ್ಲ. ಅದರಲ್ಲೂ ಇಂದಿನ ಕೊರಗ ಯುವಕ-ಯುವತಿಯರು ಬೇರೆಯವ ರೊಂದಿಗೆ ಬೆರೆಯುವುದನ್ನು ಕೂಡ ಕಾಣುತ್ತೇವೆ. ಮೇಲ್ಜಾತಿಯ ವ್ಯಕ್ತಿಗಳು ಬಂದಾಗ ನಡುಬಗ್ಗಿಸಿ ಗೌರವಿಸುವುದು ಕೂಡ ಕಂಡುಬರುವುದಿಲ್ಲ. ಮೇಲ್ಜಾತಿಯ ವ್ಯಕ್ತಿಗಳು ಅದನ್ನು ಅಪೇಕ್ಷಿಸದೇ ಇರುವುದು ಕೂಡ ಒಂದು ಉತ್ತಮವಾದ ಬದಲಾವಣೆಯಾಗಿದೆ. ಅಸ್ಪೃಶ್ಯತಾ ಆಚರಣೆ ನಿಷೇಧ ಕಾನೂನು ಅತ್ಯಂತ ಕಟ್ಟುನಿಟ್ಟಾಗಿರುವು ದರಿಂದ ಜನರು ಕೊರಗರನ್ನು ಹೀನಾಯವಾಗಿ ನೋಡುವುದು ಕಡಿಮೆಯಾಗಲು ಕಾರಣವಾಗಿದೆ.

ಊರಿನ ಅನಿಷ್ಟಗಳನ್ನೆಲ್ಲಾ ಕೊರಗರ ಮೇಲೆ ಹೇರುವುದು ಬಹಳ ಸುಲಭ. ಊರಿನ ಧಣಿಗಳ ಬೆದರಿಕೆಯ ಗರ್ಜನೆಗೆ ನಲುಗಿರುವ ಕೊರಗರು ಮರುಮಾತಾಡದೆ ಎಲ್ಲವನ್ನು ತತ್ತದೆಂದು ಸ್ವೀಕರಿಸುತ್ತಾರೆ. ಅಹೋ ರಾತ್ರಿ ಊರಿನ ಮಾರಿಯನ್ನು ಓಡಿಸಲೂ ಮುಂದಾಗುತ್ತಾರೆ. ಪಂಚಮರೆಂಬ ಆರೋಪ ಹೊರಿಸಿಕೊಂಡು ಪಂಚಮ ದಾನದೊಂದಿಗೆ ಊರವರ ಕಾಯಿಲೆಯನ್ನು ತಮಗೆ ವರ್ಗಾಯಿಸಿಕೊಳ್ಳಲೂ ಅಂಜುವುದಿಲ್ಲ, ಕಂಬಳದ "ಪನಿಯಲ್ಲಿ" ಕುಡಿದು ಬೇಕಾಬಿಟ್ಟಿ ಕುಣಿಯಲೂ ಹೇಸುವುದಿಲ್ಲ.(ಬಾಬು ಕೊರಗ ಪಾಂಗಾಳ, ಕೊರಗರ ಅಜಲು ೨೦೦೯, ಪು.ಸಂ. ೫)

ಊರಿನ ಅನಿಷ್ಟಗಳನ್ನು ಕೊರಗರ ಮೇಲೆ ಹೇರುವುದು ಬಹಳ ಕಡಿಮೆಯಾಗಿದೆ. ಇದಕ್ಕೆ ಉಡುಪಿ ಹಾಗೂ ದಕ್ಷಿಣ ಕನ್ನಡ ಜಿಲ್ಲೆಯ ಜಿಲ್ಲಾಧಿಕಾರಿಗಳು ಹೆಗಲು ನೀಡಿದ್ದಾರೆ. ಧಣಿಗಳ ಗರ್ಜನೆ ಅಷ್ಟಾಗಿ ಕಂಡುಬರುವುದಿಲ್ಲ. ತಮಗಾಗುವ ಸಮಸ್ಯೆಗೆ ಕೊರಗರು ಮರುಮಾತನಾಡುವ ಅಂಶವನ್ನು ಉಡುಪಿ ಜಿಲ್ಲಾ ಪಂಚಾಯತ್ ನಡೆಸುವ ಸಭೆಗಳಲ್ಲಿ ಕಂಡುಬರುತ್ತದೆ. ತಮಗಾಗುವ ವಸತಿ ಸಮಸ್ಯೆ, ಸಂಚಾರ ಸಮಸ್ಯೆ ನೀರಿನ ಸಮಸ್ಯೆ ಮೊದಲಾದವುಗಳನ್ನು ಸಭೆಯಲ್ಲಿ ನೇರವಾಗಿ ಸ್ಥಳೀಯ ಸಚಿವರಿಗೆ ಹೇಳುವ ಗುಣವನ್ನು ಬೆಳೆಸಿಕೊಂಡಿದ್ದಾರೆ. ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಾರಿಯ ಸಮಯದಲ್ಲಿ ಕೊರಗರು ಡೋಲು ಬಾರಿಸುವುದನ್ನು ಇಂದಿಗೂ ಕಾಣುತ್ತೇವೆ. ಕೊರಗ ವಕ್ತೃಗಳೇ ತಿಳಿಸದಂತೆ ಇಲ್ಲಿ ಅಸ್ಪೃಶ್ಯತೆ ಆಚರಣೆ ಕಂಡುಬರುವುದಿಲ್ಲ. ಡೋಲು ಬಾರಿಸುವುದಕ್ಕಾಗಿ ದೇವಸ್ಥಾನದಿಂದ ಹಣ ದೊರೆಯುತ್ತದೆ. ಕಂಬಳ ಸಮಯದಲ್ಲಿ ಕೊರಗರನ್ನು ಬಳಸುವುದು ಕಡಿಮೆಯಾಗಿದೆ, ಬಳಸಿದರೂ ರಾತ್ರಿಯ ಸಮಯದಲ್ಲಿ ಕೊರಗ ಯುವಕರು ಕುಡಿಯುವುದನ್ನು

ವಿರೋಧಿಸುತ್ತಾರೆ. ಕಂಬಳದ ಸಮಯದಲ್ಲಿ ಕೊರಗರಿಗೂ ಮರ್ಯಾದೆಯನ್ನು ನೀಡಲಾಗುತ್ತದೆ.

ಕೊರಗರು ಪೂರ್ತಿಯಾಗಿ ನಿರ್ಗತಿಕರು ಅವರಿಗೆ ಸ್ವಂತ ಭೂಮಿಯಿಲ್ಲ, ವಸತಿಯಿಲ್ಲ, ಕುಡಿಯುವ ನೀರಿನ ಸೌಲಭ್ಯವಿಲ್ಲ. ಕಸ ಗುಡಿಸುವ ಕೆಲಸ, ಭಿಕ್ಷೆ ಎತ್ತುವುದು. ಇತರರ ಎಂಜಲು ಊಟ ಮಾಡುವುದು ಕಳ್ಳು ಕುಡಿಯುವುದು ಅಂಟಿವೆ. ರೋಗಗಳಿಗೆ ಸಾಂಪ್ರದಾಯಿಕ ಚಿಕಿತ್ಸೆಯನ್ನೇ ಇನ್ನೂ ಪಡೆಯುತ್ತಿದ್ದಾರೆ. ಸರಕಾರ ಕೊಟ್ಟಿರುವ ಒಣ ಭೂಮಿಯಲ್ಲಿ ಏನೂ ಬೆಳೆಯುತ್ತಿಲ್ಲ. ಕೊರಗರ ಕಾಲೋನಿಗಳಿಗೆ ಯಾವುದೇ ಆಧುನಿಕ ಸೌಲಭ್ಯಗಳನ್ನು ಒದಗಿಸಿಲ್ಲ. ಸರಕಾರದ ಉನ್ನತ ಹುದ್ದೆಗಳಲ್ಲಿ ಕೊರಗರಿಗೆ ಪ್ರಾತಿನಿಧ್ಯವಿಲ್ಲ. (ಪುರುಷೋತ್ತಮ ಬಿಳಿಮಲೆ, ಕೊರಗರ ಸಂಸ್ಕೃತಿ ೧೯೯೩, ಪು.ಸಂ. ೫೪)

ಇಂದು ಸರ್ಕಾರದಿಂದ ಕೊರಗರಿಗೆ ವಸತಿ ಯೋಜನೆಯ ಮೂಲಕ ಮನೆ ನಿರ್ಮಾಣಗಳು ಆಗುತ್ತಿವೆ. ಅಧಿಕಾರಿಗಳ ನಿಧಾನಗತಿಯ ಧೋರಣೆಯಿಂದಾಗಿ ಸ್ವಲ್ಪ ಆಡಚಣೆಯಾದರೂ ಸಹಃ ಬೆಳ್ತಂಗಡಿ, ಪುತ್ತೂರು, ಸುಳ್ಯ, ಕಟಪಾಡಿ, ಕಾಪುಗಳಲ್ಲಿ ಕೊರಗರಿಗೆ ನಿವೇಶಗಳನ್ನು ನಿರ್ಮಾಣ ಮಾಡಲಾಗಿದೆ. ಕುಡಿಯುವ ನೀರಿನ ಸೌಲಭ್ಯವನ್ನು ಪಂಚಾಯತ್ ಮೂಲಕ ನೀಡಲಾಗುತ್ತದೆ. ಕೊರಗರಲ್ಲಿ ಕುಡಿತ ಅಧಿಕವಾಗಿರುವುದು ಕಾಣುತ್ತೇವೆ. ಪುರುಷ ಮಹಿಳೆಯರು ಎನ್ನದೆ ಅಧಿಕವಾಗಿ ಕುಡಿಯುವುದು ಅವರ ಆರೋಗ್ಯದ ಸಮಸ್ಯೆಗೆ ಕಾರಣವಾಗಿದೆ. ಕೊರಗರು ಹಲವು ಕಾಯಿಲೆಗಳಿಗೆ ತುತ್ತಾಗಲು ಚಿಕ್ಕಪ್ರಾಯದಲ್ಲಿಯೇ ಸಾವನ್ನಪ್ಪಲು ಕುಡಿತವು ನೇರವಾಗಿ ಹೊಣೆಯಾಗಿದೆ. ಆದರೆ ಕೊರಗರಿಗೆ ಕಾಯಿಲೆ ಬಂದರೆ ಸಾಂಪ್ರದಾಯಿಕ ಚಿಕಿತ್ಸೆಯನ್ನು ಪಡೆಯುತ್ತಿಲ್ಲ. ಬದಲಾಗಿ ಹತ್ತಿರವಿರುವ ಆಸ್ಪತ್ರೆಗೆ ತೆರಳಿ ಚಿಕಿತ್ಸೆ ಪಡೆಯುತ್ತಿದ್ದಾರೆ.

ಕೊರಗರಿಗೆ ನೀಡುತ್ತಿರುವ ಕೃಷಿ ಭೂಮಿಯಲ್ಲಿ ಮುಂಡ್ಕೂರು, ಶಿರ್ವ, ಪಿಲಾರ್‌ಖಾನ್ ಗಳಲ್ಲಿ ಅಷ್ಟೊಂದು ಉತ್ತಮವಾಗಿಲ್ಲ. ಕೆಲವೊಂದು ಸರ್ಕಾರ ನೀಡಿದ ಕೃಷಿ ಭೂಮಿಯನ್ನು ಕೊರಗರು ಸಮರ್ಪಕವಾಗಿ ಬಳಸಿಕೊಳ್ಳುತ್ತಿಲ್ಲ. ಅದ್ದರಿಂದ ಕೊರಗರ ಭೂಮಿಗಳು ಬಂಜರು ಭೂಮಿಗಳಾಗಿ ಪರಿವರ್ತನೆಗೊಂಡಿದೆ. ಆದರೆ ಕಾರ್ಕಳ ಬಜಗೋಳಿ, ಸಾಣೂರು ಮೊದಲಾದ ಪ್ರದೇಶಗಳಲ್ಲಿ ಕೆಲವು ಕೊರಗರು ಸರ್ಕಾರಿ ಭೂಮಿಯನ್ನು ಬಳಸಿ ಮಲ್ಲಿಗೆ ಕೃಷಿಯನ್ನು ಮಾಡುತ್ತಿದ್ದಾರೆ.

ಈ ಮೂಲಕ ಬರುವ ಆದಾಯದಿಂದ ತಮ್ಮ ಜೀವನವನ್ನು ಸಾಗಿಸುತ್ತಿದ್ದಾರೆ. ಆದರೆ ಅವರು ಬೆಳೆದ ಬೆಳೆಗೆ ಉತ್ತಮ ಮಾರುಕಟ್ಟೆ ಸಿಗುತ್ತಿಲ್ಲ. ಕೊರಗಾಭಿವೃದ್ಧಿ ಸಂಘಗಳು ಸ್ಥಳೀಯ ಸಂಘಟನೆಗಳು ಇದರ ಕಡೆ ಗಮನಹರಿಸಬೇಕಿದೆ. ಇಂದು ಕೊರಗ ಕಾನೂನುಗಳಿಗೆ ಕೆಲವೊಂದು ಆಧುನಿಕ ಸೌಲಭ್ಯಗಳು ಲಭ್ಯವಾಗಿಲ್ಲ. ಮಣಿಪಾಲ, ಮಂಚಿ ಪ್ರದೇಶಗಳಲ್ಲಿ ಮನೆಗಳಿಗೆ ತಗಡುಶೀಟುಗಳು, ಸೋಲಾರ್ ವ್ಯವಸ್ಥೆ, ನೀರಿನ ವ್ಯವಸ್ಥೆ ಮಾಡಲಾಗಿದೆ. ಇಂದು ಸರ್ಕಾರಿ ಹುದ್ದೆಗಳಲ್ಲಿಯೂ ಬೆರಳೆಣಿಕೆಯ ಕೊರಗರು ಇದ್ದಾರೆ. ಆದರೆ ಹೆಚ್ಚಿನ ಉನ್ನತ ಹುದ್ದೆಗಳು ಸ್ಥಳೀಯ ಇತರ ಪರಿಶಿಷ್ಟ ಪಂಗಡಗಳಾದ ಮರಾಠಿ ನಾಯ್ಕ್, ಕುಡುಬಿ ಬುಡಕಟ್ಟು ಜನರು ಪಡೆಯುತ್ತಿದ್ದಾರೆ. ಆದ್ದರಿಂದ ಆದಿಮ ಬುಡಕಟ್ಟಾದ ಕೊರಗರಿಗೆ ಸರ್ಕಾರೀ ಸೌಲಭ್ಯ ಸಿಗಲು ಸರ್ಕಾರದ ಪ್ರಯತ್ನಕ್ಕೆ ಅಗತ್ಯವಿದೆ. ಕೊರಗಾಭಿವೃದ್ಧಿ ಸಂಘದ ಪ್ರಯತ್ನದ ಫಲವಾಗಿ ವಿಶ್ವವಿದ್ಯಾಲಯದ ಪ್ರೊಫೆಸರ್, ಪುರಸಭೆ ನಗರಸಭೆ, ಮಹಾನಗರ ಪಾಲಿಕೆ ಮೊದಲಾದೆಡೆ ಉದ್ಯೋಗ ಜಾಡಮಾಲಿಗಳಾಗಿ ಕೂಡ ಕೊರಗರು ದುಡಿಯುತ್ತಿರುವುದನ್ನು ಉಡುಪಿ ಹಾಗೂ ಮಂಗಳೂರಿನ ಪಾಲಿಕೆಗಳಲ್ಲಿ ಕಾಣಬಹುದು.

ಕಂಬಳದ ಹಿಂದಿನ ರಾತ್ರಿ ಅಜಲಿನ ಕೊರಗರು ತಮ್ಮ ನೆಂಟರಿಷ್ಟರೊಂದಿಗೆ ಸೇರಿ, ರಾತ್ರಿಯಿಡೀ ಜಾಗರಣೆ ಇದ್ದು, ಕಂಬಳ ನಡೆಯುವ ಗದ್ದೆಯನ್ನು ಕಾಯಬೇಕು. ಅಲೌಕಿಕವಾದ ದುಷ್ಟಪೀಡೆಗಳು ಗದ್ದೆಯನ್ನು ಪ್ರವೇಶಿಸಿದಂತೆ ಮಾಡುವುದೇ ಇದರ ಉದ್ದೇಶ. ಹೀಗೆ ಜಾಗರಣೆ ಇದ್ದು ಡೋಲು ಬಾರಿಸುತ್ತಿರುವಾಗ ಅವರು ಅನಿವಾರ್ಯವಾಗಿ ಕುಡಿತಕ್ಕೆ ಮೊರೆಹೋಗುತ್ತಾರೆ. ಇಲ್ಲಿ ಕೊರಗರನ್ನು ವಿಚಾರಿಸಲು ಯಾರೊಬ್ಬರೂ ಹೋಗುವುದಿಲ್ಲ. ಸಮಯ ಕಳೆಯುವುದಕ್ಕಾಗಿ ಕೆಲವರು ಕುಣಿಯುತ್ತಾರೆ. ಜೊತೆಗೆ ಅಶ್ಲೀಲತನವನ್ನು ನಟಿಸುತ್ತಾರೆ. ಇದನ್ನು ಕೊರಗರ ಸಂಸ್ಕೃತಿಯೆಂದು ವೈಭವೀಕರಿಸುವ ಕೆಲವು ಬರಹಗಾರರು ಕೊರಗೊಂದಿಗೆ ಕೆಲವು ಕ್ಷಣ ಇದ್ದು ಅವರ ನುಭವಗಳನ್ನು ಹಂಚಿಕೊಂಡರೆ ವಾಸ್ತವತೆಯ ಕರಾಳರೂಪ ದರ್ಶನವಾದೀತು. ಕೆಲವು ಕಡೆ ಕಂಬಳದ ದಿನ ಕೋಣಗಳು ಗದ್ದೆಗೆ ಇಳಿಯುವ ಮೊದಲು ಕೊರಗ ಯುವಕರನ್ನು ಗದ್ದೆಯಲ್ಲಿ ಕೋಣಗಳಂತೆ ಓಡಿಸುತ್ತಾರೆ. ನೀರು ತುಂಬಿದ ಕೆಸರು ಗದ್ದೆಯಲ್ಲಿ ಮುದ್ದಿನ ಕೋಣಗಳನ್ನು ಓಡಿಸಲು ಯಾವುದೇ ಆತಂಕಗಳಿಲ್ಲ ಎಂದು ಅಂತಿಮವಾಗಿ ಖಾತ್ರಿಪಡಿಸಿಕೊಳ್ಳುವುದೇ ಇದರ ಹಿಂದಿರುವ ಉದ್ದೇಶವಾಗಿದೆ. ಗದ್ದೆಯಲ್ಲಿ ವಿರೋಧಿಗಳು ಎಲ್ಲಿಯಾದರೂ ಗಾಜಿನ

ಚೂರುಗಳನ್ನು ಹಾಕಿದ್ದರೆ ಅಥವಾ ಗದ್ದೆಗೆ ಹಾಕಿದ ಗೊಬ್ಬರದಲ್ಲಿ ಕಸಕಡ್ಡಿಗಲೇನಾದರೂ ಇದ್ದರೆ ಹಾಗೂ ಕೆಸರು ಗದ್ದೆಯಲ್ಲಿ ಹೊಂಡಗಳೇನಾದರೂ ಇದ್ದಲ್ಲಿ ಅದರ ಅಪಾಯವು ಮುದ್ದಿನಿಂದ ಸಾಕಿದ ಕೋಣಗಳಿಗೆ ಬರಬಾರದಲ್ಲವೇ?! ಕೊರಗರ ಕಾಲಿಗೆ ತಾಗಿದರೂ ಆತ ಯಾರೊಂದಿಗೆ ಹೇಳಿಕೊಳ್ಳಲಾರ!!(ಬಾಬು ಕೊರಗ ಪಾಂಗಾಳ, ಕೊರಗರ ಅಜಲು ೨೦೦೯, ಪು.ಸಂ. ೮)

ಕಂಬಳದ ನಡೆಯುವ ಹಿಂದಿನ ದಿನ ರಾತ್ರಿ ಕಂಬಳ ಗದ್ದೆಯನ್ನು ಕಾಯುವ ಕೊರಗರ ಸಂಖ್ಯೆ ಇಳಿಮುಖವಾಗಿದೆ. ಕೊರಗ ಸಂಘಟನೆಗಳೂ ಕೂಡ ಇದನ್ನು ವಿರೋಧಿಸುತ್ತದೆ. ಏಕೆಂದರೆ ಪನಿಕುಲ್ಲನೆ" ಅಂದರೆ ಕಂಬಳ ಗದ್ದೆಯನ್ನು ಕಾಯುವ ಸಂದರ್ಭದಲ್ಲಿ ಯುವಕರು ಕುಡಿತದ ಮೊರೆಹೋಗುತ್ತಾರೆ. ಕಂಬಳ ಗದ್ದೆಯನ್ನು ಕಾಯುವ ಸಂದರ್ಭದಲ್ಲಿ ಹಿಂದೆ ಇದ್ದಂತಹ ಅಶ್ಲೀಲತೆ ಇಂದು ಕಂಡುಬರುವುವಿಲ್ಲ. ಕಾನೂನಿನ ಭಯದಿಂದಲೋ ಏನೋ ಕೊರಗ ಯುವಕರನ್ನು ಗದ್ದೆಯಲ್ಲಿ ಕೋಣಗಳಂತೆ ಓಡಿಸುವ ಪದ್ಧತಿ ಕಡಿಮೆಯಾಗಿದೆ. ಕೊರಗರಲ್ಲಿರುವ ಜಾಗೃತಿಯಿಂದಾಗಿ ಕಂಬಳದಲ್ಲಿ ಕಂಬಳ ಮರ್ಯಾದೆ ನೀಡಿದರೆ ಮಾತ್ರ ಕಂಬಳದ ಚಟುವಟಿಕೆಯಲ್ಲಿ ಕೊರಗರ ಭಾಗವಹಿಸುತ್ತಿದ್ದಾರೆ.

ಅಲ್ಲಿ ಅಸ್ಪೃಶ್ಯತೆ ಕಂಡುಬಂದರೆ ಇಂದು ಕಂಬಳದಲ್ಲಿ ಕೊರಗರು ಭಾಗವಹಿಸುತ್ತಿಲ್ಲ.

ಅಜಲಿಗೆ ಸಂಬಂಧಪಟ್ಟ ಕೊರಗರಿಂದ ಊರಿನ ಸ್ವಚ್ಛತೆಯನ್ನು ಮಾಡಿಸಲಾಗುತ್ತದೆ. ಸತ್ತ ಪ್ರಾಣಿಗಳನ್ನು (ದನ, ನಾಯಿ, ಹಾವು ಇತ್ಯಾದಿ) ತೆಗೆಸುತ್ತಾರೆ. ಮದುವೆ ಮುಂತಾದ ಕಾರ್ಯಕ್ರಮಗಳಲ್ಲಿ ಊರವರು ಉಂಡು ಬಿಸಾಡಿದ ಎಂಜಲೆಲೆಯನ್ನು ಇವರಿಂದ ತೆಗೆಸುತ್ತಾರೆ. ಮೇಲ್ನೋಟಕ್ಕೆ ಈ ಎಲ್ಲಾ ಚಾಕ್ರಿಗಳು ಇತ್ತೀಚೆಗೆ ಕಡಿಮೆಯಾದಂತೆ ಕಂಡರೂ ಈಗಲೂ ಆಚರಣೆಯಲ್ಲಿದೆ. ಅದರ ವಿಧಾನ ಹಾಗೂ ಕ್ಷೇತ್ರಗಳು ಮಾತ್ರ ಬದಲಾವಿದೆ. ಸತ್ತ ಪ್ರಾಣಿಗಳನ್ನು ಊರಿನ ಬದಲು ಗ್ರಾಮ ಪಂಚಾಯತ್‌ಗಳ ಮೂಲಕ, ಉದ್ಯೋಗದ ಹೆಸರಿನಲ್ಲಿ ತೆಗೆಸುತ್ತಾರೆ. ಸಮಾರಂಭದ ಬದಲಿಗೆ ಹೋಟೇಲುಗಳಲ್ಲಿ ಎಂಜಲು ತೆಗೆಸುವ ಕೆಲಸ ಮಾಡಿಸುತ್ತಾರೆ. ಹೋಟೇಲ್‌ಗಳ ಕಕ್ಕುಸು, ಮೆಟ್ಟಿಲುಗಳಲ್ಲಿ ಕೊರಗ ಯುವಕರ ತಾಕತ್ತುಗಳಿಗೆ ಬೆಲೆ ಕಟ್ಟುತ್ತಾರೆ. ಕೊರಗರೂ, ತಾವು ಇದಕ್ಕೇ ಲಾಯಕ್ಕು ಎನ್ನುವ ಧೋರಣೆಯನ್ನು ಬೆಳೆಸಿಕೊಳ್ಳುವಂತೆ ಈ ಅಜಲು ತರಬೇತುಗೊಳಿಸಿದೆ. ಇಲ್ಲಿ ಕೊರಗರು ಸ್ವಚ್ಛತೆಯ ಕೆಲಸಗಳನ್ನೇ ಯಾಕೆ ನಿರ್ವಹಿಸಬೇಕು? ಎನ್ನುವುದಕ್ಕೆ

ಸಾರ್ವಜನಿಕರು ಪ್ರತಿಕ್ರಿಯಿಸಬೇಕಾಗಿದೆ.(ಬಾಬು ಕೊರಗ ಪಾಂಗಾಳ, ಕೊರಗರ ಅಜಲು, ೨೦೦೯, ಪು.ಸಂ.೪)

ಅಜಲು ಚಾಕ್ರಿಯ ಹೆಸರಿನಲ್ಲಿ ಕೊರಗರಿಂದ ಊರಿನ ಸ್ವಚ್ಛತೆ ಮಾಡಿಸುವುದು ಕಡಿಮೆಯಾಗಿದೆ. ಸತ್ತ ಪ್ರಾಣಿಗಳನ್ನು ಊರಿನಿಂದ ಹೊರಹಾಕುವ ಕೆಲಸವನ್ನು ಅವರಿಂದು ಮಾಡುತ್ತಿಲ್ಲ. ಉಂಡು ಬಿಸಾಡಿದ ಎಲೆಯನ್ನು ಬೇರೆ ಬಡ ಮಹಿಳೆಯರೂ ಮಾಡುತ್ತಾರೆ. ಅದಕ್ಕೆ ಕೊರಗರನ್ನೇ ಆಯ್ಕೆ ಮಾಡಿಕೊಳ್ಳುತ್ತಿಲ್ಲ. ಇಂದು ಕಾನೂನಿನ ಭಯದಿಂದ ಒತ್ತಾಯಪೂರ್ವಕವಾಗಿ ಕೊರಗರಲ್ಲಿ ಚಾಕ್ರಿ ಮಾಡಿಸಿಕೊಳ್ಳುತ್ತಿಲ್ಲ. ಇಂದು ಕೊರಗರು ಸ್ವಚ್ಛತೆಯ ಕೆಲಸಗಳಿಗೆ ಮಾತ್ರ ಮೀಸಲಾಗಿಲ್ಲ. ಬೇರೆ ಉದ್ಯೋಗ ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯ ಅವರಿಗೆ. ಇಂದು ಕೊರಗರ ಕೂಲಿ, ಕೆಲಸ, ರಿಕ್ಷಾ ಡ್ರೈವರ್, ಸ್ವದ್ಯೋಗಗಳನ್ನು ಮಾಡಿಕೊಂಡು ಜೀವನ ಸಾಗಿಸುತ್ತಿದ್ದಾರೆ.

ಊರನ ಮಾರಿ ಎಂದರೆ ಅನಿಷ್ಟ ಪೀಡೆಗಳನ್ನು ಊರಿನಿಂದ ಹೊರಗೆ ಓಡಿಸುವ ಹಬ್ಬ. ಊರಿನ ಗಂಡಾಂತರಗಳು ಬಾರದಂತೆ ಭೂತಾದಿ ಗಣಗಳನ್ನು ಸಂತೃಪ್ತಿಪಡಿಸುವ ಕಾರ್ಯವಾಗದೆ. ಮಾರಿ ಓಡಿಸುವಾಗ ಕೊರಗರು ಎಲ್ಲರಿಗಿಂತಲೂ ಮುಂದೆ ಡೋಲು ಬಾರಿಸುತ್ತಾ ಓಡಬೇಕಾಗುತ್ತದೆ. ಕೆಲವೊಮ್ಮೆ ೨-೩ ಕಿಲೋ ಮೀಟರ್‌ಗಳಷ್ಟು ದೂರದವರೆಗೂ ಓಡಬೇಕಾಗುವುದು. ಕೊರಗರ ಡೋಲಿ ಧ್ವನಿಗೆ ಅಲೌಕಿಕ ದುಷ್ಟಶಕ್ತಿಗಳು ದೂರ ಸರಿಯುತ್ತವೆ ಎಂಬ ನಂಬಿಕೆ(ಆರೋಪ)ಯಿದೆ. ವಾಸ್ತವವಾಗಿ ಹಿಂದಿನ ಕಾಲದಲ್ಲಿ ಕಾಡುಗಳೇ ಹೆಚ್ಚಾಗಿದ್ದಾಗ, ರಾತ್ರಿ ವೇಳೆ ಕಾಡುಪ್ರಾಣಿಗಳ ಭಯವಿದ್ದಿರಬೇಕು. ಕೊರಗರು ಡೋಲು ಬಾರಿಸುತ್ತಾ ಮುಂದಿನಿಂದ ಹೋದರೆ ಹಿಂದಿನಂದ ಬರುವ ಜನರು ಸುರಕ್ಷಿತವಾಗಿರುತ್ತಾರೆ. ತಮ್ಮ ಸುರಕ್ಷತೆಗಾಗಿ ಕೊರಗರ ಡೋಲಿಗೆ ಬ್ಲ್ಯಾಕ್ ಮ್ಯಾಜಿಕ್‌ನ ಆರೋಪ ಹೊರಿಸಲಾಗಿದೆ. ಇದನ್ನು ಮುಗ್ಧ ಕೊರಗರು ನಂಬಿದ್ದರು. ಮಾರಿಗೆ ಅನ್ನ ಬಡಿಸುವ "ಗಡು" ಸ್ಥಳವನ್ನು ತಲುಪಿದ ಕೂಡಲೇ ಕೊರಗರು ದೂರ ಸರಿದು ನಿಲ್ಲಬೇಕು ಏಕೆಂದರೆ ಮಾರಿಗೂ ಕೊರಗರು ಅಸ್ಪೃಶ್ಯರು!(ಬಾಬು ಕೊರಗ ಪಾಂಗಾಳ, ಕೊರಗರ ಅಜಲು, ೨೦೦೯ ಪು.ಸಂ.೭)

ದಕ್ಷಿಣ ಕನ್ನಡ ಹಾಗೂ ಉಡುಪಿ ಜಿಲ್ಲೆಗಳಲ್ಲಿ ಊರಿನ ಮಾರಿಹಬ್ಬವು ಪ್ರಮುಖವಾಗಿದೆ. ಊರಿಗೆ ಯಾವುದೇ ಸಮಸ್ಯೆಗಳು ಬರದಂತೆ ಇದನ್ನು ಆಚರಿಸಲಾಗುತ್ತದೆ. ಮಾರಿಯ ಸಮಯದಲ್ಲಿ ಇತರ ವಾದ್ಯಗಾರರಂತೆ ಕೊರಗರ ಡೋಲು ಬಾರಿಸಿಕೊಂಡು ಓಡುವುದು

ಎಲ್ಲಿಯೂ ಕಂಡುಬರುವುದಿಲ್ಲ. "ಗಡು" ಸ್ಥಳವನ್ನು ತಲುಪಿದ ಕೂಡಲೇ ದೂರ ಸರಿದು ನಿಲ್ಲುವುದನ್ನು ಅಷ್ಟಾಗಿ ಕಾಣುವುದಿಲ್ಲ. ಏಕೆಂದರೆ ಅಸ್ಪೃಶ್ಯತಾ ನಿಷೇಧ ಕಾನೂನು ಜನರಿಗೆ ಕಾನೂನಿನ ಮೇಲಿರುವ ಭಯ ಅಥವಾ ಕೊರಗರಲ್ಲಿ ಬೆಳೆದಿರುವ ಜಾಗೃತಿ ಕಾರಣವಾಗಿದೆ. ಇತರ ಜಾತಿಗಳಂತೆ ಮಾರಿಯ ಸಂದರ್ಭದಲ್ಲಿ ಕೊರಗರಿಗೂ ಗೌರವಾದರಗಳು ದೊರೆಯುತ್ತದೆ.

ಭೂತದ ಕೋಲ(ನೇಮೋತ್ಸವ) ಅಯನ, ರಥೋತ್ಸವ ಮುಂತಾದ ಊರಿನ ಜಾತ್ರೆಗಳಲ್ಲಿ ಅಜಲಿನ ಕೊರಗರು ಮುಖ್ಯ ಕೇಂದ್ರದಿಂದ ಫರ್ಲಾಂಗು ದೂರದ ಗದ್ದೆಯಲ್ಲೋ ತೋಡಿನ ಬಳಿಯೋ ಅಥವಾ ಇನ್ನಾವುದೋ ಹಳೆಮರದಡಿಯಲ್ಲಿ ಕುಳಿತು ಡೋಲು ಚಾಕರಿ ಮಾಡಬೇಕಾಗುತ್ತದೆ. ಹಲವು ದಿನಗಳವರೆಗೆ ರಾತ್ರಿ ಹಗಲು ಕೊರಗರು ಅದೇ ಜಾಗದಲ್ಲಿ ಅಸನ, ವ್ಯಸನ ಹಾಗೂ ತಮ್ಮ ಅವಶ್ಯಕತೆಗಳಲ್ಲಿ ಮೈಥುನಗಳನ್ನು ಪೂರೈಸಿ ಕೊಳ್ಳಬೇಕು. ಇವರು ಜೀವಂತ ಇದ್ದಾರೋ ಇಲ್ಲವೋ ಎಂದು ವಿಚಾರಿಸುವಕ್ಕೂ ಊರವರು ಆ ಕಡೆ ನೋಡುವುದಿಲ್ಲ. ಆದಾಗ್ಯೂ ಕೊರಗರ ಡೋಲಿನ ಸದ್ದು, ಕದೊನೆಂದು ಆರ್ಭಟ ಕೇಳಿಸದಿದ್ದರೆ ತಟ್ಟನೆ ಎಚ್ಚೆತ್ತುಕೊಳ್ಳುತ್ತಾರೆ. ಅಜಲಿನ ಮುಖ್ಯಸ್ಥನನ್ನು ಕರೆಸಿಕೊಂಡು ಎಚ್ಚರಿಕೆ ನೀಡುತ್ತಾರೆ. ಪ್ರತಿದಿನ ಇಂತಹ ಸಂದರ್ಭಗಳನ್ನೇ ಅನುಭವಿಸುವ ಕೊರಗರು ಸಾಮೂಹಿಕ ಕುಡಿತಕ್ಕೆ ತೊಡಗುತ್ತಾರೆ. ಮನೆ, ಮಡದಿ ಹಾಗೂ ಮಕ್ಕಳನ್ನು ಮರೆಯುತತಾರೆ. ಇಲ್ಲವೇ ಇಡೀ ಕುಟುಂಬವನ್ನು ಈ ಚಾಕರಿಗೆ ತೋಡಗಿಸುತ್ತಾರೆ. (ಬಾಬು ಕೊರಗ ಪಾಂಗಾಳ, ಕೊರಗರ ಅಜಲು, ೨೦೦೦ ಪು.ಸಂ. ೯)

ಇಂದು ದಕ್ಷಿಣ ಕನ್ನಡ ಜಿಲ್ಲೆ, ಉಡುಪಿ ಜಿಲ್ಲೆಗಳಲ್ಲಿ ನಡೆಯುವ ಭೂತದ ಕೋಲ, ಆಯನ, ರಥೋತ್ಸವಗಳಲ್ಲಿ ಕೊರಗರು ಭಾರಿಸುವ ಡೋಲಿಗೆ ಊರ ಮರ್ಯಾದೆ ದೋರಕುತ್ತಿದೆ. ಈ ಎಲ್ಲಾ ಕಾರ್ಯಗಳಿಗೆ ಕೊರಗರ ಡೋಲು ಅವಶ್ಯಕವಾಗಿದೆ. ದೇವಸ್ಥಾನಗಳಲ್ಲಿ ಡೋಲು ಬಾರಿಸುವ ಕೊರಗರನ್ನು ಅಸ್ಪೃಶ್ಯರನ್ನಾಗಿ ನೋಡುವುದು ಕಡಿಮೆಯಾಗಿದೆ. ದೇವಸ್ಥಾನಗಳ ವಠಾರದಲ್ಲೇ ಡೋಲು ಬಾರಿಸುವುದನ್ನೂ ಕಾಣುತ್ತೇವೆ. ಹೀಗೆ ಊರಿನ ಜಾತ್ರೆಗಳಲ್ಲಿ ತಮ್ಮ ಡೋಲಿನ ಚಾಕ್ರಿ ಮಾಡುವವರಿಗೆ ದೇವಸ್ಥಾನಗಳಿಂದ ಧನ ಹಾಗೂ ವಸ್ತುವಿನ ರೂಪದ ಮರ್ಯಾದೆಯನ್ನು ನೀಡಲಾಗುತ್ತದೆ. ಇಂತಹ ಕಸುಬು ಮಾಡಿಕೊಂಡು ಬರುತ್ತಿರುವ ಕೊರಗ ಕುಟುಂಬಗಳು ಇದರಿಂದ ತೃಪ್ತಿಯನ್ನು ಪಡೆದಿದೆ.

ಇಂದು ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಯನ್ನು ಗಮನಿಸಿದರೆ ಸ್ವಲ್ಪ ಮಟ್ಟಿನ ಶೈಕ್ಷಣಿಕ ಪ್ರಗತಿ ವ್ಯಕ್ತವಾಗಿದೆ. ಕೊರಗ ಮಕ್ಕಳ ಶಿಕ್ಷಣಕ್ಕಾಗಿಯೇ ಆಶ್ರಮ ಶಾಲೆಗಳಿವೆ. ಉಡುಪಿ ಜಿಲ್ಲೆಯ ಕುಂದಾಪುರ ತಾಲೂಕಿನ ಕುಂಭಾಶಿಯ ಸಮೀಪ ಕೊರಗ ಮಕ್ಕಳಿಗಾಗಿಯೇ "ಮಕ್ಕಳ ಶಾಲೆ" ನಿರ್ಮಾಣವಾಗಿದೆ. ಸರ್ಕಾರವೂ ಈ ಮಕ್ಕಳ ಶಾಲೆಗೆ ವಿಶೇಷ ಸವಲತ್ತುಗಳನ್ನು ನೀಡುತ್ತಿದೆ. ಸುಸಜ್ಜಿತವಾದ ಕಟ್ಟಡ, ಅಡುಗೆ ತಯಾರಿಕೆ, ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ವೇದಿಕೆ, ಮಕ್ಕಳಿಗೆ ಕುಳಿತುಕೊಳ್ಳಲು ಬೆಂಚ್ ವ್ಯವಸ್ಥೆ, ಕೊರಗರ ಸಂಘಗಳು ಕೊರಗ ಮಕ್ಕಳ ಶೈಕ್ಷಣಿಕ ಪ್ರಗತಿಗಾಗಿ ತೆಗೆದುಕೊಳ್ಳುವ ದಿಟ್ಟ ನಿರ್ಧಾರಗಳು ಕೊರಗರ ಕೊಪ್ಪಗಳ ಸಮೀಪದಲ್ಲಿಯೇ ಇರುವ ಕೊರಗ ಮಕ್ಕಳ ಶಾಲೆ, ಶಾಲೆಯ ವಿದ್ಯಾರ್ಥಿಗಳಿಗೆ ಶಿಕ್ಷಣ ನೀಡಲು ಕೊರಗ ಬುಡಕಟ್ಟಿಗೆ ಸೇರಿದ ಶಿಕ್ಷಕಿಯ ನೇಮಕ, ಮಕ್ಕಳ ಹಾಜರಾತಿ ಪುಸ್ತಕ ಮೊದಲಾದವುಗಳು ಕುಂದಾಪುರದ ಸುತ್ತಮುತ್ತಲಿನ ಕೊರಗ ಕುಟುಂಬಗಳಿಗೆ ಶೈಕ್ಷಣಿಕ ಪ್ರಗತಿಗೆ ಸಹಾಯಕವಾಗಿದೆ.

ಸರ್ಕಾರವೂ ಕೊರಗ ಮಕ್ಕಳ ಶಿಕ್ಷಣಕ್ಕಾಗಿ ಹಲವು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ಮುಖ್ಯವಾಗಿ ಉಚಿತವಾದ ಆಹಾರ ವ್ಯವಸ್ಥೆ ಮತ್ತು ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸಿ ಕೊರಗ ಮಕ್ಕಳ ಶಿಕ್ಷಣಕ್ಕೆ ಪ್ರೋತ್ಸಾಹ ನೀಡುತ್ತಿದೆ. ಆದರೆ ಸರ್ಕಾರದ ಯೋಜನೆಗಳು ಸಮರ್ಪಕವಾಗಿ ಅನುಷ್ಠಾನಗೊಳ್ಳದಿರುವುದು ಕೊರಗ ಮಕ್ಕಳ ಶಿಕ್ಷಣಕ್ಕೆ ಹಿನ್ನಡೆಯಾಗಿದೆ.

ಶಿಕ್ಷಣದಿಂದಾಗಿ ಸಾಮಾಜಿಕ ಪರಿವರ್ತನೆ ಸಾಧ್ಯ. ಆದರೆ ಕೊರಗರ ಸಮಸ್ಯೆಗಳಿಗೆ ಮೂಲ ಕಾರಣವೇ ಅನಕ್ಷರತೆ. ಕೊರಗ ಸಂಘಟನೆ ಹಾಗೂ ಸಮಗ್ರ ಆದಿವಾಸಿ ಅಭಿವೃದ್ಧಿ ಕಾರ್ಯಕ್ರಮಗಳ ಮೂಲಕ ಇಂದು ಶೈಕ್ಷಣಿಕ ಕ್ಷೇತ್ರದಲ್ಲಿ ಕೊರಗ ಮಕ್ಕಳು ಭಾಗವಹಿಸಲು ಸಹಕಾರಿಯಾಗಿದೆ.

ಪ್ರತಿಷ್ಠಿತ ಶಾಲಾ ಯೋಜನೆಯ ಅಡಿಯಲ್ಲಿ ಆರು ವರ್ಷಕ್ಕಿಂತ ಮೇಲ್ಪಟ್ಟ ವಯಸ್ಸಿನ ಕೊರಗ ಮಕ್ಕಳಿಗೆ ಉಚಿತವಾದ ಶಿಕ್ಷಣ ಪಡೆಯುವ ಅವಕಾಶವಿದೆ. ಎಲ್.ಕೆ.ಜಿಯಿಂದ ಪಿ.ಯು.ಸಿ.ವರೆಗೂ ಆಂಗ್ಲ ಮಾಧ್ಯಮದಲ್ಲಿ ಶಿಕ್ಷಣ ಪಡೆಯುವ ಸೌಲಭ್ಯವಿದೆ. ಉಡುಪಿ ಜಿಲ್ಲೆಯ ವಿನೀತ ಎಂಬ ಹುಡುಗಿ ಡಿ.ಎಚ್. ಕೋರ್ಸನ್ನು ಇಂತಹ ಅವಕಾಶವನ್ನು ಬಳಸಿ ಮುಗಿಸಿದ್ದಾಳೆ.

ಕೊರಗರಲ್ಲಿ ಇಂದು ಶಿಕ್ಷಣದಲ್ಲಿ ಆಸಕ್ತಿ ಹೆಚ್ಚಾಗಿದೆ. ಮಂಗಳೂರಿನ "ಕೋಟಿಚೆನ್ನಯ ಥೀಮ್ ಪಾರ್ಕ್"ನಲ್ಲಿ ೮೫ ಕೊರಗ ಮಕ್ಕಳು ಬೇಸಿಗೆ ಶಿಬಿರದಲ್ಲಿ ಭಾಗವಹಿಸಿದ್ದಾರೆ.

ಸಮಗ್ರ ಗ್ರಾಮೀಣ ಆಶ್ರಮದ ನೆಲೆಯಲ್ಲಿ ಬ್ರಿಡ್ಜ್ ಕೋರ್ಸ್ ಆರಂಭಿಸಿದೆ, ನೇರವಾಗಿ ಎಸ್.ಎಸ್.ಎಲ್.ಸಿ. ಅಥವಾ ಪಿಯುಸಿ ಬರೆಯುವ ಅವಕಾಶ ಕಲ್ಪಿಸಲಾಗಿದೆ. ಕುಂದಾಪುರದ ಕುಂಭಾಶಿಯ ಅಂಬೇಡ್ಕರ್ ನಗರದಲ್ಲಿ ಕೊರಗ ಮಕ್ಕಳಿಗೆ ಮಕ್ಕಳ ಶಾಲೆ ಇದೆ. ಶಿಕ್ಷಣ ಮೂಲಕ ಮುಂದಿನ ಪೀಳಿಗೆಯಾದರೂ ಕೊರಗರಲ್ಲಿ ಪರಿವರ್ತನೆಯಾಗಬಹುದೆಂಬ ಆಶಾಭಾವನೆ ಕೊರಗ ಮುಖಂಡರಲ್ಲಿದೆ.

ಇಂದು ಕೊರಗ ಮಕ್ಕಳನ್ನು ಆಶ್ರಮ ಶಾಲೆಗಳಿಗೆ ಕಳುಹಿಸದೆ ಇರಲು ಹಲವಾರು ಕಾರಣಗಳಿವೆ. ಪ್ರಮುಖವಾದವುಗಳೆಂದರೆ

೧. ಶಾಲೆಯಲ್ಲಿ ಅವರು ಸರಿಯಾಗಿ ಕಲಿಯುವುದಿಲ್ಲ.

೨. ಅತಿಹೆಚ್ಚಿನ ಶುಲ್ಕವನ್ನು ಶಾಲೆಯಲ್ಲಿ ಪಡೆಯುವುದು.

೩. ಮಕ್ಕಳು ಶಾಲೆಗೆ ಹೋಗದೆ ತಪ್ಪಿಸಿಕೊಳ್ಳುವುದು.

೪. ಶಾಲೆಯಲ್ಲಿ ಕೊಡುವ ಆಹಾರ ಉತ್ತಮವಾಗಿಲ್ಲದೆ ಇರುವುದು.

೫. ಶಾಲೆಯಲ್ಲಿ ಸೂಕ್ತ ಭದ್ರತೆ ಇಲ್ಲದೆ ಇರುವುದು.

೬. ಪೋಷಕರಿಗೆ ಮಕ್ಕಳನ್ನು ಬಿಟ್ಟು ಇರಲು ಕಷ್ಟವಾಗುವುದು.

೭. ಆಶ್ರಮ ಶಾಲೆಯಲ್ಲಿ ಶಿಸ್ತಿನ ಕೊರತೆ.

೮. ಆಶ್ರಮ ಶಾಲೆ ಮನೆಗಳಿಗಿಂತ ದೂರ ಇರುವುದು.

**ಆರೋಗ್ಯ**

ಆರೋಗ್ಯ ತಪಾಸಣೆ ಇಂದು ಕೊರಗರಿಗೆ ಸಮಸ್ಯೆಯಾಗಿ ಉಳಿದಿಲ್ಲ. ಏಕೆಂದರೆ ಆರೋಗ್ಯದ ಬಗೆಗಿನ ಕಾಳಜಿ ಹೆಚ್ಚಾಗುತ್ತಿದೆ. ಪ್ರತೀ ಮೂರು ತಿಂಗಳಿಗೊಮ್ಮೆ ಆರೋಗ್ಯ ತಪಾಸಣಾ ಶಿಬಿರ ನಡೆಸಲಾಗುತ್ತದೆ. ಆಶಾ ಆರೋಗ್ಯ ಯೋಜನೆ ಮೂಲಕ ಆರೋಗ್ಯ ತಪಾಸಣೆ, ಕೊರಗರಿಗೆ ಆರೋಗ್ಯದ ವಿಷಯವಾಗಿ ತರಬೇತಿ ಮತ್ತು ಜಾಗೃತಿ ಕಾರ್ಯ ಕ್ರಮವಮ್ಮು ಕೈಗೊಳ್ಳಲಾಗಿದೆ. ಈ ಉದ್ದೇಶಕ್ಕಾಗಿ ಐ.ಟಿ.ಡಿ.ಪಿ. ಹಣಕಾಸಿನ ನೆರವನ್ನು ನೀಡುತ್ತದೆ.

ಆರೋಗ್ಯ ಇಲಾಖೆಯೂ ಸಹ ಕೊರಗರ ಶಿಕ್ಷಣ ಮತ್ತು ಆರೋಗ್ಯಕ್ಕೆ ಪ್ರಾಮುಖ್ಯತೆ ನೀಡಿದೆ. ಪ್ರತಿ ಮೂರು ತಿಂಗಳಿಗೊಮ್ಮೆ ಆರೋಗ್ಯ ಮತ್ತು ಶಿಕ್ಷಣ ಕುರಿತಾಗಿ ಸಮಿತಿ

ಸಭೆ ನಡೆಯುತ್ತದೆ. ಅಲ್ಲಿ ಕೊರಗರು ತಮ್ಮ ಆರೋಗ್ಯ ಸಮಸ್ಯೆಯ ಬಗ್ಗೆ ತಿಳಿಸುತ್ತಾರೆ. ಅದಕ್ಕೆ ಸೂಕ್ತ ಪರಿಹಾರವನ್ನು ಆರೋಗ್ಯ ಇಲಾಖೆ ನೀಡುತ್ತದೆ. ಐದು ಪ್ರಮುಖವಾದ ಸಮಿತಿಗಳು ಆರೋಗ್ಯದ ವಿಷಯವಾಗಿ ಕಾರ್ಯೋನ್ಮುಖವಾಗಿದೆ.

೧. ಮೂಲಭೂತ ಸೌಕರ್ಯ ಸಮಿತಿ - ಇಂಜೀನಿಯರ್ ಇದರ ಉಸ್ತುವಾರಿ ನೋಡಿಕೊಳ್ಳುತ್ತಾರೆ.

೨. ಆರೋಗ್ಯ ಸಮಿತಿ - ಜಿಲ್ಲಾ ಆರೋಗ್ಯಾಧಿಕಾರಿ ಮೇಲ್ವಿಚಾರಕರಾಗಿರುತ್ತಾರೆ.

೩. ಶೈಕ್ಷಣಿಕ ಸಮಿತಿ - ಮಾನ್ಯ ನಿರ್ದೇಶಕರು ಮುಖ್ಯಸ್ಥರಾಗಿರುತ್ತಾರೆ.

೪. ಮೂಲನಿವಾಸಿ ನಿರ್ವಹಣಾ ಸಮಿತಿ - ಜಿಲ್ಲಾ ಕಮೀಷನರ್ ಮುಖ್ಯಸ್ಥರು. ಈ ಸಮಿತಿಯು ಉಳಿದ ಎಲ್ಲಾ ಸಮಿತಿಗಳ ಮೇಲ್ವಿಚಾರಣೆ ನಡೆಸುತ್ತಾರೆ

೫. ಯೋಜನಾ ಸಮಿತಿ - ಈ ಸಮಿತಿಯಲ್ಲಿ ಕೊರಗ ಸಮುದಾಯದ ಮೂರು ಸದಸ್ಯರು ಇರುತ್ತಾರೆ. ಎರಡು ಸರ್ಕಾರೇತರ ಸಂಘಟನೆಯ ಪ್ರಮುಖರು ಮತ್ತು ಸಂಬಂಧಿತ ಇಲಾಖೆಗಳು.

ಈ ಐದು ಸಮಿತಿಗಳ ಮೂಲಕ ಕೊರಗರ ಆರೋಗ್ಯ ಸಮಸ್ಯೆಗಳನ್ನು ನಿವಾರಿಸಲು ಸೂಕ್ತಕ್ರಮವನ್ನು ಕೈಗೊಳ್ಳಲಾಗಿದೆ. ಆರೋಗ್ಯದ ಕುರಿತಾದ ಜಾಗೃತಿ ಕಾರ್ಯಕ್ರಮಗಳು ಕೊರಗರಲ್ಲಿ ಆಶಾದಾಯಕ ಬೆಳವಣಿಗೆಗೆ ಕಾರಣವಾಗಿದೆ.

ಆಹಾರದ ಕೊರತೆ, ಆರೋಗ್ಯದ ಸನ್ನಿವೇಶ, ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಹಿಂದುಳಿದಿರುವಿಕೆಯು ಕೊರಗರಲ್ಲಿ ಜನಸಂಖ್ಯೆ ಇಳಿಮುಖವಾಗಲು ಪ್ರಮುಖ ಕಾರಣವಾಗಿದೆ. ಆದರೆ ಕೊರಗರ ಹೋರಾಟ, ಸರ್ಕಾರದ ಸಹಕಾರದಿಂದಾಗಿ ಐ.ಟಿ.ಡಿ.ಪಿ. ಮೂಲಕ ಜೂನ್‌ನಿಂದ ನವೆಂಬರ್‌ವರೆಗೆ ಆರು ತಂಗಳು ವಿಟಮಿನ್‌ಯುಕ್ತ ಆಹಾರ ನೀಡಲಾಗುತ್ತಿದೆ.

ಕರ್ನಾಟಕ ಮೂಲ ಆದಿವಾಸಿಗಳ ಒಕ್ಕೂಟ(ಕೊರಗರು ಮತ್ತು ಜೇನು ಕುರುಬರು)ದ ಪ್ರಯತ್ನದ ಫಲವಾಗಿ ಇಂತಹ ಆಹಾರ ವಿತರಣೆ ಕಾರ್ಯಕ್ರಮವು ಜೇನುಕುರುಬ, ಸೋಲಿಗರು, ಯರವರು, ಬೆಟ್ಟ ಕುರುಬರು, ಮಲೆಕುಡಿಯ ಮತ್ತು ಸಿದ್ಧಿ ಸಮುದಾಯಗಳಿಗೆ ವಿಸ್ತರಿಸಿತು.

ಕೊರಗಾಭಿವೃದ್ಧಿ ಸಂಘಗಳ ಒಕ್ಕೂಟದ ನಿರಂತರ ಪ್ರಯತ್ನ ಫಲವಾಗಿ ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ ಬೆಳ್ತಿಗೆ ಅಕ್ಕಿಯ ಬದಲಾಗಿ ಕುಚ್ಚಿಲು ಅಕ್ಕಿಯನ್ನು ಎಲ್ಲಾ ಕೊರಗ ಪಡಿತರ ಹೊಂದಿರುವವರಿಗೆ ನೀಡಲಾಗಿದೆ. ಕೊರಗ ಒಕ್ಕೂಟದ ಪ್ರಯತ್ನದ ಫಲವಾಗಿ ಕೊಚ್ಚಿಗೆ ಅಕ್ಕಿಯು ಕೊರಗೇತರ ಪಡಿತರ ಹೊಂದಿರುವವರಿಗೂ ದೊರೆಯುವಂತಾಯಿತು.

ಕೊರಗಾಭಿವೃದ್ಧಿ ಸಂಘ ಮತ್ತು ಆಹಾರ ಹಕ್ಕು ಹೋರಾಟ ಸಮಿತಿಯ ಜಂಟಿ ಪ್ರಯತ್ನದಿಂದಾಗಿ ಎಲ್ಲಾ ಕೊರಗರು ಮತ್ತು ಜೇನುಕುರುಬ ಕುಟುಂಬಗಳಿಗೆ ಅಂತ್ಯೋದಯ ಅನ್ನ ಯೋಜನೆ ಪಡಿತರ ಚೀಟಿ ದೊರೆಯುವಂತಾಯಿತು. ಅದರ ಪ್ರಮುಖ ಫಲಶ್ರುತಿಗಳೆಂದರೆ:

೧. ಮೂಲನಿವಾಸಿ ಆದಿವಾಸಿ ಸಮುದಾಯಗಳಿಗೆ ವಿಶೇಷವಾದ ನಿಧಿ

೨. ಕುಟುಂಬಗಳಿಗೆ ವಸತಿ ಸೌಲಭ್ಯ

೩. ಉನ್ನತ ವ್ಯಾಸಂಗಕ್ಕಾಗಿ ಐ.ಟಿ.ಡಿ.ಪಿ. ಮೂಲಕ ಹಣಕಾಸಿನ ನೆರವು

೪. ಖಾಸಗಿ ಆಸ್ಪತ್ರೆಗಳಿಗೆ ಕೊರಗರಿಗೆ ಚಿಕಿತ್ಸೆ ನೀಡಲು ಧನಸಹಾಯ

ಆರೋಗ್ಯ ಉತ್ತಮವಾಗಿರಬೇಕಾದರೆ ಪೌಷ್ಟಿಕಾಂಶ ಆಹಾರ ಅಗತ್ಯ. ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಸಮಿತಿಗಳನ್ನು ರಚಿಸಿ, ಸಮಿತಿಯ ಸದಸ್ಯರುಗಳಿಗೆ ಆಹಾರ ಹಕ್ಕು ಕಾರ್ಯಕ್ರಮಗಳ ಬಗ್ಗೆ ತರಬೇತಿಯನ್ನು ನೀಡಲಾಯಿತು. ಮುಖ್ಯವಾಗಿ ಪ್ರತಿ ಕೊರಗರಿಗೆ ಪಡಿತರ ಚೀಟಿ ದೊರೆಯುವಂತೆ ಮಾಡಲಾಯಿತು. ಇದಕ್ಕೆ ಕೊರಗ ತಾಲ್ಲೂಕು ಸಮಿತಿ, ಕೊರಗ ಜಿಲ್ಲಾ ಸಮಿತಿ, ಕೊರಗಾಭಿವೃದ್ಧಿ ಸಂಘ ಸಹಕಾರಿಯಾಯಿತು. ನಿರಂತರ ಪ್ರಯತ್ನದ ಫಲವಾಗಿ ಸುಪ್ರೀಂಕೋರ್ಟಿನ ನಿರ್ದೇಶನದಂತೆ ಪ್ರತಿ ಕೊರಗ ಕುಟುಂಬಗಳಿಗೆ ಅಂತ್ಯೋದಯ ಅನ್ನ ಯೋಜನೆ ಪಡಿತರ ಚೀಟಿಯನ್ನು ಒದಗಿಸಲಾಗಿದೆ. ಈ ಪಡಿತರ ಚೀಟಿಯಿಂದಾಗಿ ಕೊರಗರು ಪೌಷ್ಟಿಕಾಂಶ ಆಹಾರ ದೊರೆಯಲು ನೆರವಾಯಿತು. ಇದರಿಂದಾಗಿ ಮಹಿಳೆಯರ ಮಕ್ಕಳ ಆರೋಗ್ಯವೃದ್ಧಿಗೆ ಸಹಕಾರಿಯಾಯಿತು.

ಕೊರಗರ ಸಂಘ, ಸಮಗ್ರ ಗ್ರಾಮೀಣ ಆಶ್ರಮ, ಸರ್ಕಾರದ ಸಹಾಯದಿಂದ ಹಲವು ಯೋಜನೆಗಳು ಕೊರಗರಿಗೆ ದೊರೆತವು. ಮುಖ್ಯವಾಗಿ ವೃದ್ಧಾಪ್ಯ ವೇತನ, ವಿಧವಾ ವೇತನ, ವಿಕಲಚೇತನ ವೇತನ, ಹೆರಿಗೆ ಭತ್ಯೆ, ಜನಶ್ರೀ ವಿಮಾ ಯೋಜನೆ, ಸಂಧ್ಯಾ

ಸುರಕ್ಷಾ, ಕಿಶೋರಿಶಕ್ತಿ ಯೋಜನೆ ೨೪೫, ಭಾಗ್ಯಲಕ್ಷ್ಮಿ ಯೋಜನೆಯ ಸದಾವಕಾಶಗಳನ್ನು ಕೊರಗರು ಪಡೆದುಕೊಂಡಿದ್ದಾರೆ.

ಉಚಿತ ಪೌಷ್ಠಿಕಾಂಶ ಆಹಾರಕ್ಕಾಗಿ ಅಭಿಯಾನ ಹಮ್ಮಿಕೊಳ್ಳಲಾಗಿದೆ. ಮುಖ್ಯವಾಗಿ ಜಿಲ್ಲಾ ಸಮಿತಿ, ಉಪ ಕಮೀಷನರ್, ಜಿಲ್ಲಾ ಪಂಚಾಯತ್ ಇ.ಒ., ಜಿಲ್ಲಾ ಪಂಚಾಯತ್‌ನ ಅಧ್ಯಕ್ಷರು ಮತ್ತು ಸದಸ್ಯರು, ಜಿಲ್ಲೆಯ ಎಲ್ಲಾ ಶಾಸಕರು, ಲೋಕಸಭೆ ಸದಸ್ಯರು, ಜಿಲ್ಲೆಯ ಉಸ್ತುವಾರಿ ಸಚಿವರನ್ನು ಭೇಟಿಯಾಗಿ ಈ ವಿಷಯವಾಗಿ ಒತ್ತಡವನ್ನು ಹೇರಲಾಗಿದೆ. ಇದರ ಜೊತೆಗೆ ಅಂಚೆ ಕಾಗದ ಅಭಿಯಾನವನ್ನು ನಡೆಸಲಾಗಿದೆ. ಈ ಮೂಲಕ ಸಾರ್ವಜನಿಕರಿಗೂ ಅವರ ಅಭಿಪ್ರಾಯ ತಿಳಿಸಲು ನೆರವಾಗಿದೆ.

ಕೊರಗಾಭಿವೃದ್ಧಿ ಸಂಘ, ಕೊರಗ ಜಿಲ್ಲಾ ಸಮಿತಿ, ಕೊರಗ ತಾಲ್ಲೂಕು ಸಮಿತಿ, ಸ್ವಸಹಾಯ ಗುಂಪುಗಳು, ಕೊರಗಾಭಿವೃದ್ಧಿ ಸಂಘ, ಕೊರಗ ಮಹಿಳೆಯರ ವಿವಿದೋದ್ದೇಶ ಸಹಕಾರಿ ಸಮಿತಿ, ಕೊರಗರ ಕೃಷಿಕರ ಸಂಘ ಮೊದಲಾದವುಗಳು ಉಚಿತ ಪೌಷ್ಠಿಕಾಂಶ ಆಹಾರ ಅಭಿಯಾನಕ್ಕೆ ಬೆನ್ನೆಲುಬಾಗಿ ನಿಂತಿವೆ. ಉಪಕಮೀಷನರ್, ಇ.ಒ., ಐ.ಟಿ.ಡಿ.ಪಿ. ಅಧಿಕಾರಿಗಳೊಂದಿಗೆ ಈ ವಿಷಯವಾಗಿ ಚರ್ಚೆ ನಡೆಸಲಾಗಿದೆ. ಎಲ್ಲಾ ಸಭೆಗಳಲ್ಲಿ ಈ ವಿಷಯವನ್ನು ಮೂಲ ಹಂತದಿಂದ ಚರ್ಚೆ ಮಾಡಲಾಗಿದೆ.

**ಆರೋಗ್ಯ ಸಂಬಂಧಿ ಸಮಸ್ಯೆಗಳು**

ಕೊರಗರಲ್ಲಿ ಅಪೌಷ್ಠಿಕತೆ ಹೆಚ್ಚಾಗಿದೆ. ಮಹಿಳೆಯರಲ್ಲಿ ಮತ್ತು ಮಕ್ಕಳಲ್ಲಿ ಇದು ಹೆಚ್ಚಾಗಿ ಕಾಣುತ್ತೇವೆ. ಇದಕ್ಕೆ ಅಜಲು ಪದ್ಧತಿ ಕಾರಣ ಎಂದು ಕೆಲವು ವಕ್ತೃಗಳು ತಿಳಿಸಿದರೂ ಸಮೀಕ್ಷೆಯಿಂದ ತಿಳಿದು ಬರುವುದೇನೆಂದರೆ ಅಜಲಿಗೂ ಮತ್ತು ಆಹಾರದ ಸಮಸ್ಯೆಗೂ ಸಂಬಂಧವಿಲ್ಲ. ಕೊರಗರ ಆರೋಗ್ಯದ ಸಮಸ್ಯೆಗೆ ಮುಖ್ಯವಾದ ಕಾರಣವೆಂದರೆ

೧. ಪುರುಷರು ಮಹಿಳೆಯರೆನ್ನದೆ ಅತಿಯಾದ ಮದ್ಯ ಸೇವನೆ.

೨. ಅತಿಯಾದ ತಂಬಾಕು ಉತ್ಪನ್ನಗಳ ಸೇವನೆ.

೩. ಕಾಯಿಲೆಗಳಿಗೆ ಆಸ್ಪತ್ರೆಗಳಲ್ಲಿ ಸರಿಯಾದ ಚಿಕಿತ್ಸೆ ಪಡೆಯದೇ ಇರುವುದು.

೪. ಚಿಕಿತ್ಸೆ ಪಡೆಯಲು ಬಯಸಿದರೂ ಸಹಃ ಅವರ ಬಡತನದಿಂದಾಗಿ ಆಸ್ಪತ್ರೆಯ ಖರ್ಚು–ವೆಚ್ಚಗಳನ್ನು ಭರಿಸಲಾಗದೆ ಚಿಕಿತ್ಸೆಯನ್ನು ಅರ್ಧದಲ್ಲಿಯೇ ನಿಲ್ಲಿಸುವುದು.

೫. ಇಂದಿನ ಕೊರಗ ಯುವಕ-ಯುವತಿಯರಿಗೆ ತಮ್ಮ ಹಿಂದಿನ ತಲೆಮಾರುಗಳ ವೈದ್ಯಪದ್ಧತಿ, ಜ್ಞಾನ ಇಲ್ಲದೆ ಇರುವುದು.

೬. ಕೊರಗರ ಆರೋಗ್ಯಕ್ಕಾಗಿ ಸರ್ಕಾರ ಹಲವಾರು ಪ್ಯಾಕೇಜ್‌ಗಳನ್ನು ನೀಡಿದರೂ ಸಹಃ ಅಧಿಕಾರಿಗಳ ನಿರ್ಲಕ್ಷ್ಯದಿಂದಾಗಿ ಅದು ಕೊರಗರಿಗೆ ತಲುಪದೇ ಇರುವುದು.

೭. ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿ ಕೆಲವು ಅಸ್ಪತ್ರೆಗಳು ಕೊರಗರ ಆರೋಗ್ಯ ಕ್ಯಾಂಪ್‌ಗಳನ್ನು ನಡೆಸಿದೆ. ಆದರೂ ಕೊರಗರ ಸಾವಿನ ಪ್ರಮಾಣ ಕಡಿಮೆಯಾಗಿಲ್ಲ. ಆಸ್ಪತ್ರೆಗಳು ಕೇವಲ ಅಂಕಿ ಅಂಶಗಳಿಗಾಗಿ ಅಥವಾ ಪ್ರಚಾರಕ್ಕಾಗಿ ಇಂತಹ ಕ್ಯಾಂಪ್‌ಗಳನ್ನು ನಡೆಸುತ್ತವೆ ಎಂದು ಕೊರಗರ ಮುಖಂಡರು ಅಭಿಪ್ರಾಯಪಡುತ್ತಾರೆ.

೮. ಕೊರಗರಿಗೆ ಐ.ಟಿ.ಡಿ.ಪಿ.ಯಿಂದ ವರ್ಷದಲ್ಲಿ ೬ ತಿಂಗಳು ಆಹಾರ ಪೂರೈಕೆ ಮಾಡಲಾಗುತ್ತಿದೆ. ಆದರೆ ಆಹಾರ ಪೂರೈಕೆಯಲ್ಲಿ ಗುಣಮಟ್ಟ ಉತ್ತಮ ಇಲ್ಲದೇ ಇರುವುದು ಕಂಡುಬರುತ್ತದೆ. ಪಂಚಾಯತ್‌ಗಳ ದಿವ್ಯ ನಿರ್ಲಕ್ಷ್ಯ ಇದಕ್ಕೆ ಕಾರಣವಾಗಿದೆ. ಉಡುಪಿ ಜಿಲ್ಲೆಯ ಕೊಳಲಗಿರಿ, ಅಮ್ಮುಂಜೆ, ಹಾವಂಜೆ, ಕುಕ್ಕಿಕಟ್ಟೆ ಮೊದಲಾದ ಪರಿಸರದಲ್ಲಿ ವಾಸಿಸುತ್ತಿರುವ ಕೊರಗರಿಗೆ ಐ.ಟಿ.ಡಿ.ಪಿಯಿಂದ ಸರಿಯಾದ ಆಹಾರ ಪೂರೈಕೆಯಾಗುತ್ತಿಲ್ಲ. ಇಲ್ಲಿನ ಎಷ್ಟೋ ಕುಟುಂಬಗಳು ಇಂದಿಗೂ ಅಜಲಿನಿಂದ ದೊರಕುವ ಆಹಾರ ಉತ್ಪನ್ನಗಳನ್ನು ಬಳಸುತ್ತಿದ್ದಾರೆ. ಕ್ಷೇತ್ರಕಾರ್ಯ ಸಂದರ್ಭದಲ್ಲಿ ಅನೇಕ ಕುಟುಂಬಗಳು ಪ್ರತ್ಯಕ್ಷವಾಗಿ ನಾವು ಅಜಲು ಪದ್ಧತಿಯನ್ನು ಮತ್ತು ಅಜಲು ಚಾಕ್ರಿಗಳನ್ನು ನಿಷೇಧಿಸುವುದಕ್ಕೆ ಬೆಂಬಲಿಸುತ್ತೇವೆ. ಆದರೆ ಜೀವನೋಪಾಯಕ್ಕಾಗಿ ನಾವು ಕೆಲವೊಂದು ಅಜಲು ಚಾಕ್ರಿಗಳನ್ನು ಅನಿವಾರ್ಯವಾಗಿ ಮಾಡುತ್ತಿದ್ದೇವೆ ಎಂದು ಹೇಳುತ್ತಾರೆ. ಈ ವಿಚಾರ ಅತ್ಯಂತ ಸೂಕ್ಷ್ಮವಾಗಿದ್ದು, ಕೊರಗರ ಸಂಘಟನೆಗಳಿಗೆ ತಿಳಿದರೆ ನಿಂದನೆಗೆ ಒಳಗಾಗಬೇಕಾಗುತ್ತದೆ ಎಂಬುದನ್ನು ಪುನರುಚ್ಚರಿಸುತ್ತಾರೆ. ಈ ವಿಚಾರವನ್ನು ಗಮನಿಸಿದರೆ ಅಜಲು ಚಾಕ್ರಿಗಳಲ್ಲಿ ಎಲ್ಲವೂ ಅಮಾನವೀಯ ಚಾಕ್ರಿಗಳಿಲ್ಲವೆಂಬುದು ಮನವರಿಕೆಯಾಗುತ್ತದೆ. ಮತ್ತೊಂದು ನೆಲೆಯಲ್ಲಿ ಕೊರಗರ ಆಹಾರದ ಪ್ರಶ್ನೆ ಉದ್ಭವವಾಗುತ್ತದೆ.

ಕೊರಗರ ವಕ್ತಾರರು ನೀಡಿದ ಮಾಹಿತಿಯಂತೆ ಅವರಲ್ಲಿ ಕುಡಿತದ ಸಮಸ್ಯೆ ಇರಲು ಪ್ರಮುಖ ಕಾರಣವೆಂದರೆ,

೧. ಕುಡಿತವನ್ನು ಅವರು ಹವ್ಯಾಸವನ್ನಾಗಿ ಮಾಡಿಕೊಂಡಿರುವುದು.

೨. ಅವರಲ್ಲಿರುವ ದುಃಖ ದುಮ್ಮಾನಗಳಿಂದ ಹೊರಬರಲು ಕುಡಿಯುವುದು.

೩. ತಮ್ಮಲ್ಲಿರುವ ಸಮಸ್ಯೆಗಳನ್ನು ದೂರ ಮಾಡಿಕೊಳ್ಳಲು ಸಹಕಾರಿಯಾಗುತ್ತದೆ ಎಂಬ ಪೂರ್ವಪೀಡಿತ.

೪. ಮಾನಸಿಕ ಸಮಾಧಾನ ದೊರೆಯುತ್ತದೆ ಎಂಬ ನಂಬಿಕೆಯಿಂದ ಕುಡಿಯುವುದು.

೫. ಕೆಲವು ಕೊರಗರಲ್ಲಿ ಕುಡಿತವು ಆರೋಗ್ಯಕ್ಕೆ ಒಳ್ಳೆಯದು ಎಂಬ ಭಾವನೆ ಇರುವುದು.

ಕೊರಗರಲ್ಲಿ ಆರೋಗ್ಯದ ಸಮಸ್ಯೆಯಿದೆ ಅದಕ್ಕೆ ಪ್ರಮುಖವಾದ ಕಾರಣ ಪುರುಷ, ಮಹಿಳೆಯರೆನ್ನದೆ ಅಧಿಕವಾಗಿ ಕುಡಿಯುವುದು. ಮಂಗಳೂರು ಜಿಲ್ಲೆಯಲ್ಲಿ ಪಾಲಿಕೆಗಳಲ್ಲಿ ದುಡಿಯುತ್ತಿರುವ ಕೊರಗ ಪುರುಷರು ಮದ್ಯವ್ಯಸನಿಗಳಾಗಿದ್ದಾರೆ. ಅವರು ಮಾಡುವಂತಹ ಉದ್ಯೋಗವೂ ಸಹ ತುಂಬಾ ಕಠಿಣವಾಗಿದ್ದು ಕೆಲವೊಮ್ಮೆ ಮದ್ಯಸೇವನೆ ಮಾಡಬೇಕಾಗುತ್ತದೆ. ಆದರೆ ಮದ್ಯಸೇವನೆಯೇ ಚಟವಾದಾಗ ಅದು ಕೌಟುಂಬಿಕ ಜಗಳಕ್ಕೆ ಕಾರಣವಾಗುತ್ತದೆ. ನಗರಗಳಲ್ಲಿ ವಾಸವಿರುವ ಅದೆಷ್ಟೋ ಜಾಡಮಾಲಿಗಳು ಕುಡಿತದ ದಾಸರಾಗಿದ್ದಾರೆ. ಅವರು ಆರೋಗ್ಯ ಸಮಸ್ಯೆಗೆ ಒಳಗಾಗಿ ಅವರ ಆಯುಷ್ಯ ಕೂಡ ಕಡಿಮೆಯಾಗಿದೆ. ದುಡಿದ ಹಣವನ್ನೆಲ್ಲಾ ಕುಡಿಯುವುದಕ್ಕೆ ಖರ್ಚು ಮಾಡಲಾಗುತ್ತದೆ. ಇಂತಹಕುಡುಕರನ್ನು ಮದ್ಯಮುಕ್ತರನ್ನಾಗಿಸಲು ಕೊರಗ ಸಂಘಟನೆಗಳು ಹಲವಾರು 'ಮದ್ಯವರ್ಜನ ಶಿಬಿರ'ಗಳನ್ನು ನಡೆಸಿದ್ದಾರೆ. ಅಂತಹ ವ್ಯಕ್ತಿಗಳನ್ನು ಆಸ್ಪತ್ರೆಗಳಿಗೆ ಚಿಕಿತ್ಸೆಗೆ ಸೇರಿಸಿದ್ದಾರೆ. ಆದರೆ ಶಿಬಿರಗಳಲ್ಲಿ ಸರಿಯಾಗುವ ಇಂತಹ ಕುಡಿತದ ದಾಸರಾಗಿರುವ ಕೊರಗರು ಪುನಃ ಕುಡಿಯಲು ಆರಂಭಿಸುತ್ತಾರೆ.

ಕೊರಗರಲ್ಲಿರುವ ಇನ್ನೊಂದು ಪ್ರಮುಖ ಚಟವೆಂದರೆ ತಂಬಾಕು ಸೇವನೆ ದಿನವಿಡೀ ತಂಬಾಕು ಸೇವನೆ ನಡೆಸುವುದರಿಂದ ಬಾಯಿಯ ಹುಣ್ಣು, ಚರ್ಮದ ಕಾಯಿಲೆಗಳು, ಕೊರಗರಲ್ಲಿ ಆವರಿಸಿದೆ. ಕುಡಿತದ ಚಟವು ಪುರುಷ ಮಹಿಳೆಯರಿಗೆ ಮಾತ್ರವಲ್ಲದೇ ಮಕ್ಕಳ ಮೇಲೆ ದುಷ್ಪರಿಣಾಮ ಬೀರಿದೆ. ಕೊರಗ ಮಕ್ಕಳ ಶಿಕ್ಷಣ ಕುಂಠಿತಗೊಳ್ಳಲು

ಮಕ್ಕಳು ಶಾಲೆಯನ್ನು ಅರ್ಧದಲ್ಲಿಯೇ ಬಿಡಲು ಕೊರಗರಲ್ಲಿ ಇರುವ ಕುಡಿತದ ಸಮಸ್ಯೆಯೇ ನೇರ ಕಾರಣವಾಗಿದೆ.

ಕೊರಗ ಸಮುದಾಯವು ಆದಿವಾಸಿ ಸಮುದಾಯವಾಗಿದ್ದು, ಮಾತೃಮೂಲ ಕುಟುಂಬ ವ್ಯವಸ್ಥೆಯನ್ನು ಹೊಂದಿದೆ. ಇವರಲ್ಲಿ ಹೆಣ್ಣು ಮಕ್ಕಳಿಗೆ ಪ್ರಾಶಸ್ತ್ಯವಿದೆ. ಹೆಣ್ಣು ಭ್ರೂಣಹತ್ಯೆ ಇವರಲ್ಲಿ ಕಂಡು ಬರುವುದಿಲ್ಲ. ಆದರೆ ಕೊರಗರಿಗೆ ಅರಿವಿಲ್ಲದಂತೆ ಪಿತೃತ್ವ ಮತ್ತು ವೈದಿಕ ಪ್ರಭಾವಗಳಿಗೆ ಒಳಗಾಗಿದೆ. ಇದರಿಂದ ಪುರುಷರ ವಿಪರೀತ ಕುಡಿತ ಹಾಗೂ ದುಶ್ಚಟಗಳು ಕೊರಗ ಹೆಣ್ಣುಮಕ್ಕಳು ಮತ್ತು ಮಹಿಳೆಯರ ಮೇಲೆ ದೌರ್ಜನ್ಯ ಹೆಚ್ಚಾಗಲು ಕಾರಣವಾಗಿದೆ. ಕುಡಿತ ಮತ್ತು ದುಶ್ಚಟವು ಯುವಜನರನ್ನು ನಾಶಗೊಳಿಸುವುದು ಮಾತ್ರವಲ್ಲದೇ ಕೊರಗರ ಅಬಿವೃದ್ಧಿಗೆ ದೊಡ್ಡ ಪೆಟ್ಟನ್ನು ನೀಡಿದೆ. ಕುಡಿತದ ಅಮಲಿನಿಂದಾಗಿಯೇ ಕೊರಗ ಮಕ್ಕಳ ಲಾಲನೆ, ಪಾಲನೆ ಮಹಿಳೆಯರ ಮತ್ತು ಮಕ್ಕಳ ಭದ್ರತೆ ಕಳವಳಕಾರಿಯಾಗಿದೆ, ಕೊರಗ ಮಕ್ಕಳಿಗೆ ಸೂಕ್ತವಾದ ಶಿಕ್ಷಣವನ್ನು ನೀಡಲಾಗದ ಪರಿಸ್ಥಿತಿ ನಿರ್ಮಾಣವಾಗಿದೆ.

ಇಂತಹ ಸಮಸ್ಯೆಯನ್ನು ಸಂಘಟಿತವಾಗಿ ಹೋಗಲಾಡಿಸಲು ಸಾಧ್ಯವಿದೆ. ಸಮಗ್ರ ಗ್ರಾಮೀಣ ಆಶ್ರಮ, ಪೆರ್ನಾಲು, ಉಡುಪಿ ಜಿಲ್ಲೆ ಹಾಗೂ ಕೊರಗ ಸಂಘಟನೆಗಳು ಕೊರಗರ ಜನಜಾಗೃತಿಗೆ ಪ್ರಯತ್ನಗಳನ್ನು ನಡೆಸಿದೆ. ವಿಶ್ವಮಾನವ ಹಕ್ಕುಗಳ ಪಕ್ಷಾಚರಣೆ, ೨೦೧೧, ಹೆಣ್ಣುಮಕ್ಕಳು ಮತ್ತು ಮಹಿಳೆಯರ ರಕ್ಷಣೆಗಾಗಿ ಕುಡಿತ ಮತ್ತು ದುಶ್ಚಟದ ವಿರುದ್ದ ಅಭಿಯಾನವನ್ನು ಕೈಗೊಳ್ಳಲಾಯಿತು. ನವೆಂಬರ್ ೨೫ರಿಂದ ಡಿಸೆಂಬರ್ ೧೦, ೨೦೧೧ರ ತನಕ ಕುಂದಾಪುರದಿಂದ ಕಾಸರಗೋಡಿನವರೆಗೆ ಕುಡಿತ ಮತ್ತು ದುಶ್ಚಟದ ವಿರುದ್ಧ ಬೀದಿನಾಟಕಗಳ ಅಭಿಯಾನವನ್ನು ಎಲ್ಲಾ ಕೊರಗರ ಕೊಪ್ಪಗಳಲ್ಲಿ ತೋರಿಸಲಾಗಿದೆ. ಕುಡಿತ ಮತ್ತು ದುಶ್ಚಟದಿಂದ ಆಗುವ ಗಂಭೀರ ಪರಿಣಾಮಗಳ ಬಗ್ಗೆ ಜನರಿಗೆ ತಿಳಿಹೇಳುತ್ತಾ ಇದರಿಂದ ಹೊರಬರುವ ಪ್ರಯತ್ನವನ್ನು ಜನರ ಮೂಲಕವೇ ಕಂಡುಕೊಳ್ಳುವ ಪ್ರಯತ್ನವನ್ನು ಮಾಡಲಾಗಿದೆ.

ಇದನ್ನು ಕೊರಗರು ಅರ್ಥ ಮಾಡಿಕೊಂಡು ಕುಡಿತದ ದುಶ್ಚಟಗಳಿಂದ ಮುಕ್ತರಾಗಿ ಗೌರವದಿಂದ ಬದುಕಲು ಸಹಾಯ ಮಾಡಲಾಗಿದೆ. ಈ ಮೂಲಕ ಕೊರಗ ಮಕ್ಕಳು ತಮ್ಮ ಬಾಲ್ಯವನ್ನು ಅನುಭವಿಸಲು, ಹೆಣ್ಣು ಮಕ್ಕಳು ಮತ್ತು ಮಹಿಳೆಯರು ಘನತೆಯಿಂದ ಬಾಳಲು ಸಾಧ್ಯವಾಗಿದೆ. ಇದರಿಂದಾಗಿ ಕೊರಗ ಸಂಘಟನೆಗಳು ಲಿಂಗ ಆಯ್ಕೆ ನಿಷೇಧ ಕಾಯ್ದೆ ೧೯೯೪ಳನ್ನು ಇನ್ನಷ್ಟು ಗಟ್ಟಿಗೊಳಿಸಲು ಕೇಂದ್ರ ಸರಕಾರಕ್ಕೆ ಉಡುಪಿ, ದಕ್ಷಿಣ

ಕನ್ನಡದವರ ಎಲ್ಲಾ ತಹಶೀಲ್ದಾರರ ಮೂಲಕ ಮನವಿ ಕೊಡುವ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿದೆ.

ಕೊರಗರ ಸಾಮಾಜಿಕ ಪರಿವರ್ತನೆಗಾಗಿ ಇಂತಹ ಕೊರಗ ಸಂಘಟನೆಗಳ ಅಭಿಯಾನ ಒಂದು ದಿಟ್ಟ ಹೆಜ್ಜೆಯಾಗಿದೆ. ಆದರೆ ಇಂತಹ ಅಭಿಯಾನ ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳ ಕೊರಗರ ಮೇಲೆ ಅಷ್ಟೊಂದು ದೊಡ್ಡ ಮಟ್ಟದ ಪರಿಣಾಮ ಬೀರಲಿಲ್ಲ. ಕುಡಿತವನ್ನು ಸ್ವಲ್ಪ ಸಮಯದವರೆಗೆ ಬಿಟ್ಟವರು ಪುನಃ ಆರಂಭಿಸಿದ್ದಾರೆ. ದುಶ್ಚಟಗಳು ಮುಂದುವರೆದಿದೆ. ಹಾಗೆಯೇ ಅಭಿಯಾನವು ಕೆಲವೇ ಕೊರಗರ ಕೊಪ್ಪಗಳಿಗೆ ಮೀಸಲಾಗಿದೆ. ಎಲ್ಲಾ ಕೊರಗರಿಗೆ ಈ ಸಂದೇಶ ಸರಿಯಾಗಿ ತಲುಪಿಲ್ಲ. ತಲುಪಿದ್ದರೆ ಕೊರಗರಲ್ಲಿ ಕುಡಿತದ ಸಮಸ್ಯೆಯೇ ಇಂದು ಕಾಣಸಿಗಬಾರದಿತ್ತು. ಆದರೆ ಪುರುಷರಲ್ಲಿ ಕುಡಿತದ ಚಟ ಇಂದಿಗೂ ಕಾಣುತ್ತಿದ್ದೇವೆ.

ಕೊರಗರ ಕುಡಿತ ಮತ್ತು ದುಶ್ಚಟಗಳು ಅವರ ಆರೋಗ್ಯದ ಮೇಲೆ ನೇರ ಪರಿಣಾಮವನ್ನು ಬೀರಿದೆ. ಕೊರಗಾಭಿವೃದ್ಧಿ ಸಂಘಗಳು, ಸ್ವಯಂ ಸೇವಾ ಸಂಸ್ಥೆಗಳು, ಸರ್ಕಾರ ಕೊರಗ ಕೊಪ್ಪಗಳಿಗೆ ಭೇಟಿ ನೀಡಿ ಕುಡಿತದಿಂದಾಗುವ ದುಷ್ಪರಿಣಾಮದ ಬಗ್ಗೆ ಮನವರಿಕೆ ಮಾಡಬೇಕು. ಮಹಿಳೆಯರಿಗೆ ಇದರ ಬಗ್ಗೆ ಸರಿಯಾದ ಮಾಹಿತಿಯನ್ನು ನೀಡಬೇಕು. ಮಕ್ಕಳನ್ನು ಶಾಲೆಗಳಿಗೆ ಕಡ್ಡಾಯವಾಗಿ ಕಳುಹಿಸಿದರೆ ಖಂಡಿತವಾಗಿಯೂ ಶೀಘ್ರವಾಗಿ ಅಲ್ಲದಿದ್ದರೂ ನಿಧಾನವಾಗಿ ಕೊರಗರ ಆರೋಗ್ಯದಲ್ಲಿ ಪರಿಣಾಮಕಾರಿಯಾಗಿ ಬದಲಾವಣೆಯನ್ನು ತರಬಹುದಾಗಿದೆ.

### ೫.೬. ಸಾಮಾಜಿಕ ಸ್ಥಾನಮಾನಗಳು

ಕೊರಗರು ಕರ್ನಾಟಕದ ಮೂಲನಿವಾಸಿಗಳಾಗಿದ್ದಾರೆ. ಇವರು ದಮನಿತ ಬುಡಕಟ್ಟು ಸಮೂಹದವರಾಗಿದ್ದಾರೆ. ಇತರ ಸಮುದಾಯದವರು ಇವರನ್ನು ಅಸ್ಪೃಶ್ಯರನ್ನಾಗಿ ನೋಡುತ್ತಿದ್ದಾರೆ. ಹಲವಾರು ಸರ್ಕಾರದ ಯೋಜನೆಗಳು ಇವರಿಗೆ ತಲುಪುತ್ತಿಲ್ಲ. ಕೊರಗರು ಕರ್ನಾಟಕದ ನಾಲ್ಕು ಜಿಲ್ಲೆಗಳಲ್ಲಿ ಕಂಡುಬರುತ್ತಾರೆ. ಉಡುಪಿ, ದಕ್ಷಿಣ ಕನ್ನಡ, ಹಾಗೆಯೇ ಶಿವಮೊಗ್ಗ ಮತ್ತು ಉತ್ತರ ಕನ್ನಡ, ಕೇರಳದ ಕಾಸರಗೋಡಿನಲ್ಲಿಯೂ ಕಂಡುಬರುತ್ತಾರೆ.

ಕೊರಗಾಭಿವೃದ್ಧಿ ಸಂಘಗಳು, ಸ್ವಯಂಸೇವಾ ಸಂಸ್ಥೆಗಳು, I.T.D.P., ಕೊರಗರು ಸ್ವಾವಲಂಬಿ, ಸ್ವಗೌರವ, ಸಮಾನತೆಯಿಂದ ಜೀವನ ನಡೆಸಲು ತಮ್ಮ ಪ್ರಯತ್ನವನ್ನು

ನಡೆಸುತ್ತಿವೆ. ಸ್ವಜಾಗೃತಿ, ಸ್ವಪ್ರೇರಣೆ, ಸ್ವಸಂಘಟನೆ, ಪರಸ್ಪರ ಸಹಕಾರದ ಮೂಲಕ ಹಕ್ಕುಗಳ ಆಧಾರಿತ ಅಭಿವೃದ್ಧಿ ಯೋಜನೆಗಳನ್ನು ರೂಪಿಸುವ ಪ್ರಯತ್ನಗಳು ನಿಧಾನವಾಗಿ ಸಾಗಿದೆ.

೧. ಕೊರಗರ ಮೂಲ ಜೀವನ ವಿಧಾನದ ಸ್ಥಾಪನೆ ಮತ್ತು ನಿಯಂತ್ರಣ.

೨. ಶಿಕ್ಷಣ, ಆರೋಗ್ಯ, ಸ್ವಉದ್ಯೋಗಕ್ಕಾಗಿ ಕೊರಗರನ್ನು ಸಂಘಟಿಸುವುದು.

೩. ಕೊರಗರಿಗೆ ತೋರಿಸುವ ಎಲ್ಲಾ ಬಗೆಯ ಅಗೌರವ ಮತ್ತು ಸಾಮಾಜಿಕ, ಸಾಂಸ್ಕೃತಿಕ ದಬ್ಬಾಳಿಕೆಯನ್ನು ಹೋಗಲಾಡಿಸುವುದು.

೪. ಕೊರಗರಲ್ಲಿ ಲಿಂಗ ಸಮಾನತೆಯನ್ನು ತರುವುದು. ಮುಖ್ಯವಾಗಿ ಮಹಿಳೆಯರು, ಮಕ್ಕಳು, ಯುವಜನತೆ, ಚಿಕ್ಕಮಕ್ಕಳು, ಹುಡುಗರು, ಹುಡುಗಿಯರು, ವೃದ್ಧರು, ವಿಕಲಚೇತನರು ಎಲ್ಲರನ್ನೂ ಸಮಾನವಾಗಿ ಕಾಣುವುದು.

೫. ಕೊರಗರ ಹಕ್ಕುಗಳನ್ನು ರಕ್ಷಿಸಲು ಪ್ರಜಾಸತ್ತಾತ್ಮಕ ವ್ಯವಸ್ಥೆಯಲ್ಲಿ ಕಾಯಿದೆಗಳನ್ನು ತರಲು ಪ್ರಭಾವ ಬೀರುವುದು.

೬. ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ಮೂಲನಿವಾಸಿಗಳ ಹಕ್ಕುಗಳನ್ನು ರಕ್ಷಿಸಲು ಪ್ರಯತ್ನ ಮಾಡುವುದು.

೭. ಸಾಮಾಜಿಕ, ಸಾಂಸ್ಕೃತಿಕ ಆಧಾರದಲ್ಲಿ ಬುಡಕಟ್ಟು ಪ್ರಗತಿ ಮತ್ತು ಗುರುತಿಸುವಿಕೆ.

ಕೊರಗ ಸಮುದಾಯದಲ್ಲಿ ನಾಯಕತ್ವದ ಕೊರತೆ ಇದೆ. ಅವರಲ್ಲಿ ರಾಜಕೀಯ ಪ್ರಜ್ಞೆಯ ಅಭಾವವಿದೆ, ಕೊರಗರನ್ನು ಎಸ್.ಟಿ. ಪ್ರವರ್ಗಕ್ಕೆ ಸೇರಿಸುವುದರಿಂದ ಆ ಪರ್ವದಲ್ಲಿ ಬರುವ ಇತರೆ ಹೆಚ್ಚಿನ ಜನಸಂಖ್ಯೆಯಿರುವ ಬಲಾಢ್ಯ ಬುಡಕಟ್ಟು ಸಮುದಾಯಗಳು ಮೀಸಲಾತಿಯ ಎಲ್ಲಾ ಸವಲತ್ತುಗಳನ್ನು ಪಡೆಯುತ್ತಾರೆ. ಇದರಿಂದ ವಿದ್ಯಾವಂತ ಕೊರಗ ಯುವಕ ಯುವತಿಯರು ನಿರಾಶರಾಗಿದ್ದಾರೆ. ಪ್ರಾಯಶಃ ಒಳಮೀಸಲಾತಿ ವಿಧಾನ ಕೊರಗ ಸಮುದಾಯಕ್ಕೆ ನ್ಯಾಯ ದೊರಕಿಸಿ ಕೊಡಬಹುದು.

**ಕೊರಗರಿಗೆ ತರಬೇತಿ ಕಾರ್ಯಕ್ರಮ**

ಕೊರಗರು ಮೂಲನಿವಾಸಿಗಳಾಗಿದ್ದು ಶೈಕ್ಷಣಿಕ ಕ್ಷೇತ್ರದಲ್ಲಿ ಸಮಸ್ಯೆಗಳನ್ನು ಎದುರಿಸುತ್ತಿದೆ. ಇದಕ್ಕೆ ಪ್ರಮುಖವಾದ ಕಾರಣ ಕೊರಗರನ್ನು ಅಸ್ಪೃಶ್ಯರನ್ನಾಗಿ ಸಮಾಜವು ನೋಡುವುದು

ಹಾಗೂ ಅಜಲು ಪದ್ಧತಿಯಂತಹ ಸಾಮಾಜಿಕ ಮಾನಸಿಕ ಲಕ್ಷಣಗಳು ಕೊರಗರಲ್ಲಿ ಶಿಕ್ಷಣ ಕುಂಠಿತಗೊಳ್ಳಲು ಕಾರಣವಾಗಿದೆ. ಕಳೆದ ಕೆಲವು ವರ್ಷಗಳಿಂದ ಅವರನ್ನು ಅಸ್ಪೃಶ್ಯರನ್ನಾಗಿ ನೋಡುತ್ತಿರುವುದೂ ಸಹ ಶೈಕ್ಷಣಿಕ ಹಿನ್ನಡೆಗೆ ಕಾರಣವಾಗಿದೆ.

ಆದರೆ ಇಂದು ಪರಿಸ್ಥಿತಿ ಬದಲಾಗಿದೆ. ಕೊರಗರಲ್ಲಿ ಶಿಕ್ಷಣದ ಬಗೆಗಿನ ಅರಿವು ಹೆಚ್ಚಾಗಿದೆ. ಶಾಲಾ ದಾಖಲಾತಿಯೂ ಹೆಚ್ಚಾಗಿದೆ. ಕೊರಗರಲ್ಲಿ ಶೇ. ೮೫ಕ್ಕಿಂತ ಹೆಚ್ಚಿನ ಪುರುಷರು ಕುಡಿತದ ದಾಸರಾಗಿದ್ದಾರೆ. ಮಕ್ಕಳು ಶಾಲೆಯನ್ನು ಅರ್ಧದಲ್ಲಿ ಬಿಡಲು ಇದೂ ಕೂಡ ಕಾರಣವಾಗಿದೆ. ಇದು ಸಮುದಾಯದ ಋಣಾತ್ಮಕ ಚಿಂತನೆಗೆ ಕಾರಣವಾಗಿದೆ. ಆದ್ದರಿಂದ ಕೊರಗ ಮಕ್ಕಳು ಮತ್ತು ಪೋಷಕರಲ್ಲಿ ಅನ್ಯೋನ್ಯತೆ ಬೆಳೆಸುವುದು ಅತ್ಯಗತ್ಯವಾಗಿದೆ. ಅಜಲು ಪದ್ಧತಿ ನಿಷೇಧ, ಅಸ್ಪೃಶ್ಯತೆ, ಮದ್ಯವ್ಯಸನ, ಮಾಹಿತಿ ಕೊರತೆ ಮೊದಲಾದವುಗಳ ಕುರಿತಾದ ಸಂಕಿರಣ ನಡೆಸಿ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಲಾಗುತ್ತಿದೆ.

ಪೋಷಕರು ಮತ್ತು ಮಕ್ಕಳಿಗೆ ಕೌನ್ಸೆಲಿಂಗ್ ಅನ್ನು ನೀಡುವುದು, ಕೊರಗರು ಮನೆ ಗಳಲ್ಲಿ ಕೊರಗ ಭಾಷೆಯನ್ನು ಮಾತನ್ನಾಡುತ್ತಾರೆ. ಶಾಲೆಗಳಲ್ಲಿ ಶಿಕ್ಷಕರಿಗೆ ಕೊರಗ ಭಾಷೆ ತಿಳಿಯದಿರುವುದು, ಮಕ್ಕಳಿಗೆ ಕನ್ನಡ ಭಾಷೆಯ ಸಮಸ್ಯೆ ಶಿಕ್ಷಣವು ಕುಂಠಿತಗೊಳ್ಳಲು ಕಾರಣವಾಗಿದೆ.

ಕೊರಗ ಸಮುದಾಯದಲ್ಲಿ ಹೆಣ್ಣುಮಕ್ಕಳ ಶಿಕ್ಷಣದ ಸಮಸ್ಯೆ ಒಂದು ಸಾಂಸ್ಕೃತಿಕ ಸಮಸ್ಯೆಯಾಗಿದೆ. ಹೆಣ್ಣುಮಕ್ಕಳ ಶೈಕ್ಷಣಿಕ ಸಮಸ್ಯೆಗೆ ಪ್ರಮುಖ ಕಾರಣಗಳೆಂದರೆ ಮನೆಯನ್ನು ಸ್ವಚ್ಛಗೊಳಿಸುವ ಕೆಲಸ, ಮಕ್ಕಳ ಲಾಲನೆ ಪಾಲನೆ, ಬಾಲ್ಯವಿವಾಹ, ಖಾಸಗಿತನದ ಕೊರತೆ, ಶಾಲೆಗಳಲ್ಲಿ ಶೌಚಾಲಯ ಮತ್ತು ಸ್ನಾನಗೃಹದ ಸಮಸ್ಯೆಗಳು, ಮನೆಯ ಸಮಸ್ಯೆ, ಉಡುಪಿನ ಸಮಸ್ಯೆ ಇತ್ಯಾದಿಗಳು.

ಆದ್ದರಿಂದ ಶಿಕ್ಷಣದ ಕುರಿತಾಗಿ ಜಾಗೃತಿ ಕಾರ್ಯಕ್ರಮವನ್ನು ಹಮ್ಮಿಕೊಳ್ಳಬೇಕಾಗಿದೆ. ವಿವಾಹದ ವಯಸ್ಸು, ಮಕ್ಕಳ ಶಿಕ್ಷಣಕ್ಕೆ ಪ್ರೇರಣೆ ನೀಡಿದಾಗ ಕೊರಗರಲ್ಲಿ ಬದಲಾವಣೆ ಸಾಧ್ಯವಿದೆ.

ಮಂಗಳೂರಿನ ಬಾಳಿಗಾ ಆಸ್ಪತ್ರೆಯ ಮೂಲಕ ಕೊರಗ ಮಕ್ಕಳ ನಡವಳಿಕೆ, ಬದಲಾವಣೆ, ಆರೋಗ್ಯ ತಪಾಸಣೆಯನ್ನು ಮಾಡಲಾಗುತ್ತಿದೆ. ೨೦೦೦ ವರ್ಷಕ್ಕಿಂತ ಪೂರ್ವದಲ್ಲಿ ಕೊರಗರ ಜೀವನವು ಸಮಸ್ಯೆಗಳ ಆಗರವಾಗಿತ್ತು. ಪತಿ–ಪತ್ನಿಯರು ಕೂಲಿ

ಕೆಲಸ ನಿರ್ವಹಿಸಿ ಜೀವನ ನಡೆಸುತ್ತಿದ್ದರು. ಸರಿಯಾದ ಮನೆ ಇರಲಿಲ್ಲ. ದಿನಕ್ಕೆ ಒಂದು ಊಟ ಮಾತ್ರ ಮಾಡುತ್ತಿದ್ದರು. ಅಜಲಿನ ಮೂಲಕ ಮೇಲ್ವರ್ಗದವರು ನೀಡುವ ಆಹಾರದಿಂದ ದಿನ ದೂಡುವುದು ಸಾಮಾನ್ಯವಾಗಿತ್ತು. ಅಸ್ಪೃಶ್ಯತೆಯಿಂದಾಗಿ ಕೆಲಸವೂ ಸರಿಯಾಗಿ ದೊರೆಯುತ್ತಿರಲಿಲ್ಲ. ಕೆಲವು ಮಹಿಳೆಯರು ಇದರಿಂದಾಗಿ ಅನಿಮಿಯಾದಿಂದ ಬಳಲುತ್ತಿದ್ದರು. ಇದರಿಂದ ಕೂಲಿ ಕೆಲಸ ಹೋಗಲೂ ಕಷ್ಟವಾಗುತ್ತಿತ್ತು. ಪುರುಷರು ಅತಿಯಾದ ಮದ್ಯಪಾನ ಮಾಡುತ್ತಿದ್ದರು. ದುಡಿದಿದ್ದನ್ನು ಕುಡಿಯಲು ಬಳಸುತ್ತಿದ್ದುದರಿಂದ ಕುಟುಂಬ ನಿರ್ವಹಿಸುವುದು ಕಷ್ಟ ಸಾಧ್ಯವಾಯಿತು. ಕುಡಿದು ಬಂದು ಹೆಂಡತಿ ಮಕ್ಕಳನ್ನು ಹೊಡೆಯುವುದು ಸಾಮಾನ್ಯವಾಗಿತ್ತು.

೨೦೦೩ರ ನಂತರ ಸಮಗ್ರ ಗ್ರಾಮೀಣ ಆಶ್ರಯದ ಸಹಾಯದಿಂದ ಕುಟುಂಬಗಳಲ್ಲಿ ಹಲವು ಪರಿವರ್ತನೆಗಳಾದವು. ಪುರುಷರು ಮತ್ತು ಮಹಿಳೆಯರು ಇದರಲ್ಲಿ ಭಾಗವಹಿಸಿದರು. ಸಮಗ್ರ ಗ್ರಾಮೀಣ ಆಶ್ರಮದ ಸಭೆಗಳಲ್ಲಿ ಭಾಗವಹಿಸುವುದು, ಸ್ವಸಹಾಯ ಸಂಘಗಳ ಸ್ಥಾಪನೆ, ವಾರಕ್ಕೆ ೫ ರೂಪಾಯಿ ಉಳಿತಾಯ ಹಾಗೂ ಪ್ರತಿ ಗುಂಪಿನಲ್ಲಿ ೧೫ ಸದಸ್ಯರು. ಕಾರ್ಕಳದ ಸುತ್ತಮುತ್ತ ಹೀಗೆ ೭೫ ಸ್ವಸಹಾಯ ಸಂಘಗಳು ಸ್ಥಾಪನೆಯಾಯಿತು. ಸಭೆಗಳಲ್ಲಿ ಮಲ್ಲಿಗೆ ಕೃಷಿ ಬೆಳೆಯುವ ಬಗೆಗಿನ ತರಬೇತಿ ನೀಡಲಾಯಿತು. ಮಲ್ಲಿಗೆ ಬೆಳೆದು ಮಾರುಕಟ್ಟೆಗೆ ಮಾಡಲಾಯಿತು. ದಿನಕ್ಕೆ ೫೦ ರೂಪಾಯಿ ಆದಾಯ, ನಂತರ ಆದಾಯವು ದಿನಕ್ಕೆ ೧೫೦ ರೂಪಾಯಿಯಾಯಿತು. ಅಂದಾಜು ೧೨೦೦ ಮಹಿಳೆಯರು ಮಲ್ಲಿಗೆ ಕೃಷಿಯಲ್ಲಿ ನಿರತರಾಗಿದ್ದಾರೆ.

ಸಭೆಗಳಲ್ಲಿ ಮಹಿಳೆಯರು ಮತ್ತು ಮಕ್ಕಳ ಸಮಸ್ಯೆಗಳನ್ನು ಚರ್ಚಿಸಲಾಗುತ್ತದೆ. ಮುಖ್ಯವಾಗಿ ಕೌಟುಂಬಿಕ ಸಮಸ್ಯೆ, ಮಕ್ಕಳ ಶಿಕ್ಷಣ, ಮಕ್ಕಳ ಮೇಲಿನ ದೌರ್ಜನ್ಯ ಇಂತಹ ಸಮಸ್ಯೆಗಳಿಗೆ ವಾರದ ಸ್ವಸಹಾಯ ಸಂಘಗಳ ಸಭೆ ಮತ್ತು ತಿಂಗಳಿಗೊಮ್ಮೆ ನಡೆಯುವ ಕೊರಗಾಭಿವೃದ್ದಿ ಸಭೆಯಲ್ಲಿ ಚರ್ಚಿಸಲಾಗುತ್ತದೆ.

ಕೊರಗಾಭಿವೃದ್ಧಿ ಸಂಘಗಳ ಒಕ್ಕೂಟದ ಮೂಲಕ ಹಲವಾರು ಚಳುವಳಿಗಳನ್ನು ನಡೆಸಲಾಗಿದೆ. ಭೂಚಳುವಳಿ, ಅಜಲು ನಿಷೇಧ, ಚಳುವಳಿ, ಅಸ್ಪೃಶ್ಯತಾ ನಿವಾರಣೆ, ಆಹಾರದ ಹಕ್ಕು, ಮದ್ಯಪಾನ ವಿರೋಧಿ ಆಂದೋಲನ, ಸ್ತ್ರೀ ದೌರ್ಜನ್ಯ ವಿರೋಧಿ ಆಂದೋಲನ ಇತ್ಯಾದಿ. ಕೊರಗರು ಇಂತಹ ಚಳುವಳಿಗಳಲ್ಲಿ ಭಾಗವಹಿಸುತ್ತಿದ್ದಾರೆ.

ಕೊರಗರ ಚಳುವಳಿಗೆ ಸಿಕ್ಕ ಪ್ರಮುಖ ಫಲಶ್ರುತಿಗಳೆಂದರೆ:

೧. ಅಂತ್ಯೋದಯ ಅನ್ನ ಯೋಜನೆ ಪಡಿತರ ಚೀಟಿ

೨. ಆರು ತಿಂಗಳಿಗೊಮ್ಮೆ ಉಚಿತ ಪೌಷ್ಠಿಕಾಂಶ ಆಹಾರ

೩. ಒಂದು ಎಕರೆ ಜಾಗ

೪. ನೀರಾವರಿಗಾಗಿ ಬಾವಿ

೫. ಹೊಸ ಮನೆಗಳು

೬. ಮಲ್ಲಿಗೆ ಕೃತಿಗೆ ಪ್ರೋತ್ಸಾಹ

ಕೊರಗರಲ್ಲಿ ಇಂದು ಕೊರಗ ನ್ಯಾಯಾಲಯವಿದೆ. ಕೊರಗರ ಸಮಸ್ಯೆ ಮುಖ್ಯವಾಗಿ ಮಹಿಳೆಯರ ವಿರುದ್ಧದ ದೌರ್ಜನ್ಯ ವಿರುದ್ಧ ಇದು ಚರ್ಚಿಸುತ್ತದೆ. ನ್ಯಾಯಾಲಯವು ತಿಂಗಳಿಗೊಮ್ಮೆ, ಎರಡನೆಯ ಶನಿವಾರ ನಡೆಯುತ್ತದೆ. ಈ ನ್ಯಾಯಾಲಯದ ಮೂಲಕ ೧೫೦ಕ್ಕಿಂತಲೂ ಹೆಚ್ಚಿನ ಮಹಿಳೆಯರಿಗೆ ಕೌಟುಂಬಿಕ ನ್ಯಾಯ ದೊರೆತಿದೆ.

ಕೊರಗಾಭಿವೃದ್ಧಿ ಸಂಘಟನೆಗಳು ಮಹಿಳಾ ಸಬಲೀಕರಣಕ್ಕಾಗಿ ಹಲವಾರು ಕಾರ್ಯ ಕ್ರಮಗಳನ್ನು ಹಮ್ಮಿಕೊಂಡಿವೆ. ಮುಖ್ಯವಾಗಿ ಮಾತೃಪ್ರಧಾನ ಕುಟುಂಬಕ್ಕೆ ಪ್ರೇರಣೆ. ಕೊರಗ ಮಹಿಳೆಯರು ಗ್ರಾಮ ಪಂಚಾಯತ್ ಚುನಾವಣೆಗಳಲ್ಲಿ ಸ್ಪರ್ಧಿಸಿ ಜಯವನ್ನೂ ಸಾಧಿಸಿದ್ದಾರೆ. ಈ ಮೂಲಕ ಕೊರಗ ಸಮುದಾಯ ಮಾತ್ರವಲ್ಲದೆ ಇತರ ಸಮುದಾಯದ ಸಮಸ್ಯೆಗಳನ್ನು ಬಗೆಹರಿಸುತ್ತಿದ್ದಾರೆ.

ಕೊರಗರ ಮದ್ಯವ್ಯಸನ ವಿರೋಧಿ ಆಂದೋಲನಗಳ ಮೂಲಕ ಕೆಲವು ಪುರುಷರು ಮದ್ಯವ್ಯಸನ ಮತ್ತು ತಂಬಾಕು ಉತ್ಪನ್ನಗಳನ್ನು ತ್ಯಜಿಸುವ ನಿರ್ಧಾರವನ್ನು ತೆಗೆದುಕೊಂಡರು. ಎ.ವಿ. ಬಾಳಿಗಾ ಮೆಮೋರಿಯಲ್ ಆಸ್ಪತ್ರೆ ನಡೆಸಿದ ಶಿಬಿರಗಳಲ್ಲಿ ಭಾಗವಹಿಸಿ ಮದ್ಯ ಮುಕ್ತರಾಗಿದ್ದಾರೆ. ೧೦ ದಿನದ ಶಿಬಿರಗಳಲ್ಲಿ ಕನಿಷ್ಠ ೨೦ ಕೊರಗ ಪುರುಷರು ಮದ್ಯ ಮುಕ್ತರಾಗಿದ್ದಾರೆ. ಇಂತಹ ೭ ಶಿಬಿರಗಳನ್ನು ಸಮಗ್ರ ಆದಿವಾಸಿ ಅಭಿವೃದ್ಧಿ ಇಲಾಖೆಯ ಮೂಲಕ ನಡೆಸಲಾಯಿತು. ಕನಿಷ್ಠ ೧೫೦ ಕೊರಗರು ಮದ್ಯ ಮುಕ್ತರಾಗಿದ್ದಾರೆ. ಕಳೆದ ಹತ್ತು ವರ್ಷಗಳಲ್ಲಿ ಕನಿಷ್ಠ ೧೪೦೦ ಮಂದಿ ಕೊರಗರು ಮದ್ಯವರ್ಜನೆ ಮಾಡಿದ್ದಾರೆ.

ಇಂದಿನ ಮಕ್ಕಳಿಗೆ ಶಿಕ್ಷಣ ನೀಡುವುದರ ಮೂಲಕ ಕೊರಗರ ಸಾಮಾಜಿಕ ಸಮಸ್ಯೆಗಳನ್ನು ಹೋಗಲಾಡಿಸಲಾಗುತ್ತಿದೆ. ಕೊರಗ ಮಹಿಳೆಯರ ಸರ್ಕಾರಿ ಶಾಲೆಗಳಲ್ಲಿ ಉಪಾಧ್ಯಕ್ಷರೂ ಆಗಿದ್ದಾರೆ.

ಕುಂದಾಪುರ ತಾಲ್ಲೂಕಿನ ಪರಿಸರದ ಕೊರಗರು ನೀರಿಗಾಗಿ ಕೆಲವು ಕಿಲೋಮೀಟರ್ ಕ್ರಮಿಸಬೇಕಾಗಿತ್ತು. ಒಂದು ಹೊತ್ತಿನ ಊಟಕ್ಕೂ ಪರದಾಡಬೇಕಾಗಿತ್ತು. ಸಮಗ್ರ ಗ್ರಾಮೀಣ ಆಶ್ರಯದ ಮೂಲಕ ಕೊರಗರಿಗೆ ಜಮೀನು ಮಂಜೂರಾಯಿತು. ೬೦ ಮಹಿಳೆಯರಿಗೆ ಭೂಮಿ ದೊರೆಯಿತು. ನಾಲ್ಕು ಸ್ವಸಹಾಯ ಸಂಘಗಳು ಸ್ಥಾಪನೆಯಾಯಿತು. ಇಂತಹ ಸ್ವಸಹಾಯ ಸಂಘಗಳ ಸಭೆಗಳಲ್ಲಿ ಯಾವ ರೀತಿ ಸಮಗ್ರ ಆದಿವಾಸಿ ಅಭಿವೃದ್ಧಿ ಯೋಜನೆ ಹಾಗೂ ಪಂಚಾಯತ್ ಮೂಲಕ ಭೂಮಿಯನ್ನು ಯಾವ ರೀತಿ ಅಭಿವೃದ್ಧಿಪಡಿಸಬಹುದೆಂದು ಚರ್ಚಿಸಲಾಯಿತು. ಉಡುಪಿ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯಾಧಿಕಾರಿಯ ಮೂಲಕ ಸಭೆ ನಡೆಸಲಾಯಿತು. ಈ ಮೂಲಕ ಕೃಷಿ ಪಶುಸಂಗೋಪನೆ ಹಾಗೂ ಹನಿ, ನೀರಾವರಿ ಬಾವಿ, ನೀರಿನ ವಿತರಣೆ ಮೊದಲಾದ ವಿಷಯಗಳ ಬಗ್ಗೆ ಚರ್ಚಿಸಲಾಯಿತು. ೬೦ ಮಹಿಳೆಯರು ಬಾಳೆಹಣ್ಣು, ರಬ್ಬರ್, ತೆಂಗು ಬೆಳೆಯಲು ಒಪ್ಪಿದರು. ಎರಡು ಹಸುಗಳನ್ನು ಪಶುಸಂಗೋಪನೆ ಇಲಾಖೆಯ ಮೂಲಕ ನೀಡಲಾಯಿತು. ಇದರ ಲಾಭವನ್ನು ಕೊರಗರು ಪಡೆದುಕೊಂಡಿದ್ದಾರೆ. ೭ ಲೀಟರ್ ಹಾಲನ್ನು ದಿನಾ ಡೈರಿಗೆ ನೀಡುತ್ತಿದ್ದಾರೆ. ೧೪೦ ರೂಪಾಯಿ ದಿನ ಆದಾಯ, ಒಟ್ಟು ವಾರ್ಷಿಕ ೬೦,೦೦೦ ರೂಪಾಯಿ ಗಳಿಸುತ್ತಿದ್ದಾರೆ. ಆಕಳ ಸಗಣಿಯಿಂದ ಗೋಬಲ್ ಗ್ಯಾಸ್ ತಯಾರಿಸುತ್ತಿದ್ದಾರೆ. ಕನಿಷ್ಠ ೬೦ ಮಹಿಳೆಯರು ಈ ರೀತಿ ಕಾರ್ಯೋನ್ಮುಖರಾಗಿದ್ದಾರೆ.

**ಕೊರಗಾಭಿವೃದ್ಧಿ ಸಂಘ**

೧. ಕೊರಗಾಭಿವೃದ್ಧಿ ಸಂಘ ಕೊರಗರ ಸಂಘಟನೆಯಾಗಿದ್ದು ಕೊನೆಯ ಕೊರಗನ ಅಭಿವೃದ್ಧಿ ಉದ್ದೇಶವನ್ನು ಹೊಂದಿದೆ.

೨. ಅಸ್ಪೃಶ್ಯತೆ ಕೊರಗರ ಒಳಗೆ ಹಾಗೂ ಇತರ ಸಮುದಾಯದವರು ಕೊರಗರನ್ನು ಅಸ್ಪೃಶ್ಯರನ್ನಾಗಿ ನೋಡುವುದು ಕಡಿಮೆಯಾಗಿದೆ.

೩. ಪ್ರತಿ ವರ್ಷಕ್ಕೊಮ್ಮೆ ಆಗಸ್ಟ್ ೮ರಂದು ಭೂಮಿ ಹಬ್ಬವನ್ನು ಆಚರಿಸಲಾಗುತ್ತಿದೆ.

ಒಂದು ಸಾವಿರಕ್ಕಿಂತಲೂ ಹೆಚ್ಚು ಕೊರಗರು ಸಾಂಸ್ಕೃತಿಕ ಕಾರ್ಯಕ್ರಮದೊಂದಿಗೆ ಹಾಜರಿರುತ್ತಾರೆ.

೪. ಅಜಲು ನಿಷೇಧ ಕಾಯ್ದೆ ಬಂದ ನಂತರ ಕೊರಗರ ಡೋಲು, ಕೊಳಲು ವಾದನಗಳಿಗೆ ಸಾಂಸ್ಕೃತಿಕ ಮನ್ನಣೆ ದೊರೆಯುತ್ತಿದೆ.

೫. ಕೊರಗರ ಕತೆ ಮತ್ತು ಸಂಸ್ಕೃತಿಯ ಅಧ್ಯಯನಗಳು ನಡೆದಿವೆ.

೬. ಕೊರಗರ ಚಳುವಳಿಗಳ ಪ್ರಮುಖ ಅಂಶವೆಂದರೆ ಮಹಿಳೆಯರ ನಾಯಕತ್ವ ಮಹಿಳೆಯರ ಮುಂದಾಳತ್ವದಲ್ಲಿ ಚಳುವಳಿಗಳು ಪರಿಣಾಮಕಾರಿಯಾಗಿದೆ.

೭. ಶೇಕಡ ೯೦ ಭೂಮಿ ಮಹಿಳೆಯರ ಹೆಸರಿನಲ್ಲಿದೆ.

೮. ಇಂದು ಕೊರಗರು ಆರೋಗ್ಯದ ಸಮಸ್ಯೆಗಳ ಬಗ್ಗೆ ಅರಿವನ್ನು ಹೊಂದಿದ್ದಾರೆ. ಸಕಾಲದಲ್ಲಿ ಚಿಕಿತ್ಸೆ ಪಡೆಯುತ್ತಿದ್ದಾರೆ.

೯. ಆಸ್ಪತ್ರೆಗಳಲ್ಲಿ ಹೆರಿಗೆ ಮಾಡಿಸಿಕೊಳ್ಳುವುದು ಸಾಮಾನ್ಯವಾಗಿದೆ.

೧೦. ಹದಿನಾರು ಮಕ್ಕಳ ಸಂಘಟನೆಗಳನ್ನು ಸ್ಥಾಪಿಸಲಾಗಿದೆ. ಪ್ರತಿ ಸಂಘಟನೆಯಲ್ಲಿ ೫೦ ಮಕ್ಕಳಿದ್ದಾರೆ. ಒಟ್ಟು ೬೦೦ ಮಕ್ಕಳು ಸಂಘಟನೆಯಲ್ಲಿ ಇದ್ದಾರೆ.

**ಕೊರಗರ ಅಜಲು ಪದ್ಧತಿ**

ಅಜಲು ಎಂಬ ಪದಕ್ಕೆ ಹಕ್ಕು, ಹಕ್ಕಿನ ಪ್ರದೇಶ, ಮೀಸಲು ಪ್ರದೇಶ ಎಂಬ ಅರ್ಥಗಳನ್ನು ನೀಡಲಾಗಿದೆ. ಜಾನಪದ ವಿದ್ವಾಂಸರಾದ ಅಮೃತ ಸೋಮೇಶ್ವರ ಅವರ ಪ್ರಕಾರ ಅಜಲು ಎಂಬುದು ವಿಶಾಲ ವ್ಯಾಪ್ತಿಯುಳ್ಳ ಶಬ್ದ. ಅದು ಕೇವಲ ಕೊರಗ ವರ್ಗಕ್ಕೆ ಮೀಸಲಾದುದಲ್ಲ. ಸಾಂಪ್ರದಾಯಿಕ ಗ್ರಾಮೀಣ ಧಾರ್ಮಿಕ ಹಾಗೆ ಸಾಮಾಜಿಕ ಬದುಕಿನಲ್ಲಿ ಶ್ರೇಣೀಕೃತ ಜಾತಿ ವ್ಯವಸ್ಥೆಯ ಹೆಣಿಗೆಯಲ್ಲಿ ಜಾತಿ ಹಾಗೂ ಜಾತಿ ವೃತ್ತಿಗಳನ್ನು ಹೊಂದಿಕೊಂಡು ಕೆಲವು ನಿರ್ದಿಷ್ಟ ಜನವರ್ಗಗಳಿಗೆ ಕೆಲವು ಕೆಲಸಗಳೂ, ಅವುಗಳನ್ನು ನಿರ್ವಹಿಸತಕ್ಕ ಸ್ಥಳಗಳ ವ್ಯಾಪ್ತಿಯೂ ನಿಗದಿಗೊಂಡಿದ್ದವು. ಇಂಥ ಕರ್ತವ್ಯಗಳಲ್ಲಿ ಕೆಲವು ಸಮಾಧಾನಕರ ಹಾಗೂ ಸಹ್ಯ ಎನಿಸಿದ್ದರೆ, ಇನ್ನು ಕೆಲವು ಅಸಹ್ಯವೂ, ಅವಮಾನವೀಯವೂ, ಹೇರಲ್ಪಟ್ಟವುಗಳು ಆಗಿದ್ದವು. ಕೊರಗರ ಅಜಲು ಅಂಥ ಹೀನಾಯವೆನಿಸಿದ ಅಜಲು ಪದ್ಧತಿಯಾಗಿತ್ತು. ಅಜಲು ಪದ್ಧತಿ ಅಮಾನವೀಯವಾಗಿರುವುದು

ನಿಜ. ಕೊರಗರನ್ನು ತಮ್ಮಿಂದ ದೂರವಿರಿಸಿದ. ಅಸ್ಪೃಶ್ಯರಂತೆ ಕಂಡ ಮೇಲ್ವರ್ಗದ ಜನರು ತಮಗೆ ಕಂಡ ರೀತಿಯಲ್ಲಿ ಕೊರಗರನ್ನು ನೋಡಿಕೊಂಡರು. ನಮ್ಮಂತೆಯೇ ಇವರು ಮನುಷ್ಯರು ಎಂಬುದನ್ನು ಮರೆತು ನಮಗಾಗಿ, ನಮ್ಮ ಗುಲಾಮರಾಗಿ ಇರಬೇಕೆಂದು ಬಯಸಿದರು. ಅದರಂತೆ ತಮ್ಮ ಮೂಗಿನ ನೇರಕ್ಕೆ ಇರಬೇಕೆಂದು ಬಯಸಿದರು. ಅದರಂತೆ ಅನೇಕ ರೀತಿಯ ಕಟ್ಟುಪಾಡುಗಳನ್ನು ಕೊರಗರಿಗೆ ಹೊರಿಸಿ ಒಂದು ರೀತಿಯ ಆವರಣದೊಳಗೆ ಬದುಕುವಂತೆ ನಿರ್ದೇಶಿಸಿದರು ಎಂದರೆ ತಪ್ಪಾಗಲಾರದು.

ಉಡುಪಿ ಜಿಲ್ಲೆಯ ನಂದಿಕೂರಿನ ಮೋಹನ್ ಅಡ್ವೆ ಅವರು ಇಂಜಿನಿಯರಿಂಗ್ ಪದವೀಧರರು ಅವರು ಅಜಲು ಪದ್ಧತಿಯೊಳಗೆ ಮಿಂದು–ಬೆಂದು ಬಂದವರು. ಅಜಲು ಪದ್ಧತಿಯನ್ನು ಅವರು ಹೀಗೆ ವ್ಯಾಖ್ಯಾನಿಸಿದ್ದಾರೆ. "ಕೊರಗರ ಆತ್ಮಗೌರವ, ಸ್ವಾಭಿಮಾನ, ಸ್ವಾವಲಂಬನೆಯನ್ನು ಬಲಿ ತೆಗೆದುಕೊಂಡು ಅವರಲ್ಲಿ ಪರಾವಲಂಬನೆ, ಕೀಳರಿಮೆ, ಮೂಢನಂಬಿಕೆ, ಜಡತ್ವ, ನಿಷ್ಕ್ರಿಯತೆ, ಭೀತಿ ಹುಟ್ಟಿಸಿ, ಬೆಳೆಸಿ ಅವರನ್ನು ಅಂತರ್ಮುಖಿಗಳನ್ನಾಗಿ ಮಾಡಿ, ತಮ್ಮ ಬಗೆಗೆ ನಕರಾತ್ಮಕ ಧೋರಣೆ ಮತ್ತು ದುಶ್ಚಟಗಳಿಗೆ ಒಲವು ಮೂಡಿಸಿ ಸಾಮಾಜಿಕ ಅಂತರವನ್ನು ಹೆಚ್ಚಿಸಿರುವ ಒಂದು ಅಮಾನವೀಯ, ಅವಮಾನಕರ ಕಾರ್ಯ ನಿಬಂಧನಾ ವ್ಯವಸ್ಥೆಯೇ ಕೊರಗರ ಅಜಲು (ಉಲ್ಲೇಖ ಬಾಬು ಕೊರಗ ಪಾಂಗಾಳ, ಪು.೩) ಮೋಹನ್ ಅಡ್ವೆಯವರ ವ್ಯಾಖ್ಯಾನವನ್ನು ಗಂಭೀರವಾಗಿ ಪರಿಗಣಿಸಬೇಕಾಗುತ್ತದೆ. ಕಾರಣ ದವರು ಕೊರಗ ಬುಡಕಟ್ಟು ಸಮುದಾಯದವರಾಗಿದ್ದು ಅಜಲು ಪದ್ಧತಿಯನ್ನು ಅನುಭವಿಸಿದವರು. ಹಾಗೆಯೇ ಶೈಕ್ಷಣಿಕವಾಗಿ ಪಧವೀದರರು, ಪ್ರಬುದ್ಧತೆಯನ್ನು ಹೊಂದಿರುವ ಅಡ್ವೆಯವರ ಮಾತುಗಳಲ್ಲಿಯೇ ಅಜಲಿನ ಅಮಾನವೀಯ ರೂಪಗಳು ಅನಾವರಣಗೊಂಡಿವೆ. ಮನುಷ್ಯರನ್ನು ಪ್ರಾಣಿಗಳನ್ನಾಗಿಸಿ ಜಡತ್ವ, ಅಪನಂಬಿಕೆ, ಅಗೌರವವನ್ನು ತುಂಬಿಸಿ, ಆತ್ಮಗೌರವ, ನಿರತ ಸ್ವಾಭಿಮಾನವನ್ನು ಕಳೆದು ಇತರರ ಹಿತಕ್ಕಾಗಿ ತಮ್ಮ ಸುಖವನ್ನು ಮರೆತು, ನಂಬಿಕೆ, ದಬ್ಬಾಳಿಕೆ, ದೌರ್ಜನ್ಯಗಳಿಗಾಗಿ ತನ್ನ ಮೈಮರೆತು, ಅಪಾಯದ ಅವಹೇಳನ್ನು ಊರಿನ ಚಾಕರಿ ಮಾಡಿಸುವ ಪದ್ಧತಿಯನ್ನು ಅಜಲು ಎನ್ನಬಹುದು ಎಂದು ಇನ್ನೋರ್ವ ಸ್ನಾತಕೋತ್ತರ ಪದವೀಧರರಾದ ಮತ್ತಡಿ ಕಾಯರಪಲ್ಕೆ ಅವರು ವ್ಯಾಖ್ಯಾನಿಸುತ್ತಾರೆ.

ಅಜಲು ಪದ್ಧತಿಯೊಳಗೆ ಬರುವ ಕಾರ್ಯಗಳನ್ನು ಗಮನಿಸಿದಾಗ, ಇದೊಂದು ಅಮಾನವೀಯ, ಹೇಯ ಪದ್ಧತಿ ಎಂದು ಕಂಡುಬರುತ್ತದೆ. ಊರಿನ ಸ್ವಚ್ಛತೆಯನ್ನು ಕೊರಗರಿಂದ ಮಾಡಿಸಲಾಗುತ್ತಿತ್ತು. ಸತ್ತ ಪ್ರಾಣಿಗಳನ್ನು ಊರಿನಿಂದ ಹೊರಹಾಕುವ ಕೆಲಸ

ಕಾರ್ಯಗಳನ್ನು ಕೊರಗರಿಂದ ಮಾಡಿಸಲಾಗುತ್ತಿತ್ತು. ಊರಿಗೆ ಬಂದ ಮಾರಿಯನ್ನು, ಕಂಬಳದ ಮುನ್ನಾದಿನದ 'ಪನಿ ಕುಲ್ಲುನೆ' ಕಾರ್ಯದಲ್ಲಿ ಕೊರಗರು ಭಾಗವಹಿಸಬೇಕಾಗಿತ್ತು. ಇಲ್ಲಿ ಕೊರಗರು ಒಂದು ರೀತಿಯಲ್ಲಿ ಮುಂಚೂಣಿಯಲ್ಲಿದ್ದು ಏನಾದರೂ ಅನಾಹುತಗಳಾದರೆ ಮೊದಲ ಬಲಿ ಕೊರಗರದ್ದೇ ಆಗುತ್ತಿತ್ತು. ಪಂಚಮ ದಾನದ ಮೂಲಕ ಮೇಲ್ವರ್ಗದವರ ರೋಗರುಜಿನಗಳನ್ನು ಕೊರಗರಿಗೆ ಹಸ್ತಾಂತರಿಸುವ ಮೂಢ ಪದ್ಧತಿಯಲ್ಲೂ ಕೊರಗರು ಪ್ರಧಾನರು. ಈ ಎಲ್ಲ ಕಾರ್ಯಗಳನ್ನು ತಮಗೆ ನೀಡಿದ ವ್ಯಾಪ್ತಿಗನುಗುಣವಾಗಿ ಕೊರಗರು ಮಾಡಬೇಕಿತ್ತು. ಒಂದೊಂದು ಊರಿಗೆ ಇಂತಿಷ್ಟು ಕೊರಗ ಕುಟುಂಬಗಳನ್ನು ಕಾರ್ಯವ್ಯಾಪ್ತಿಗೆ ತಂದು ಚಾಕರಿ ಮಾಡಿಸಲಾಗುತ್ತಿತ್ತು. ಊರಿನ ದೈವ-ದೇವಸ್ಥಾನಗಳ ಸಾಂಪ್ರದಾಯಿಕ ವಿಧಿನಿಯಮಗಳನ್ನು ಕೊರಗರಿಂದ ಮಾಡಿಸಿದರೂ ಅಲ್ಲೆಲ್ಲ ಅಸ್ಪೃಶ್ಯರಂತೆ ಕಾಣಲಾಗುತ್ತಿತ್ತು. ಕೊರಗರಿಂದಾಗುವ ಸೇವೆ ದೈವ-ದೇವಿಗೆ ಸಮರ್ಪಣೆಯಾಗುತ್ತದೆ ಎಂದರೆ ಕೊರಗರು ಹೇಗೆ ಅಸ್ಪೃಶ್ಯರಾಗುತ್ತಾರೆ ಎಂಬ ಪ್ರಶ್ನೆ ಉದ್ಭವಾಗುವುದು ಸಹಜ. ಆದರೆ ಇತ್ತೀಚಿನವರೆಗೂ ಇಂತಹ ಯಾವುದೇ ಪ್ರಶ್ನೆಗಳು ಮೇಲ್ವರ್ಗದವರಲ್ಲಿ ಬಂದಿಲ್ಲದಿರುವುದು ಅತ್ಯಂತ ನೋವಿನ ಸಂಗತಿಯೆಂದೇ ಹೇಳಬಹುದು.

ಊರಿನ ಎಲ್ಲಾ ಜನರ ಜೊತೆ ಕೊರಗರು ವಿಧೇಯತೆಯಿಂದ ವರ್ತಿಸಬೇಕೆಂಬ ಅಮಾನವೀಯ ಅಲಿಖಿತ ನಿಯಮಗಳನ್ನು ಯಾರು ತಂದರು? ಯಾಕೆ ತಂದರು? ಮತ್ತು ಅದರಿಂದಾಗುವ ಪ್ರಯೋಜನವೇನು ಎಂಬುದನ್ನು ಅಧ್ಯಯನಗಳು ಗ್ರಹಿಸಬೇಕಾಗಿದೆ. ಇತರ ಸಮುದಾಯದವರು ಎದುರುಗೊಂಡರೆ ನಡುಬಗ್ಗಿಸಿ ಕೈಜೋಡಿಸಿ ನಮಿಸಬೇಕು. ಹಣ್ಣು ಹಣ್ಣು ಮುದುಕನಾದಂಥ ಕೊರಗರನ್ನು ಇತರ ಸಮುದಾಯದ ಯಾವುದೇ ವಯಸ್ಸಿನವರು ಏಕವಚನದಲ್ಲಿ ಸಂಭೋಧಿಸಬೇಕೆನ್ನುವ ನಿಯಮವನ್ನು ಜಾರಿಗೆ ತಂದವರಾರು? ಇಲ್ಲೆಲ್ಲ ಹಿಂದೂ ಧರ್ಮದ ಸಂಸ್ಕಾರ, ಸಂಸ್ಕೃತಿ, ಗೌರವ, ಪೂಜನೀಯತೆ, ಧಾರ್ಮಿಕತೆಗಳೆಲ್ಲ ಅಡ್ಡ ಬಂದಿಲ್ಲವೇ ಎನ್ನುವ ಪ್ರಶ್ನೆ ಎದುರಾಗುತ್ತದೆ. ಈ ರೀತಿಯ ಕೀಳರಿಮೆಯಿಂದ ಕಾಣುವ, ನಡೆ-ನುಡಿ, ವಿಚಾರಗಳು ಅವಿಭಜಿತ ದಕ್ಷಿಣ ಕನ್ನಡದ ಕೊರಗರಿಗೆ ಮಾತ್ರ ಸೀಮಿತವಾಗಿಲ್ಲ. ಇತರೆ ನಿಮ್ನವರ್ಗಗಳೆಂದು ಕರೆಯಲ್ಪಡುವ ಮನ್ಸ, ಮುಗೇರ, ನಲಿಕೆ ಮತ್ತು ಇನ್ನಿತರ ಸಮುದಾಯದವರನ್ನು ಕೊರಗರಂತೆಯೇ ಕಾಣುವುದನ್ನು ಇಂದಿಗೂ ಗ್ರಾಮೀಣ ಪ್ರದೇಶದಲ್ಲಿ ಕಾಣುತ್ತೇವೆ. ಈ ರೀತಿಯ ನಿಯಮ-ನೀತಿಗಳನ್ನು ಗಮನಿಸಿದಾಗ, ಮೇಲ್ವರ್ಗದ ಜನರು ಈ ನಿಮ್ನವರ್ಗದವರನ್ನು ಈ ರೀತಿಯಲ್ಲಿಯೇ ಕಾಣಬೇಕೆನ್ನುವ

ಅಲಿಖಿತ ನಿಯಮವನ್ನು ತಮ್ಮ ಮಕ್ಕಳಿಗೆ, ಇತರರಿಗೆ ತಿಳಿಸಿ ಕೊಡುತ್ತಾರೆ ಎಂಬುದು ಮನವರಿಕೆಯಾಗುತ್ತದೆ.

ಕೊರಗರ ಅಜಲು ಪದ್ಧತಿಗೆ ಸರ್ಕಾರಿ ನಿಷೇಧ ಹೇರಿದೆ. ಕಾನೂನಿನಾತ್ಮಕವಾಗಿ ಅಜಲು ಪದ್ಧತಿಯನ್ನು ಕೊರಗರು ಮಾಡುವಂತಿಲ್ಲ, ಮೇಲ್ವರ್ಗದವರು ಕೊರಗರಿಂದ ಮಾಡಿಸುವಂತಿಲ್ಲ. ಅನೇಕ ರೀತಿಯ ಪ್ರತಿಭಟನೆ, ಹೋರಾಟ, ಧರಣಿ, ಉಪವಾಸ ಸತ್ಯಾಗ್ರಹಗಳ ಮೂಲಕ ಸರ್ಕಾರದ ಗಮನಸೆಳೆದು ಅಜಲು ಪದ್ಧತಿಗೆ ತಿಲಾಂಜಲಿ ನೀಡಲಾಗಿದೆ. ಆದರೆ ಅಜಲು ನಿಷೇಧವೊಂದರಿಂದಲೇ ಕೊರಗರ ಅಭಿವೃದ್ಧಿ ಸಾಧ್ಯವೆಂದು ಹೇಳುವಂತಿಲ್ಲ. ಇಂದಿಗೂ ಗ್ರಾಮೀಣ ಪ್ರದೇಶದಲ್ಲಿ ಕೆಲವು ಕೊರಗರು ಅಜಲು ಪದ್ಧತಿಯ ಪರವಾಗಿಯೇ ಇದ್ದಾರೆ ಎಂಬುದು ಕ್ಷೇತ್ರಕಾರ್ಯದಿಂದ ತಿಳಿದುಬಂದಿದೆ. ಅಮಾನವೀಯ ಅಜಲು ಪದ್ಧತಿಯನ್ನು ನಿಷೇಧಿಸಿದ್ದು ಅಕ್ಷರಶಃ ಒಳ್ಳೆದು. ಹಾಗೆಯೇ ಪರಿಪೂರ್ಣವಾಗಿ ಅದರಿಂದ ಕೊರಗರನ್ನು ಹೊರಬರುವಂತೆ, ಅಭಿವೃದ್ಧಿಯ ಕಡೆಗೆ ಕೊಂಡೊಯ್ಯುವ ಕೆಲಸಗಳನ್ನು, ಯೋಜನೆಗಳನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಸರ್ಕಾರಗಳು ಮುಂದಾಗಬೇಕಿದೆ. ಬರಿಯ ಪದ್ಧತಿ ಪರಂಪರೆಗಳೇ ಸಂಸ್ಕೃತಿಯೆನಿಸಲಾರವು. ನಿಜವಾದ ಸಂಸ್ಕೃತಿಯೆಂದರೆ ಮನುಷ್ಯನ ಒಳ್ಳೆತನದ ಸಮುಚ್ಚಯ(ಸಮ್ಯಕ್+ಕೃತಿ=ಸಂಸ್ಕೃತಿ) ಮನುಷ್ಯತ್ವಕ್ಕೆ, ಮಾನವ ಸ್ವಾತಂತ್ರ್ಯಕ್ಕೆ, ಆತ್ಮಾಭಿಮಾನಕ್ಕೆ ಕುಂದು ಉಂಟುಮಾಡಬಹುದಾದ ಯಾವ ಪದ್ಧತಿಗಳು ಸಂಸ್ಕೃತಿಯ ತೆಕ್ಕೆಯೊಳಗೆ ಬರಲಾರವು ಎಂಬ ಅಮೃತ ಸೋಮೇಶ್ವರ ಅವರ ಅಭಿಪ್ರಾಯದಂತೆ ಎಲ್ಲರನ್ನು ಮಾನವೀಯ, ಗುಣಸ್ವಭಾವಗಳಿಂದ ಕಂಡರೆ ಸುಖಿ ಸಮಾಜವಾಗುವುದರಲ್ಲಿ ಎರಡು ಮಾತಿಲ್ಲ.

ಒಂದು ಕಾಲದಲ್ಲಿ ಕಾಡಿನಿಂದ ನಾಡಿಗೆ ಒತ್ತಾಯ ಪೂರ್ವಕವಾಗಿ ಸ್ಥಳಾಂತರಿಸಲ್ಪಟ್ಟ ಕೊರಗರಿಗೆ ತುತ್ತು ಅನ್ನ ಆಹಾರದ ಮೂಲಭೂತ ಚಿಂತೆ, ವಸತಿ ಚಿಂತೆಯಿತ್ತು. ಆ ಸಂದರ್ಭದಲ್ಲಿ ಊರಿನ ಮೇಲ್ವರ್ಗದವರ ತೋಟ ಗದ್ದೆಗಳಲ್ಲಿ ಕೂಲಿಯಾಳುಗಳಾಗಿ ದುಡಿದರು. ಹಾಗೆಯೇ ಕೊರಗರ ಅನನ್ಯತೆಯ ಸಂಕೇತವಾದ ಡೋಲು ವಾದನವನ್ನೂ ದೈವ ದೇವಸ್ಥಾನಗಳ ಆಚರಣೆಗಳಲ್ಲಿ ತೊಡಗಿಸಿಕೊಳ್ಳಲಾಯಿತು. ಆ ಕಾಲಕ್ಕೆ ಆ ಸಂದರ್ಭಕ್ಕೆ ಡೋಲುವಾದನ ಅಜಲು ಪದ್ಧತಿ ಕೆಲವೊಂದು ರೀತಿಯಲಜ್ಜಿ ಕೊರಗರಿಗೆ ಅನುಕೂಲವನ್ನು ಒದಗಿಸಿದ್ದು ನಿಜ. ಡೋಲುವಾದನವನ್ನು ಕೊರಗರ ಸಾಂಸ್ಕೃತಿಕ ಅನನ್ಯತೆಯನ್ನು ಉಳಿಸಿಬೆಳೆಸಬೇಕು. ಆದರೆ ಅಲ್ಲಿ ಆ ಸಂದರ್ಭದಲ್ಲಿ ಅಸ್ಪೃಶ್ಯತೆ, ಪಂಕ್ತಿ ಭೇದಗಳಿಗೆ,

ಅಮಾನವೀಯ ನಡವಲಿಕೆಗಳಿಗೆ ಆಸ್ಪದ ಕೊಡಬಾರದು. ಕರಾವಳಿ ಕರ್ನಾಟಕದ ಅನೇಕ ಸಾಂಸ್ಕೃತಿಕ ಅನನ್ಯತೆಗಳ ಉಳಿಕೆಗೆ ಸಂಪ್ರದಾಯಗಳ ಆಚರಣೆಗಳೇ ಆಧಾರವಾಗಿರುವುದನ್ನು ಗಮನಿಸಬಹುದು. ಅಂತೆಯೇ ಕೊರಗರ ಡೋಲು ವಾದನಕ್ಕೆ ಅವರ ಅಸ್ಮಿತೆಗೆ ದೊರಕಬೇಕಾದ ಗೌರವ ಮನ್ನಣೆಯನ್ನು ಸಮಾಜ ಸರ್ಕಾರ ನೀಡಬೇಕಾದುದು ಅತ್ಯಗತ್ಯ.

ಕೊರಗ ಸಮುದಾಯದಲ್ಲಿನ ಹಿರಿಯರಿಗೆ ಅಜಲು ಪದ್ಧತಿಯ ಸಾಧಕ-ಭಾದಕಗಳ ಬಗೆಗೆ ಯಾವುದೇ ತಿಳಿವಳಿಕೆಗಳಿಲ್ಲ ಎಂಬುದಾಗಿ ಯುವಜನರು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಇತ್ತೀಚಿನ ದಿನಮಾನಗಳಲ್ಲಿ ಗ್ರಾಮೀಣ ಪ್ರದೇಶದ ಬೆರಳೆಣಿಕೆಯ ಹಿರಿಯ ಕೊರಗರು ನಮ್ಮ ಸಂಪ್ರದಾಯವೆಂದು ಅಜಲು ಪದ್ಧತಿಯನ್ನು ಮುಂದುವರಿಸಬೇಕೆನ್ನುತ್ತಾರೆ. ಆದರೆ ಶಿಕ್ಷಣ ಪಡೆದ ಯುವ ಕೊರಗರು ಮತ್ತು ಇತರರು ಯಾವುದೇ ಕಾರಣಕ್ಕೂ ಅಜಲು ಪದ್ಧತಿಯನ್ನು ಬೆಂಬಲಿಸುವುದಿಲ್ಲ. ಕೊರಗರಲ್ಲಿರುವ ಅತ್ಯಂತ ದೊಡ್ಡ ಪಿಡುಗು ಎಂದರೆ ಮದ್ಯಪಾನ ಸೇವನೆ ಎಂದು ಹೇಳಬಹುದು. ಈ ಮದ್ಯಪಾನ ಸೇವನೆಗಾಗಿ ಹಣ ಕ್ರೋಢೀಕರಿಸಲು ಯಾವುದೇ ಕೆಲಸವಾದರೂ ಸರಿ ಮಾಡುತ್ತೇವೆ ಎಂಬ ಮನೋಭಾವನೆ (ಮನಸ್ಥಿತಿ) ಇರುವುದರಿಂದ ಯಾವುದೇ ರೀತಿಯಲ್ಲಿ ಒಳ್ಳೆದು-ಕೆಟ್ಟದ್ದು ಎಂಬುದರ ಬಗೆಗೆ ವಿಮರ್ಶಿಸಲು ಹೋಗುವುದಿಲ್ಲ. ಹಾಗೆಯೇ ಮದ್ಯಪಾನದ ಚಟಕ್ಕೆ ದಾಸರಾದ ಕೊರಗರು ಯಾವುದೇ ರೀತಿಯ ಅಭಿವೃದ್ಧಿಯ ಕಡೆಗೆ ಗಮನಹರಿಸುವುದಿಲ್ಲ.

ಅಜಲು ಚಾಕ್ರಿಯಿಂದ ಅನೇಕ ರೀತಿಯ ದುಷ್ಪರಿಣಾಮಗಳು ಕೊರಗರ ಮೇಲಾಗಿರುವುದಕ್ಕೆ ಸಾಕ್ಷ್ಯಾಧಾರಗಳಿವೆ. ಊರಿನ ಸ್ವಚ್ಚತೆಯನ್ನು ಕೊರಗರಿಂದ ಮಾಡಿಸಲಾಗುತ್ತಿತ್ತು. ಆದರೆ ಅವರಿಗೆ ಯಾವುದೇ ರೀತಿಯ ಮುಂಜಾಗ್ರತಾ ಸಲಕರಣೆಗಳನ್ನು ನೀಡಿಲ್ಲ. ಈ ಹಿನ್ನಲೆಯಲ್ಲಿ ರೋಗ ರುಜಿನಗಳು ಸುಲಭವಾಗಿ ಕೊರಗರಿಗೆ ಬರುತ್ತವೆ. ಇಂದಿನ ವೈಜ್ಞಾನಿಕ ಕಾಲದಲ್ಲೂ ನಗರಗಳಲ್ಲಿ ಅಲ್ಲಿ ಯಾವುದೇ ಮುಂಜಾಗ್ರತಾ ಪರಿಕರಗಳಿಲ್ಲದೆ ಗಟಾರ ಇನ್ನಿತರ ಸ್ಥಳಗಳಲ್ಲಿ ಸ್ವಚ್ಛತೆ ಕೈಗೊಂಡಿರುವುದನ್ನು ಕಾಣುತ್ತೇವೆ. ಕಾನೂನುಗಳೇನಿದ್ದರೂ ಕಾಗದದಲ್ಲಿ ಮಾತ್ರವೆಂಬಂತಾಗಿದೆ. ಅಧಿಕಾರಿಗಳು ಸರ್ಕಾರ ಕಣ್ಮುಚ್ಚಿ ಕುಳಿತುಕೊಳ್ಳುತ್ತದೆ. ಯಾವುದೇ ಅನಾಹುತವಾದರೂ ಸಂತಾಪ ಸೂಚಿಸಿ ಬಿಡಿಗಾಸು ನೀಡಿ ಕೈತೊಳೆದುಕೊಳ್ಳುವುದು ಆಡಳಿತ ಅಧಿಕಾರಿ ವರ್ಗಗಳ ಜಾಯಮಾನ. ಕೊರಗರನ್ನು ಮೊದಲೇ ಪಂಚಮರೆಂದು ದೂರೀಕರಿಸಿರುವ ಸಮಾಜ ಇಂಥ ಕೆಲಸಕಾರ್ಯಗಳಲ್ಲಿ ಯಾವುದೇ ರೀತಿಯಲ್ಲಿ ಅನುಕಂಪ, ಮಾನವೀಯತೆ ತೋರಿಸುವುದಿಲ್ಲ. ಅದು ಅವರ ಕರ್ಮ ಎಂದು ಹೇಳ ಎಲ್ಲ ಕೆಲಸಗಳನ್ನು

ಮಾಡಿಸುತ್ತಿದ್ದರು. ಊರಿನ ಸ್ವಚ್ಛತೆಯನ್ನು ಕೊರಗರಿಂದ ಮಾಡಿಸುಬ ಪ್ರಕ್ರಿಯೇ ಈಗ ಕಂಡುಬರುವುದಿಲ್ಲವಾದರೂ, ಪಂಚಾಯತ್ ಮೂಲಕ ಅವರನ್ನು ನೇಮಿಸಿಕೊಂಡು ಅಲ್ಪ ಸಂಬಳ ನೀಡುತ್ತಿರುವುದನ್ನು ಕಾಣಬಹುದು. ಊರಿನ ಧಾರ್ಮಿಕ ಕಾರ್ಯಕ್ರಮಗಳಲ್ಲಿ ಸುಡುಮದ್ದನ್ನು ಸ್ಪೋಟಿಸುವ ಸಂಪ್ರದಾಯ, ಮೊದಲಿನಿಂದಲೂ ಬಂದಿದೆ. ಈ ಸುಡುಮದ್ದನ್ನು ಸ್ಫೋಟಿಸುವ ಅಪಾಯಕಾರಿ ಕೆಲಸವನ್ನು ಕೊರಗರಿಗೆ ನೀಡಲಾಗುತ್ತಿತ್ತು. ಇದರಿಂದ ಅನೇಕ ಕೊರಗ ಯುವಕರು ಸಾವನ್ನಪ್ಪಿರುವ ಉದಾಹರಣೆಗಳಿವೆ. ಊರಿನ ದೈವ ದೇವರ ಸೇವೆ ಪ್ರತಿಷ್ಠೆ ಮನರಂಜನೆಗಾಗಿ ಅನಾಯಾಸವಾಗಿ ಕೊರಗರು ಬಲಿಯಾಗಬೇಕಾಗಿರುವುದು ಅತ್ಯಂತ ದುರದೃಷ್ಟಕರ ಸಂಗತಿ.

ಕೊರಗರ ಅಜಲಿನ ಚಾಕ್ರಿಗಳು ಹೆಚ್ಚಾಗಿ ರಾತ್ರಿ ಸಮಯದಲ್ಲಿಯೇ ಜರುಗುವುದನ್ನು ಗಮನಿಸಬಹುದು. ನಿದ್ದೆಗೆಟ್ಟು ಸರಿಯಾದ ಸಮಯದಲ್ಲಿ ಆಹಾರ ಸೇವನೆ ಮಾಡಲಾರದೇ ಅತಂತ್ರ ಸ್ಥಿತಿಯಮ್ನ ಕೊರಗರು ಅನುಭವಿಸುತ್ತಾರಸ. ಇದು ನೇರವಾಗಿ ಅವರ ಆರೋಗ್ಯಕರ ಮೇಲೆ ದುಷ್ಪರಿಣಾಮ ಬೀರುವುದನ್ನು ಗಮನಿಸಬಹುದು. ಅತ್ಯಂತ ಕಠಿಣತಮ ಕೆಲಸ ಕಾರ್ಯಗಳಲ್ಲಿ ತೊಡಗಿಸಿಕೊಳ್ಳಲು ಮದ್ಯಪಾನ ಸೇವನೆ ಮಾಡುತ್ತಾರೆ. ರಾತ್ರಿಯೆಲ್ಲಾ ಎಚ್ಚರದಿಂದಿರಲು ಮದ್ಯಪಾನ ಸೇವನೆಯ ಮೊರೆಹೋಗುತ್ತಾರೆ. ಇಒರಿಂದ ಕ್ಷಯ-ರಕ್ತಹೀನತೆ ಮತ್ತು ಇನ್ನಿತರ ಚರ್ಮರೋಗಗಳು ಕೊರಗರ ದೇಹ ಪ್ರವೇಶಿಸಿ ಜೀವಕ್ಕೆ ಅಪಾಯವನ್ನುಂಟುಮಾಡುತ್ತವೆ. ಇದು ಊರಿನ ಮುಖಂಡರಿಗೆ ಮೇಲ್ವರ್ಗದ ಜನರಿಗೆ ಅರ್ಥವಾಗುವುದಿಲ್ಲ.

ದುಡಿಮೆಗೆ ತಕ್ಕ ಪ್ರತಿಫಲವಿದ್ದೆ ದುಡಿಮೆಗಾರರಿಗೆ ನೆಮ್ಮದಿ ಇರುತ್ತದೆ. ಆದರೆ ಇಲ್ಲಿ ದುಡಿಮೆ ತಕ್ಕ ಸಂಬಳವಿಲ್ಲ. ಎದುರು ಮಾತನಾಡುವಂತಿಲ್ಲ. ಅವರು ಎಷ್ಟು ಕೊಡುತ್ತಾರೋ ಅದನ್ನೇ ಪಡೆದುಕೊಳ್ಳಬೇಕು. ಹೀಗಾಗಿ ಪಾರಂಪರಿಕವಾಗಿ ಆರೋಪಿಸಲ್ಪಟ್ಟ, ಹೇರಲ್ಪಟ್ಟ ಈ ಚಾಕ್ರಿಗಳನ್ನು ಮಾಡದಿರುವಂತಿಲ್ಲ. ಮಾಡಿದರೂ ತಕ್ಕ ಪ್ರತಿಫಲವಿಲ್ಲ. ಹೀಗಾಗಿ ಒಂದು ರೀತಿಯ ಮಾನಸಿಕವಾದ ಕೀಳರಿಮೆಗೆ, ಕ್ಷೋಬೆಗೆ ಕೊರಗರು ಒಳಗಾಗಿದ್ದಾರೆ ಎಂದು ಹೇಳಿದರೆ ತಪ್ಪಾಗಲಾರದು. ಬದಲಾದ ಕಾಲಘಟ್ಟದಲ್ಲಿ ಅಜಲು ಚಾಕ್ರಿಗಳು ಇಲ್ಲ. ಸರ್ಕಾರ ಇವುಗಳಿಗೆ ನಿಷೇಧ ಹೇರಿದೆ. ಕಾನೂನಾತ್ಮಕವಾಗಿ ಅಜಲು ಪದ್ಧತಿ ಅಪರಾಧ. ಈ ಹಿಂದೆ ಪ್ರಸ್ತಾಪಿಸಿದಂತೆ ಗ್ರಾಮೀಣ ಪ್ರದೇಶದಲ್ಲಿ ಬೆರಳೆಣಿಕೆ ಸಂಖ್ಯೆಯಲ್ಲಿ ಕೊರಗರು ಇನ್ನೂ ಈ ಪದ್ಧತಿಯನ್ನು ಅನುಸರಿಸುತ್ತಿರುವುದನ್ನು ಕಂಡುಬರುತ್ತದೆ. ಕೊರಗರಲ್ಲಿಯ ಯುವಕರು-

ಯುವತಿಯರು ಇಂದು ಶಿಕ್ಷಣ ಪಡೆದುಕೊಳ್ಳುತ್ತಿದ್ದಾರೆ. ಅಭಿವೃದ್ಧಿಯ ಮುಖ ನೋಡುತ್ತಿದ್ದಾರೆ. ಅವರಲ್ಲಿ ಅಜಲಿನಂತಹ ಪದ್ಧತಿಗಳ ಬಗೆಗಿನ ಅರಿವು, ಜಾಗೃತಿ ಹೆಚ್ಚಾಗಿದೆ. ಈ ನಿಟ್ಟಿನಲ್ಲಿ ಅನೇಕ ಸಂಘ ಸಂಘಟನೆಗಳು ಕಾರ್ಯೋನ್ಮುಖವಾಗಿರುವುದು ಸಮಾಧಾನಕರ ಸಂಗತಿ.

ಅಜಲು ಪದ್ಧತಿಯನ್ನು ಬೆಂಬಲಿಸುವವರು ಇನ್ನೂ ಇದ್ದಾರೆ ಎಂದರೆ ಅವರ ಮನಸ್ಥಿತಿಯನ್ನು ಗಮನಿಸಿಜಬೇಕು. ಕಾರಣ ಅಜಲು ಪದ್ಧತಿ ಪರವಾಗಿರುವವರು ಹಿರಿಯ ಕೊರಗರು. ಅವರಿಗೆ ಅದೊಂದು ಭಾವನಾತ್ಮಕ, ಪಾರಂಪರಿಕ ವಿಷಯವಾಗಿದೆ. ಅವರೆಲ್ಲರಿಗೂ ಜೀವನದ ಅನುಭವವಿದೆ. ಆದರೆ ಶಿಕ್ಷಣವಿಲ್ಲ. ಸಂಪ್ರದಾಯ ಆಚರಣೆಗಳನ್ನು ಚಾಚೂತಪ್ಪದೇ ನಡೆಸಿಕೊಂಡು ಮುಂದುವರಿಸಿಕೊಂಡು ಹೋಗುವುದರಲ್ಲಿಯೇ ನೆಮ್ಮದಿ ಕಾಣುತ್ತಾರೆ. ಪಾರಂಪರಿಕವಾಗಿ ಬಂದಿರುವ ನಂಬಿಕೆಗಳನ್ನು ಅವರು ಪರೀಕ್ಷಿಸಲು ಹೋಗುವುದಿಲ್ಲ. ದೈವ ದೇವರುಗಳ ಬಗೆಗೆ ಅವರಿಗೆ ಅಪಾರವಾದ ನಂಬಿಕೆಗಳಿವೆ. ಇದರಿಂದ ನಮಗೆ ನಮ್ಮ ಕುಟುಂಬಕ್ಕೆ ಎಲ್ಲಿ ಶಾಪ ತಟ್ಟುತ್ತದೆಯೋ ಎಂಬ ಮಾನಸಿಕವಾದ ಭಯ ಅವರನ್ನು ಆವರಿಸಿರುತ್ತದೆ. ಇದರಿಂದಾಗಿ ಏನಾದರೂ ಆಗಲಿ, ನಮ್ಮ ಪರಂಪರೆಯನ್ನು ಸಂಪ್ರದಾಯವನ್ನು ಮುಂದುವರಿಸಿಕೊಂಡು ಹೋಗುತ್ತೇವೆ ಎಂಬ ಮನೋಸ್ಥಿತಿಯನ್ನು ಹೊಂದಿದ್ದಾರೆ.

ಅಜಲು ಪದ್ಧತಿಯನ್ನು ನಿಷೇಧಿಸಿರುವುದರಿಂದ ಕೊರಗರಲ್ಲಿ ಎಲ್ಲಾ ರೀತಿಯ ಬದಲಾವಣೆ ಆಗಿದೆಯೇ? ಅಭಿವೃದ್ಧಿ ಕಂಡಿದ್ದಾರೆಯೇ? ಎಂಬ ಪ್ರಶ್ನೆಗೆ ಉದ್ಭವಿಸುವುದು ಸಹಜ. ಅಮಾನವೀಯ ಪದ್ಧತಿಯ ಚಾಕ್ರಿಗಳು ನಿಂತುಹೋಗಿವೆ. ಆದರೆ ಅಸ್ಪೃಶ್ಯತೆ ಇನ್ನೂ ಜೀವಂತವಾಗಿದೆ. ಅದು ಹೋಗಬೇಕಾದರೆ ಇಡೀ ಸಮಾಜದ ಮನೋಭಾವನೆಯಲ್ಲಿ ಬದಲಾವಣೆಯಾಗಬೇಕು. ಕೊರಗರಿಗೆ ಶಿಕ್ಷಣವಿಲ್ಲ. ಅವರಿಗೆ ತಿಳಿಯುತ್ತಿಲ್ಲ ಎಂದು ಗ್ರಹಿಸಿದರೂ, ಇತರೆ ಶಿಕ್ಷಣ ಪಡೆದ ಸಮುದಾಯದವರಿಗೆ ತಿಳಿವಳಿಕೆಯಿದ್ದೂ ಅಮಾನವೀಯ ವಾಗಿ ವರ್ತಿಸುವುದು ಸರಿಯೆ? ಎಂಬ ಪ್ರಶ್ನೆಯೇಳುತ್ತದೆ. ನಮ್ಮಂತೆ ಕೊರಗರೂ ಮನುಷ್ಯರು! ಅವರನ್ನು ಗೌರವಿಸಬೇಕೆನ್ನುವ ಸಾಮಾನ್ಯ ಜ್ಞಾನವನ್ನು ಪ್ರದರ್ಶಿಸಬೇಕಾಗಿತ್ತು! ಕೊರಗರನ್ನು ದೂರೀಕರಿಸಿ ಹಿಂಸಾತ್ಮಕವಾಗಿ ದುಡಿಸಿಕೊಂಡಿರುವುದು ಅಕ್ಷಮ್ಯ ಅಪರಾಧವೇ ಸರಿ.

ಅಜಲು ಪದ್ಧತಿ ನಿಷೇಧವಾಗಿರುವುದು ಕೊರಗರ ಆತ್ಮಸ್ಥೈರ್ಯವನ್ನು ಇಮ್ಮಡಿಗೊಳಿಸಿತು. ಒಂದು ಮಹತ್ವದ ಸಾಮಾಜಿಕ ಬದಲಾವಣೆಗೆ ಈ ನಿಷೇಧ ನಾಂದಿಹಾಡಿತು. ಅಜಲು

ಚಳುವಳಿಯನ್ನು ಬಾಬು ಕೊರಗ ಪಾಂಗಾಳ ಅವರು ಪಟ್ಟಿ ಮಾಡಿರುವುದನ್ನು ಗಮನಿಸಿಬಹುದು.

೧೯೯೭ರಲ್ಲಿ ಆರಂಭವಾದ ಅಜಲು ವಿರೋಧಿ ಹೋರಾಟ ೨೦೦೦ದಲ್ಲಿ ನಿಷೇಧ ಹೇರುವುದ ರೊಂದಿಗೆ ಕೊನೆಗೊಂಡಿತು.

೧. **ಸೂರಾಲು ಹಬ್ಬದಲ್ಲಿ ಕದನಿ ನಿಲ್ಲಿಸಿರುವುದು.**

ಸೂರಾಲು ರಥೋತ್ಸವದ ದಿನ ಸಂಪ್ರದಾಯದಂತೆ ಕೊರಗರು ಕದನಿ(ಸುಡುಮದ್ದು ಸ್ಫೋಟಿ ಸುವುದು)ಯನ್ನು ನಿಲ್ಲಿಸಿದರು.

೨. **ಸೂರಾಲು ಹಬ್ಬಕ್ಕೆ ಅರಸರನ್ನು ಡೋಲು ಮೇಳ ಬರುವುದನ್ನು ನಿಲ್ಲಿಸಿದರು.**

ಸಂಪ್ರದಾಯದಂತೆ ಪ್ರತಿ ವರ್ಷದ ಸೂರಾಲು ಹಬ್ಬದಲ್ಲಿ ಕೊರಗರ ಡೋಲುವಾದನದೊಂದಿಗೆ ಅರಸರ ಸಾಂಕೇತಿಕ ಪಯಣದಲ್ಲಿ ಕೊರಗರು ಪಾಲ್ಗೊಳ್ಳಲು ವಿರೋಧಿಸಿದರು.

೩. **ಸೂರಾಲು ಹಬ್ಬದ ದಿನ ಊರ ಹೋಟೆಲಿನವರು ಕೊರಗರಿಗೆ ಹಾಕಿದ ಪ್ರತ್ಯೇಕ ಚಪ್ಪರವನ್ನು ಹಬ್ಬದ ದಿನ ಕಿತ್ತು ಬಿಸಾಡಿರುವುದು.**

ಪ್ರತಿಯೊಂದು ಊರಿನ ಹೋಟೆಲುಗಳಲ್ಲಿ ಕೊರಗರಿಗಾಗಿಯೇ ಪ್ರತ್ಯೇಕ ಸ್ಥಳಾವಕಾಶ, ಪಾತ್ರೆ ಪಗಡೆಗಳನ್ನು ನಿಯೋಜಿಸುತ್ತಿದ್ದರು. ಆ ಮೂಲಕ ಕೊರಗರನ್ನು ಮನೆಯಿಂದ ಹಿಡಿದು ಎಲ್ಲ ಸಾರ್ವಜನಿಕ ಸ್ಥಳಗಳಲ್ಲೂ ಅಸ್ಪೃಶ್ಯರಂತೆ ಕಾಣುತ್ತಿದ್ದರು. ಹಬ್ಬದ ಸಂದರ್ಭದಲ್ಲಿ ಕೊರಗರು ತಮಗಾಗಿ ನಿರ್ಮಿಸಿದ ಚಪ್ಪರವನ್ನು ಕಿತ್ತುಹಾಕಿ ಅಸ್ಪೃಶ್ಯತೆಯ, ಅಜಲಿನ ವಿರುದ್ಧ ಪ್ರತಿಭಟನೆ ಸಲ್ಲಿಸಿದರು.

೪. **ಇದುವರೆಗಿನ ಸಂಪ್ರದಾಯದಂತೆ ನೂತನ ವಧುವರರ ಮದುವೆಯ ದಿನ ಮನೆಗೆ ಬರುವ ಮುನ್ನ ಅವರ ಕಾಲುಹಿಡಿಯಲು ಹೋಗಬೇಕಿತ್ತು. ಅದನ್ನು ನಿಲ್ಲಿಸಲಾಯಿತು.**

ಸಂಪ್ರದಾಯದಂತೆ ಮದುವೆಯಾದ ತಕ್ಷಣ ವಧುವರರು ಊರಿನ ಹಿರಿಯರ ಅಥವಾ ಅರಸರ ಕಾಲಿಗೆ ಅಡ್ಡಬಿದ್ದು ಆಶೀರ್ವಾದ ಪಡೆಯಬೇಕಾಗಿತ್ತು. ಈ ಸಂಪ್ರದಾಯವನ್ನು ಕೊರಗರು ನಿಷೇಧಿಸಿದರು. ಆ ಮೂಲಕ ನಿಮ್ಮ ಎಲ್ಲಾ ದರ್ಪಗಳನ್ನು ಎದುರಿಸಲು ಸಿದ್ಧರಿದ್ದೇವೆ ಎಂಬ ಸಂದೇಶವನ್ನು ನೀಡಿದರು.

೫. **ಮದುವೆಯಲ್ಲಿ ಕುಡಿತವನ್ನು ಕಡ್ಡಾಯವಾಗಿ ನಿಲ್ಲಿಸಲಾಯಿತು.**

ಜಗತ್ತಿನ ಪ್ರತಿಯೊಂದು ಬುಡಕಟ್ಟು ಸಮುದಾಯಗಳಲ್ಲಿ ಅಮಲು ಪದಾರ್ಥ ಸೇವನೆಗೆ ವಿಶೇಷವಾದ ಮಹತ್ವವಿದೆ. ಇದಕ್ಕೆ ಕೊರಗರೂ ಹೊರತಾಗಿಲ್ಲ. ಆದರೆ ಕೊರಗರಲ್ಲಿ ಈ ಅಮಲು ಸೇವನೆ ಸ್ವಲ್ಪ ಹೆಚ್ಚಾಗಿಯೇ ಇರುವುದನ್ನು ಎಲ್ಲ ಅಧ್ಯಯನಗಳೂ ದೃಢಪಡಿಸಿವೆ. ಈ ಕುಡಿತದ ವಿಷಯ ಇತರೆ ಮೇಲ್ವರ್ಗದವರು ಕೊರಗರನ್ನು ದೂರೀಕರಿಸಲು ಒಂದು ನೆಪವಾಗಿರಿಸಿಕೊಂಡಿದ್ದರು. ಇದನ್ನು ಗಮನಿಸಿದ ಅಜಲು ವಿರೋಧಿ ಹೋರಾಟಗಾರರು ಮದುವೆಯ ಸಂದರ್ಭದಲ್ಲಿ ಅತಿಯಾಗಿ ಕುಡಿಯುವುದನ್ನು ನಿಲ್ಲಿಸುವಂತೆ ತಮ್ಮ ಹಿರಿಯರ ಮನವೊಲಿಸುವಲ್ಲಿ ಯಶಸ್ವಿಯಾದರು.

೬. **ಪಾದೆಮರ ಹಬ್ಬದಲ್ಲಿ ವೇಷ ಹಾಕಿ ಬೇಡುವುದನ್ನು ನಿಲ್ಲಿಸಲಾಯಿತು.**

ಪ್ರತಿಯೊಂದು ಹಬ್ಬ ಆಚರಣೆಗಳಲ್ಲಿ ಕೊರಗರು ವೇಷಧರಿಸಿ ಮೇಲ್ವರ್ಗದವರ ಮನೆಮನೆಗೆ ಹೋಗಿ ಭಿಕ್ಷೆ ಬೇಡುವುದು ಅಜಲು ಅಜಲಿನ ಚಾಕ್ರಿಗಳಲ್ಲಿ ಒಂದು. ಅದನ್ನು ವಿರೋಧಿಸಿ ನಿರಾಕರಿಸಿದರು. ಆ ಮೂಲಕ ಕೊರಗರು ಅಜಲಿನ ಚಾಕ್ರಿಗೆ ಸೆಡ್ಡು ಹೊಡೆದರು.

೭. **ಸೂರಾಲು, ಪಾದೆಮಠ, ಕೊಕ್ಕರ್ಣೆ, ಚೆಗ್ರಿಬೆಟ್ಟು, ಮೊಗೇರ ಪೇಟೆ, ರಂಗನಕೆರೆ, ಬಂಡೀಮಠ, ಕೂರಾಡಿ, ನಿಂಜೂರು ಮುಂತಾದ ಕಡೆಗಳಲ್ಲಿ ಮಾರಿಯ ದಿನ ಮನೆಮನೆಗೆ ಹೋಗಿ ಡೋಲು ಬಡಿದು ಬೇಡುವುದನ್ನು ನಿಲ್ಲಿಸಲಾಯಿತು.**

ಪ್ರತಿಯೊಂದು ಊರಿನ ಮಾರಿಯನ್ನು ವಾರ್ಷಿಕವಾಗಿ ಒಂದು ಸಾರಿ ಗಡಿ ದಾಟಿಸುವುದು ಸಂಪ್ರದಾಯ. ಈ ಸಂಪ್ರದಾಯದಲ್ಲಿ ಕೊರಗರು ಪಾಲ್ಗೊಳ್ಳಬೇಕೆಂಬುದು ಅಜಲಿನ ಚಾಕ್ರಿಗಳಲ್ಲೊಂದು ರಾತ್ರಿ ಸಮಯದಲ್ಲಿ ಜರುಗುವ ಈ ಮಾರಿಯನ್ನು ಗಡಿದಾಡಿಸುವ ಸಂದರ್ಭದಲ್ಲಿ ಕೊರಗರು ಡೋಲುವಾದನದೊಂದಿಗೆ ಎಲ್ಲರಿಗಿಂತ ಮುಂದೆ ಓಡಬೇಕಿತ್ತು. ಹಾಗೆಯೇ ಮೇಲ್ವರ್ಗದವರ ಮನೆಮನೆಗೆ ಹೋಗಿ ಡೋಲು, ಬಡಿದು ಭಿಕ್ಷೆ ಬೇಡಬೇಕಾಗಿತ್ತು. ಈ ಸಂಪ್ರದಾಯವನ್ನು ಕೊರಗರು ದಿಟ್ಟವಾಗಿ ಮುರಿಯುವಲ್ಲಿ ಯಶಸ್ವಿಯಾದರು.

೮. **ಬಾರ್ಕೂರು ಮಾರಿಗೆ ಆಮಂತ್ರಣ ಹಾಗೂ ಸಂಬಳವಿಲ್ಲದಿರುವುದನ್ನು ಅನುಸರಿಸಿ ಮಾರಿಯ ದಿನ ರಾತ್ರಿ ೧೧ ಗಂಟೆಯವರೆಗೂ ಮಾರಿಕಟ್ಟೆಗೆ ಹೋಗದೆ ಕೊನೆಗೆ ಊರ ಮಂದಿ**

**ಪಂಚಾಯಿತಿಕೆ ಮಾಡುತ್ತೇವೆಂದು ಹೇಳಿದಾಕ್ಷಣ ಹೋಗಲಾಯಿತು. ಮರುದಿನ ನಡೆದ ಪಂಚಾಯಿತಿಕೆ ಅಸ್ಪೃಶ್ಯತೆಯ ಬಗ್ಗೆ ರಾಜಿ ಮಾಡಿಕೊಳ್ಳಲು ನಿರಾಕರಿಸಿರುವುದರಿಂದ ಪಂಚಾಯಿತಿಕೆ ಮುರಿದು ಬಿತ್ತು. ಬಾರಕೂರಿನಲ್ಲಿ ಮೊದಲ ಬಾರಿಗೆ ಕೊರಗರು ಡೋಲಿನ ಕೆಲಸಕ್ಕೆ ಸಂಭಾವನೆ ಪಡೆದುಕೊಂಡರು.**

ಇದುವರೆಗೆ ದುಡಿದ ಕೆಲಸ ಕಾರ್ಯಗಳಿಗೆ ಮೇಲ್ವರ್ಗದವರು ನೀಡಿದಷ್ಟು ಪಡೆದುಕೊಂಡ ಕೊರಗರು ಸರಿಯಾದ, ಸಮರ್ಪಕವಾದ ಸಂಬಳ ನೀಡಿದರೆ ಮಾತ್ರ ಮಾರಿಹಬ್ಬದಲ್ಲಿ ಡೋಲು ವಾದನ ಮಾಡುತ್ತೇವೆ ಎಂಬ ಪಟ್ಟು ಹಿಡಿದರು. ಊರಿನ ಪ್ರಮುಖರ ಪಂಚಾಯಿತಿ ನಡೆದರೂ ಮೊದಮೊದಲು ಕೊರಗರ ಬೇಡಿಕೆಗಳನ್ನು ಒಪ್ಪಿಕೊಳ್ಳ ದಿರುವುದನ್ನು ಗಮನಿಸಿದರೆ ಮೇಲ್ವರ್ಗವರ ಮನೋಭಾವನೆ ಅರ್ಥವಾಗುತ್ತದೆ. ಅಂತಿಮವಾಗಿ ಸಂಬಳ ಕೊಟ್ಟು ಕೊರಗರ ಡೋಲುವಾದನ ನಡೆಸಲು ಒಪ್ಪಿಗೆ ಸೂಚಿಸಿತು. ಈ ಹಿನ್ನೆಲೆಯಲ್ಲಿ ಮೊದಲಬಾರಿಗೆ ಕೊರಗರು ತಮ್ಮ ಡೋಲುವಾದನಕ್ಕೆ ಸಂಬಳ ಪಡೆದರು.

೯. **ಬೈದಬೆಟ್ಟುವಿನಲ್ಲಿ ಪಾಯಿಖಾನೆ ಸ್ವಚ್ಛಗೊಳಿಸುವಂತೆ ಊರ ಮಂದಿಯ ಒತ್ತಡ, ಜನರಿಂದ ವಿರೋಧ, ಕೊನೆಗೂ ಬೇರೆ ಕಡೆಯಿಂದ ಕೊರಗ ಜನರನ್ನು ತರಿಸಿ ಪಾಯಿಖಾನೆ ಸ್ವಚ್ಛಗೊಳಿಸಿರುವುದಕ್ಕೆ ಜನ ವಿರೋಧ.**

ಊರಿನ ಮೇಲ್ವರ್ಗದವರ ಪಾಯಿಖಾನೆಗಳನ್ನು ಸ್ವಚ್ಛಗೊಳಿಸುತ್ತಾ ಬಂದಿದ್ದ ಕೊರಗರು ಈಗ ವಿರೋಧ ವ್ಯಕ್ತಪಡಿಸಿದರು. ಇದನ್ನು ಗಮನಿಸಿದ ಮೇಲ್ವರ್ಗದವರು ಬೇರೆ ಊರಿನ ಕೊರಗರನ್ನು ಕರೆಯಿಸಿ ಪಾಯಿಖಾನೆ ಸ್ವಚ್ಚಗೊಳಿಸುವ ಕಾರ್ಯಕ್ಕೆ ಮುಂದಾದರು. ಇದನ್ನು ಗಮನಿಸಿದ ಕೊರಗರು ಪ್ರತಿರೋಧ ವ್ಯಕ್ತಪಡಿಸಿ ಬೇರೆ ಊರಿನ ಕೊರಗರು ಈ ಕೆಲಸಕಾರ್ಯಗಳಲ್ಲಿ ಪಾಲ್ಗೊಳ್ಳದಂತೆ ಮನವೊಲಿಸಿದರು.

೧೦. **ಜನರಿಂದ ಇನ್ನು ಮುಂದೆ ಸ್ವಚ್ಛತೆಯ ಕೆಲಸಗಳಿಗೆ, ನಾಯಿ ಕೊಲ್ಲುವ ಇತ್ಯಾದಿ ಅನಿಷ್ಟ ಕೆಲಸಗಳಿಗೆ ಹೋಗುವುದಿಲ್ಲವೆಂಬ ತೀರ್ಮಾನ.**

ಊರಿನಲ್ಲಿ ಸತ್ತು ಹೋಗಿರುವ ಪ್ರಾಣಿಗಳನ್ನು ಬೇರೆಡೆಗೆ ಸಾಗಿಸುವ ಅತ್ಯಂತ ಕೆಳಮಟ್ಟದ ಕಾರ್ಯಗಳಲ್ಲಿ ಕೊರಗರನ್ನು ಬಳಸಿಕೊಳ್ಳುತ್ತಿದ್ದ ಜನರಿಗೆ ಕೊರಗರು ತಕ್ಕಪಾಠ ಕಲಿಸಿದರು. ಇನ್ನು ಮುಂದೆ ಇಂತಹ ಕೆಲಸಕಾರ್ಯಗಳನ್ನು ನಾವು ಮಾಡುವುದಿಲ್ಲವೆಂದು ವಾಗ್ದಾನ ಮಾಡಿದರು.

**೧೧. ಹೆಜಮಾಡಿ ನೇಮೋತ್ಸವದಲ್ಲಿ ಡೋಲು ಚಾಕ್ರಿಯ ವಿರುದ್ಧ ಪೊಲೀಸರಿಗೆ ದೂರು ನೀಡಲಾಯಿತು.**

ಅಜಲು ಚಾಕ್ರಿಗಳ ಬಗೆಗೆ ಕೊರಗರು ಎಷ್ಟೇ ಪ್ರತಿರೋಧ ವ್ಯಕ್ತಪಡಿಸಿದರೂ ಕರಾವಳಿ ಕರ್ನಾಟಕದ ಮುಂದುವರೆದ ಸಮುದಾಯಗಳು ಒಪ್ಪಿಕೊಳ್ಳಲು ಹಿಂದೇಟು ಹಾಕುತ್ತಿದ್ದುದನ್ನು ನಾವು ಇಲ್ಲಿ ಗಮನಿಸಬಹುದು. ಈ ಮೊದಲು ಬಾರಕೂರಿನಲ್ಲಿ ಡೋಲು ವಾದನಕ್ಕೆ ವಿರೋಧ ವ್ಯಕ್ತಪಡಿಸಿದರೂ ನಂತರ ಹೆಜ ಮಾಡಿಯ ನೇಮೋತ್ಸವದಲ್ಲಿ ಡೋಲು ಚಾಕ್ರಿಗೆ ಕೊರಗರನ್ನು ಬಳಸಿಕೊಳ್ಳಲು ಊರಿನ ಜನ ಪ್ರಯತ್ನಿಸಿದರು. ಇದನ್ನು ಸಹಿಸದ ಕೊರಗರು ಪೊಲೀಸರಿಗೆ ದೂರು ನೀಡುವ ಮೂಲಕ ಮತ್ತೊಂದು ಹಂತದ ಕಾನೂನಿನಾತ್ಮಕವಾದ ಪ್ರತಿಭಟನೆಯನ್ನು ಪ್ರಾರಂಭಿಸಿದರು.

**೧೨. ವಡ್ಡಬೆಟ್ಟ ಕಂಬಳದಲ್ಲಿ ಅಜಲು ಚಾಕ್ರಿಯನ್ನು ನಿಲ್ಲಿಸಲಾಯಿತು. ಊರ ಮಂದಿಯಿಂದ ಎಲ್ಲಾ ದೇವರಿಗೂ ತಪ್ಪು ಮಂಡನೆ.**

ಒಂದು ಕಡೆ ಅಜಲು ಚಾಕ್ರಿಗೆ ಕೊರಗರಿಂದ ವಿರೋಧ-ಪ್ರತಿಭಟನೆ ನಿರಂತರವಾಗಿ ನಡೆಯುತ್ತಿದ್ದರೂ. ಮತ್ತೊಂದು ಕಡೆ ಕಂಬಳ, ನೇಮ, ಜಾತ್ರೆ, ಸಂಪ್ರದಾಯಗಳಲ್ಲಿ ಅಜಲು ಚಾಕ್ರಿಗೆ ಬರಲು ಊರಿನ ಮೇಲ್ವರ್ಗದವರಿಂದ ಆಹ್ವಾನ ಬರುತ್ತಲೇ ಇರುವುದನ್ನು ಗಮನಿಸಬೇಕಾದ ವಿಚಾರ. ತಮ್ಮ ನಿಷ್ಠೆಗೆ ತಮ್ಮ ತೀರ್ಮಾನಕ್ಕೆ ಬದ್ಧರಾದ ಕೊರಗರು ವಡ್ಡಬೆಟ್ಟ ಕಂಬಳದ ಅಜಲು ಚಾಕ್ರಿಯನ್ನು ವಿರೋಧಿಸಿದರು. ಅಸಹಾಯಕತೆಯನ್ನು ವ್ಯಕ್ತಪಡಿಸಿದ ಊರಿನ ಪ್ರಮುಖರು ದೈವದ ಮುಂದೆ ತಪ್ಪು ಮಂಡನೆ ಮಾಡಿದರು.

**೧೩. ಕೆಂಜೂರು, ಕೊಕ್ಕರ್ಣೆ ಆಸುಪಾಸಿನ ಎಲ್ಲ ಮಾರಿಗಳಿಗೆ ಅಜಲು ಚಾಕ್ರಿಯನ್ನು ನಿಲ್ಲಿಸಲಾಯಿತು.**

ಪ್ರತಿಯೊಂದು ಊರಿನ ಮಾರಿ ದಾಟಿಸುವ ಪ್ರಕ್ರಿಯೆಯಲ್ಲಿ ನಿರಂತರವಾಗಿ ಪಾಲ್ಗೊಳ್ಳುತ್ತಿದ್ದ ಕೊರಗರು ಸಂಪೂರ್ಣವಾಗಿ ಅಜಲು ಚಾಕರಿಯನ್ನು ನಿಲ್ಲಿಸುವ ವಾಗ್ದಾನ ಮಾಡಿದರು. ಕೆಂಜೂರು, ಕೊಕ್ಕರ್ಣೆ ಮತ್ತು ಇತರೆ ಊರಿನ ಮಾರಿ ಓಡಿಸುವ ಪ್ರಕ್ರಿಯೆಯಲ್ಲಿ ಕೊರಗರು ಪಾಲ್ಗೊಳ್ಳಲಿಲ್ಲ.

**೧೪. ವಂಡಾರು ಕಂಬಳದಲ್ಲಿ ಸುಮಾರು ೨೦೦ರಷ್ಟಿದ್ದ ಕೊರಗರ ವೇಷಗಳಿಗೆ ಈ ವರ್ಷ(೧೯೯೮-೯೯) ಪೂರ್ಣವಿರಾಮ.**

ಇತಿಹಾಸ ಪ್ರಸಿದ್ಧ ವಂಡಾರು ಕಂಬಳವೊಂದರಲ್ಲಿಯೇ ಪ್ರತಿವರ್ಷ ಸರಿಸುಮಾರು ೨೦೦ ಜನ ಕೊರಗರು ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ಅದನ್ನು ಸಂಪೂರ್ಣ ನಿಷೇಧಿಸಿದರು.

**೧೫. ಶಿಬರೂರು ಜಾತ್ರೆಯಲ್ಲಿ ಅಜಲು ಚಾಕ್ರಿಗೆ ಬಳಸಿದ ಡೋಲುಗಲನ್ನು ಪೊಲೀಸರಿಂದ ಮುಟ್ಟುಗೋಲು ಹಾಕಿಸಲಾಯಿತು.**

ತಮ್ಮ ಪ್ರಯತ್ನವನ್ನು ಮುಂದುವರಿಸಿದ ಊರಿನ ಮೇಲ್ವರ್ಗದ ಜನರಿಗೆ ಕೊರಗರು ಒಟ್ಟಾಗಿ ವಿರೋಧ ವ್ಯಕ್ತಪಡಿಸಿದರು. ಒತ್ತಾಯಪೂರ್ವಕವಾಗಿ ಬಳಸಿಕೊಂಡ ಕೊರಗರ ಡೋಲುಗಳನ್ನು ಪೊಲೀಸರ ಮೂಲಕ ಮುಟ್ಟುಗೋಲು ಹಾಕಿಸಲಾಯಿತು.

**೧೬. ಮೂಲ್ಕಿ ಅರಸು ಕಂಬಳದಲ್ಲಿ, ಕಂಬಳದ ಗದ್ದೆಯ ಸುತ್ತ ನೂರಾರು ಸಂಖ್ಯೆಯಲ್ಲಿ ಕೊರಗರು ಸೇರಿ ಅಜಲು ಚಾಕ್ರಿಯನ್ನು ವಿರೋಧಿಸಿದರು.**

ಅವಿಭಜಿತ ಜಿಲ್ಲೆಯಾದ್ಯಂತ ನಡೆಯುವ ಕಂಬಳಗಳಲ್ಲಿ ನೂರಾರು ಸಂಖ್ಯೆಯಲ್ಲಿ ಕೊರಗರು ಜಮಾಯಿಸಿ ಅಜಲು ಚಾಕ್ರಿಯನ್ನು ವಿರೋಧಿಸುವ ನಿಟ್ಟಿನಲ್ಲಿ ಕಾರ್ಯೋನ್ಮುಖರಾದರು.

**೧೭. ಕಟಪಾಡಿ ಕಂಬಳದ ದಿನ ಅಜಲು ಚಾಕ್ರಿಯನ್ನು ವಿರೋಧಿಸಿ ಮಾನವ ಸರಪಳಿ ರಚಿಸಿ ಪ್ರತಿಭಟನೆ ನಡೆಸಲಾಯಿತು.**

ಹೀಗೆ ನಿರಂತರವಾಗಿ ಹೋರಾಟ ಮಾಡಿದ ಕೊರಗರಿಗೆ ೨೦೦೦ನೇ ಆಗಸ್ಟ್ ೧೭ರಂದು ಅಜಲು ಪದ್ಧತಿ ನಿಷೇಧ ಕಾಯ್ದೆ ಅಧಿಕೃತವಾಗಿ ಸುಗ್ರಿವಾಜ್ಞೆಯ ರೂಪದಲ್ಲಿ ಜಾರಿಗೆ ಬಂದ ಶುಭ ಸುದ್ದಿ ತಿಳಿಯಿತು. ಕೊರಗರ ಸಾಮಾಜಿಕ ಬದಲಾವಣೆಯಲ್ಲಿ ಅಜಲು ಪದ್ಧತಿ ನಿಷೇಧ ಅತ್ಯಂತ ಪ್ರಮುಖವಾದುದು. ಈ ಹಿನ್ನೆಲೆಯಲ್ಲಿಯೇ ಲೇಖಕ ಬಾಬು ಕೊರಗ ಪಾಂಗಾಳ ಅವರು ನೀಡಿದ ಅಜಲು ಪದ್ಧತಿ ನಿಷೇಧದ ವಿವಿಧ ಹಂತಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ. ನೂರಾರು ವರ್ಷಗಳಿಂದ ಪರಂಪರೆ, ದೈವ-ದೇವರು, ನಂಬಿಕೆ ಹೀಗೆ ನಾನಾ ರೂಪಗಳಿಂದ ಕೊರಗರನ್ನು ನಂಬಿಸಿಕೊಂಡು ಅವರಿಂದ ಚಾಕ್ರಿಗಳನ್ನು ಮಾಡಿಸಿಕೊಂಡು ಬಂದ

ಇತರೆ ಮೇಲ್ವರ್ಗದ ಜನರಿಗೆ ಸರಿಯಾದ ಪಾಠ ಕಲಿಸಿದಂತಾಯಿತು. ದೈವ–ದೇವರ ಶಾಪ, ತಪ್ಪು ಮಂಡನೆ ಇತ್ಯಾದಿಗಳಲ್ಲಿ ಹುರುಳಿಲ್ಲ ಎಂಬುದು ಮನವರಿಕೆಯಾಯಿತು. ಅನೇಕ ಊರುಗಳಲ್ಲಿ ಕೊರಗರಿಗೆ ನಿಮಗೆ ದೈವದ–ದೇವರ ಶಾಪ ತಟ್ಟುತ್ತದೆ. ಸರ್ವನಾಶ ಆಗುತ್ತೀರಿ; ಕುಟುಂಬ ನಾಶವಾಗುತ್ತದೆ ಎಂಬಿತ್ಯಾದಿ ಕುಂಟು ನೆಪ, ಮೂಢನಂಬಿಕೆಗಳನ್ನು ಬಿತ್ತಿ ಬೆದರಿಸುತ್ತಿದ್ದ ಜನರು ನಿಷೇಧ ಕಾಯ್ದೆ ಜಾರಿಯಾದಾಗ ತುಟಿ ಪಿಟಕ್ಕೆನ್ನದೇ ತಮ್ಮ ದಾರಿ ನೋಡಿಕೊಂಡಿರುವುದು ನಿಜಕ್ಕೂ ಅತ್ಯಂತ ಹರ್ಷದಾಯಕ ವಿಚಾರ.

ಅಧ್ಯಾಯ ಆರು

# ಸಮಾರೋಪ

'ಸಾಮಾಜಿಕ ಬದಲಾವಣೆಯಲ್ಲಿ ಕೊರಗರು' ಎಂಬ ಶೀರ್ಷಿಕೆ ಪ್ರಸ್ತುತ ಮಹಾಪ್ರಬಂಧದಲ್ಲಿ ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿ ವಾಸವಾಗಿರುವ ಆದಿಮ ಬುಡಕಟ್ಟು ಸಮುದಾಯವಾದ ಕೊರಗರಲ್ಲಿ ಆಗಿರುವ ಬದಲಾವಣೆಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. 'ಕೊರಗರನ್ನು ಆದಿಮ ಬುಡಕಟ್ಟು' ಎಂದು ವರ್ಗೀಕರಿಸಲಾಗಿದ್ದು, ಕರಾವಳಿ ಕರ್ನಾಟಕದ ಮೂಲನಿವಾಸಿಗಳಿರುವರು. ಸಾವಿರಾರು ವರ್ಷಗಳಿಂದ ಕಾಡುಗಳಲ್ಲಿ ಮತ್ತು ಕಾಡಿನ ಬದುಗಳಲ್ಲಿ ವಾಸಿಸುತ್ತ ಬಂದವರು. ಕಾಡಿನ ಗಿಡ, ಮರ, ಬಳ್ಳಿಗಳನ್ನು ಉಪಯೋಗಿಸಿಕೊಂಡು ವಿವಿಧ ಕಲಾತ್ಮಕ ಬುಟ್ಟಿಗಳನ್ನು ಹೆಣೆದು, ಮಾರಾಟ ಮಾಡಿ ಬಂದ ಅಲ್ಪ ಹಣವನ್ನು ಉಪಯೋಗಿಸಿಕೊಂಡು ಜೀವನ ಮಾಡಿದವರು. ಸ್ವಚ್ಛಂದ ಜೀವನಕ್ಕೆ ಹೆಸರಾದ ಜಗತ್ತಿನ ಬುಡಕಟ್ಟುಗಳಂತೆ ಕೊರಗರೂ ಸ್ವಚ್ಛಂದವಾಗಿಯೂ ಜೀವನ ಸಾಗಿಸಿದವರು. ಬದಲಾದ ಕಾಲಮಾನದಲ್ಲಿ ತಮ್ಮ ಮೂಲ ನೆಲೆಯನ್ನು ಕಳೆದುಕೊಳ್ಳಬೇಕಾಗಿ ಬಂದುದು ಕೊರಗರ ಪಾಲಿಗೆ ಅತ್ಯಂತ ದುರದೃಷ್ಟಕರ ಸಂಗತಿಯೇ ಸರಿ. ಕಾರಣ ಸಾವಿರಾರು ವರ್ಷಗಳಿಂದ ಅನೇಕ ತಲೆಮಾರುಗಳನ್ನು ಅಲ್ಲಿಯೇ ಕಳೆದ ಕೊರಗರಿಗೆ ತಕ್ಷಣ ವಾಸದ ನೆಲೆಯನ್ನು ಬಿಡಬೇಕಾಗಿ ಬಂದಿದೆ ಎಂಬ ಕಲ್ಪನೆಯೇ ಇರಲಿಲ್ಲ. ಸಮಾಜದ ಅಭಿವೃದ್ಧಿ ಹೊಂದಿದ ಜನಸಮುದಾಯಗಳ, ಆಡಳಿತದ ಅಭಿವೃದ್ಧಿ ಮಂತ್ರಕ್ಕೆ ಬಲಿಯಾದರು. ಹಾಗೆಯೇ ತಮ್ಮ ನೆಚ್ಚಿನ ಕುಲಕಸುಬನ್ನು ಬಿಡಬೇಕಾಯಿತು. ಕುಲಕಸುಬನ್ನು ಮರೆಯಬೇಕಾಯಿತು. ಹೊಟ್ಟೆಪಾಡಿಗಾಗಿ ಉಳ್ಳವರ, ಶ್ರೀಮಂತರ ಮನೆ ತೋಟಗಳಲ್ಲಿ

ಜೀತಗಾರರಾಗಬೇಕಾಯಿತು. ಇದರಿಂದಾಗಿ ಸ್ವಚ್ಛಂದ ಬದುಕನ್ನು ಅನುಭವಿಸಿದ ಕೊರಗರ ತೀರಾ ಕೆಳಮಟ್ಟದ ಜೀವನ ಮಾಡಬೇಕಾಯಿತು.

ಕರಾವಳಿ ಕರ್ನಾಟಕದ ಆದಿಮ ಬುಡಕಟ್ಟು ಎಂದು ಕರೆಯಲ್ಪಟ್ಟು ಕೊರಗರು ಸ್ವಾತಂತ್ರ್ಯ ಬಂದು ಎಪ್ಪತ್ತು ದಶಕಗಳು ಕಳೆದರೂ ಸಮಾಜದ ಮುಖ್ಯವಾಹಿನಿಯಲ್ಲಿ ಸ್ಥಾನ ಪಡೆಯದಿರುವುದು ಅತ್ಯಂತ ವಿಪರ್ಯಾಸದ ಸಂಗತಿಯೇ ಸರಿ. ಮಾನವೀಯ ಗುಣಗಳನ್ನು ಹೊಂದಿರುವ, ದುರಾಸೆ–ವಂಚನೆಯ ಲವಶೇಷಗಳನ್ನು ತಿಳಿಯದ, ತಮ್ಮ ಪಾಡಿಗೆ ತಾವು ಜೀವನ ಮಾಡುತ್ತಾ ಬಂದಿದ್ದ ಕೊರಗರನ್ನು, ಕೊರಗ ಸಮುದಾಯವನ್ನು ಸಮಾಜ ಅರ್ಥ ಮಾಡಿಕೊಳ್ಳದಿರುವುದು ದುರಂತ. ಬಲಾಢ್ಯ ಜನಸಮುದಾಯಗಳು ಅಲ್ಪಸಂಖ್ಯಾತ ಜನಸಮುದಾಯಗಳನ್ನು ಕೀಳಾಗಿ ಕಾಣುತ್ತ ತಮ್ಮ ಮೂಗಿನ ನೇರಕ್ಕೆ ಜೀವನ ಮಾಡುವಂತೆ ಅಧಿಕಾರ ಸಾಧಿಸುತ್ತ, ತಮ್ಮೆಲ್ಲ ಕೆಲಸಕಾರ್ಯಗಳಿಗೆ ಆಳುಗಳನ್ನಾಗಿಸುತ್ತಾ ಬಂದಿರುವುದು ಇತಿಹಾಸ. ಎಂಬ ಮಾತಿನಂತೆ ಬಲಾಢ್ಯ ಪ್ರಾಣಿಗಳು ಜಗತ್ತಿನಲ್ಲಿ ಉಳಿದುಕೊಳ್ಳತ್ತವೆ. ಆದರೆ ಜಗತ್ತಿನಲ್ಲಿಯೇ ಅತ್ಯಂತ ಬುದ್ಧಿವಂತ ಪ್ರಾಣಿಯಾದ ಮನುಷ್ಯ ತನ್ನಂತಿರುವ ಮನುಷ್ಯರನ್ನು ಗುಲಾಮರನ್ನಾಗಿಸುವ, ಸಂತತಿಯನ್ನು ನಾಶ ಮಾಡಿಸುವ ಮಟ್ಟಕ್ಕೆ ತಲುಪಬಾರದಿತ್ತು. ಈ ಮೇಲು–ಕೀಳು, ಲಿಂಗತಾರತಮ್ಯ, ಜನಾಂಗೀಯ ತಾರತಮ್ಯಗಳೆಲ್ಲವೂ ಇಂದಿನ ತಂತ್ರಜ್ಞಾನದ ಯುಗದಲ್ಲೂ ಮುಂದುವರೆಯುತ್ತಿರುವುದನ್ನು ಕೊರಗ ಬುಡಕಟ್ಟೊಂದನ್ನು ಅಧ್ಯಯನ ಮಾಡಿದಾಗ ತಿಳಿದುಬರುತ್ತದೆ.

ಸಮಾಜದ ನಂಬಿಕೆ ನಿಷೇಧಗಳಿಗೆ ಒಳಗಾಗಬೇಕಾಗಿ ಬಂದುದು ಕೊರಗರ ಪಾಲಿಗೆ ಪ್ರಾಣಿಗಿಂತ ಕೀಳಾದ ಜೀವನದ ದರ್ಶನವನ್ನು ಒದಗಿಸಿತು. ಅಲ್ಪಸಂಖ್ಯಾತರಾದ, ಬುಡಕಟ್ಟು ಸಮುದಾಯವಾದ ಕೊರಗರಿಗೆ ಉದ್ಧರಿಸುವವರು ಯಾರು ಇಲ್ಲ ಎಂಬ ಕೀಳರಿಮೆ ಉಂಟಾಯಿತು. ಅಭಿವೃದ್ಧಿ ಎಂಬ ಪರಿಭಾಷೆಯೇ ಕೊರಗರಿಗೆ ಅರ್ಥವಾಗಲಿಲ್ಲ. ಕಾರಣ ಕೊರಗರು ಅತ್ಯುತ್ತಮ ಮಾನವೀಯ ಗುಣವನ್ನು ಉಳ್ಳವರಾಗಿದ್ದರು. ಕೂಡಿಡುವ, ದುರಾಸೆಯ, ವಂಚನೆಯ, ಮೋಸದ ಜೀವನ ಕೊರಗರಿಗೆ ಗೊತ್ತಿಲ್ಲ. ಹಾಗಾಗಿ ಅವರನ್ನು ಅತ್ಯಂತ ಸುಲಭವಾಗಿ ಇತರೆ ಸಮುದಾಯದವರು ವಂಚಿಸಲು ಸಾಧ್ಯವಾಯಿತು. ತಮ್ಮತನವನ್ನು, ತಮ್ಮ ಅನನ್ಯತೆಯನ್ನು ಯಾರು ಗುರುತಿಸಲು ಸಾಧ್ಯವಾಗಲಿಲ್ಲ ಎಂಬ ಕೊರಗೂ ಕೊರಗರಿಗೆ ಇಲ್ಲ. ಅಜಲು ಪದ್ಧತಿ, ರೋಗ ದಾಟಿಸುವ ಪದ್ಧತಿ ಎಂಬೆಲ್ಲ ಅಮಾನುಷ

ಪದ್ಧತಿಗಳಿಗೆ ಯಾವುದೇ ರೀತಿಯ ವಿರೋಧ ವ್ಯಕ್ತಪಡಿಸದೇ ವಿಧೇಯತೆಯನ್ನು ವ್ಯಕ್ತಪಡಿಸಿದರು ಕೊರಗರು.

ಮಾನವ ಇತಿಹಾಸದಷ್ಟೇ ಇತಿಹಾಸವನ್ನು ಹೊಂದಿರುವ ಕೆಲವೊಂದು ಸಂಪ್ರದಾಯ, ಆಚರಣೆ, ನಂಬಿಕೆ, ನಿಷೇಧಗಳು ಮನುಷ್ಯ-ಮನುಷ್ಯರ ಮಧ್ಯೆ ದ್ವೇಷ, ಅಸೂಯೆಗಳನ್ನು, ಮೇಲು-ಕೀಳುಗಳೆಂಬ ಅಂತರವನ್ನು ಸೃಷ್ಟಿಸಿದವು. ಅದಕ್ಕೆ ಅತ್ಯುತ್ತಮ ಉದಾಹರಣೆಯೆಂದರೆ ಕೊರಗರ ಅಜಲು ಪದ್ಧತಿ. ಕಾಡುಗಳಲ್ಲಿ ಸ್ವಚ್ಛಂದ ಬದುಕು ಕಟ್ಟಿಕೊಂಡಿದ್ದ ಕೊರಗರನ್ನು ಬುದ್ಧಿವಂತರೆನಿಸಿಕೊಂಡ, ನಾಗರಿಕರೆನಿಸಿಕೊಂಡ ಮುಂದುವರಿದ ಸಮುದಾಯಗಳ ಕಾಡುಗಳ ಆಪೋಷಣ ತಂತ್ರ ಅತಂತ್ರರನ್ನಾಗಿಸಿತು. ಅಭಿವೃದ್ಧಿಯೆಂಬ ನೆಪಗಳನ್ನೊಡ್ಡಿ ಕಾಡುಗಳಲ್ಲಿನ ಪ್ರಾಣಿ-ಪಕ್ಷಿ ಮತ್ತು ಬುಡಕಟ್ಟು ಜನರನ್ನು ಪರತಂತ್ರಗಳನ್ನಾಗಿಸುವ ಹುನ್ನಾರಗಳನ್ನು ಬುಡಕಟ್ಟು ಜನರು ಅರಿಯರಾದರು. ಕಾಡಿನಿಂದ ಹೊರದಬ್ಬಲ್ಪಟ್ಟ ಕೊರಗರಿಗೆ ಯಾವ ಕಸುಬು ಮಾಡಿ ಹೊಟ್ಟೆ ತುಂಬಿಸಿಕೊಳ್ಳಬೇಕೆಂಬ ತುರ್ತು ಪರಿಸ್ಥಿತಿಗಳು ಉಂಟಾದವು. ಗುಲಾಮತನ, ಅಸ್ಪೃಶ್ಯತೆ ಮತ್ತು ಇನ್ನಿತರ ನಂಬಿಕೆ ನಿಷೇಧಗಳಿಂದ ನಲುಗಿಹೋದ ಕೊರಗರು ಕ್ರಮೇಣ ಸಮಾಜದ ಒಳನೋಟಗಳನ್ನು, ಸಮಾಜ ತಮ್ಮನ್ನು ನಡೆಸಿಕೊಳ್ಳುವ ರೀತಿಗಳನ್ನು ಸಮಾಜದವರ ಒಳಮರ್ಮವನ್ನು ಅರಿತುಕೊಂಡರು. ತಡವಾಗಿಯಾದರೂ ಬಲಾಢ್ಯರನ್ನು, ಬಲಾಢ್ಯರ ಕುಟಿಲ ನೀತಿ-ತಂತ್ರಗಳನ್ನು ಪ್ರಶ್ನಿಸುವ ಧೈರ್ಯವನ್ನು ತೋರಿಸಿದರು. ಇದು ಕೊರಗರಲ್ಲಾದ ಅತ್ಯಂತ ಪ್ರಮುಖ ಬದಲಾವಣೆಯಾಗಿ ಎಲ್ಲದಕ್ಕೂ ಕಾಲವೇ ಉತ್ತರ ನೀಡುತ್ತದೆ ಎಂಬಂತೆ ತಮ್ಮನ್ನು ತಮ್ಮ ಜೀವನವನ್ನು ನಿರ್ದೇಶಿಸುತ್ತಿದ್ದ ಜನಸಮುದಾಯದವರ ವಿರುದ್ಧ ಹೋರಾಟ ಮಾಡಿ ಅಮಾನವೀಯ ಅಜಲು ಪದ್ಧತಿಯನ್ನು ಸರ್ಕಾರ ನಿಷೇಧಿಸುವಂತಾದುದು ಕೊರಗರ ಸ್ವಾಭಿಮಾನವನ್ನು ಎತ್ತರಿಸಿದ ಬದಲಾವಣೆ ಯಾಗಿದೆ.

ಬದಲಾದ ಕಾಲಘಟ್ಟದಲ್ಲಿ ಕೊರಗರು ಬದಲಾಗಿದ್ದಾರೆ, ಬದಲಾಗುತ್ತಿದ್ದಾರೆ. ಸಾಮಾಜಿಕ ವಾಗಿ, ಆರ್ಥಿಕವಾಗಿ, ಧಾರ್ಮಿಕವಾಗಿ ಹೀಗೆ ಎಲ್ಲಾ ಕ್ಷೇತ್ರಗಳಲ್ಲಿ ಕೊರಗರು ಬದಲಾಗುತ್ತಿದ್ದಾರೆ. ಕೊರಗರ ಜೀವನಾವರ್ತನ, ವಾರ್ಷಿಕಾವರ್ತನ ಆಚರಣೆಗಳಲ್ಲಿ ಬದಲಾವಣೆಗಲಾಗಿವೆ. ಕೀಳರಿಮೆ ಪ್ರಜ್ಞೆಯ ಆಚರಣೆಗಳು, ನಂಬಿಕೆ-ನಿಷೇಧಗಳು ಕಣ್ಮರೆಯಾಗಿವೆ. ಅಜಲಿನಂತಹ ಆಚರಣೆಗಳ ವಿರುದ್ಧ ಧ್ವನಿಯೆತ್ತಿ, ಆಕ್ಷೇಪ ವ್ಯಕ್ತಪಡಿಸುವಂತಹ, ಹೋರಾಟಕ್ಕಿಳಿಯುವಂತಹ ಬದಲಾವಣೆ ಕೊರಗರಲ್ಲಿ ಕಂಡುಬಂದಿದೆ. ಮೂಲ ಕಸುಬುಗಳು ಸ್ಥಿತ್ಯಂತರಗೊಂಡಿವೆ.

ಸರ್ಕಾರದ ಅನೇಕ ಯೋಜನೆಗಳು ಕಾರ್ಯರೂಪಕ್ಕೆ ಬಂದಿದ್ದರೆ. ಇನ್ನು ಕೆಲವು ಯೋಜನೆಗಳು ಅನುಷ್ಠಾನಗೊಳ್ಳದಿರುವುದು ಅಧ್ಯಯನದಿಂದ ತಿಳಿದುಬರುತ್ತದೆ. ಆರೋಗ್ಯ, ಶಿಕ್ಷಣ, ಸಂಘಟನೆಗಳಂಥ ಕ್ಷೇತ್ರದಲ್ಲಿ ಬದಲಾವಣೆಗಳನ್ನು ಕೊರಗರು ಕಂಡಿದ್ದಾರೆ, ಕಾಣುತ್ತಿದ್ದಾರೆ. ಆದರೂ ಸಂಧಿಸುವಂಥದ್ದು ಬಹಳಷ್ಟು ಬಹಳಷ್ಟಿದೆ. ಪ್ರಸ್ತುತ ಅಧ್ಯಯನದಲ್ಲಿ ಕೊರಗರ ಬದಲಾವಣೆ ಬಗೆಗೆ ವಿಶ್ಲೇಷಣೆ ಮಾಡಲಾಗಿದೆ. ಒಟ್ಟು ಆರು ಅಧ್ಯಾಯಗಳಲ್ಲಿ ಸಾಮಾಜಿಕ ಬದಲಾವಣೆಯಲ್ಲಿ ಕೊರಗರನ್ನು ವಿಶ್ಲೇಷಿಸಲಾಗಿದೆ. ಕ್ಷೇತ್ರಕಾರ್ಯ, ಆನುಷಂಗಿಕ ಆಕರ ಮಾಹಿತಿಗಳ ಆಧಾರಗಳಿಂದ ಕೊರಗರ ಬದಲಾವಣೆಗಳನ್ನು ಪ್ರಸ್ತುತ ಮಹಾಪ್ರಬಂಧದಲ್ಲಿ ವಿಶ್ಲೇಷಿಸಲಾಗಿದೆ.

**ಅಧ್ಯಯನದ ಫಲಿತಗಳು**

೧. ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಯಲ್ಲಿ ಅತ್ಯಂತ ಕನಿಷ್ಠ ಜನಸಂಖ್ಯೆಯನ್ನು ಹೊಂದಿರುವ ಸಮುದಾಯ ಕೊರಗರದ್ದಾಗಿದೆ. ಆದಿಮ ಬುಡಕಟ್ಟುಗಳಲ್ಲಿ ಒಂದಾದ ಕೊರಗರು ಅಭಿವೃದ್ಧಿ ಹಾದಿಯಲ್ಲಿದ್ದಾರೆ.

೨. ಕೊರಗರ ಮಾತೃಭಾಷೆ 'ಕೊರಗ' ನಶಿಸುತ್ತಿದೆ. ಸಮಾಜದಲ್ಲಿನ ಇತರೆ ಬಹುಸಂಖ್ಯಾತರ ಭಾಷೆಗಳ ಪ್ರಭಾವದಿಂದಾಗಿ ಮತ್ತು ಕೊರಗರ ಕೀಳರಿಮೆಯಿಂದಾಗಿ ಕೊರಗ ಭಾಷೆ ನಶಿಸುವ ಹಂತದಲ್ಲಿದೆ. ಕೊರಗರು ಅದರ ಬಗೆ ಮುತುವರ್ಜಿ ವಹಿಸಬೇಕಾಗಿದೆ.

೩. ಕೊರಗರ ಜೀವನಾವರ್ತನ ಆಚರಣೆಗಳಲ್ಲಿ ಆಧುನಿಕತೆಯ ಸ್ಪರ್ಶವಾಗುತ್ತಿದೆ. ಜನನ, ಮದುವೆ, ಸಾವು ಇನ್ನಿತರ ಆಚರಣೆಗಳಲ್ಲಿ ಬದಲಾವಣೆಗಳು ಕಂಡುಬರುತ್ತಿವೆ. ಕೊರಗರ ಹೆಸರುಗಳಲ್ಲಿ ಬದಲಾವಣೆ ಕಂಡುಬಂದಿದೆ. ಐದು ದಿನಗಳ ಮದುವೆ ಒಂದು ದಿನಕ್ಕೆ ಸೀಮಿತವಾಗಿದೆ.

೪. ವಾರ್ಷಿಕಾವರ್ತನ ಆಚರಣೆಗಳಲ್ಲಿ ಕೊರಗರು ಬದಲಾವಣೆಗಳನ್ನು ಬಯಸುತ್ತಿದ್ದಾರೆ. ಅಮಾನವೀಯ ಪದ್ಧತಿಯಾದ ಅಜಲು ಪದ್ಧತಿಯನ್ನು ಬಹುತೇಕ ಕೊರಗರು ನಿರಾಕರಿಸುತ್ತಿದ್ದಾರೆ. ಆದರೂ ಇನ್ನೂ ಕೆಲವು ಪ್ರದೇಶಗಳಲ್ಲಿ ಗೌಪ್ಯವಾಗಿ ನಡೆಯುತ್ತದೆ ಎಂದು ವಕ್ತೃಗಳು ಹೇಳುತ್ತಾರೆ.

೫. ಕೊರಗರಲ್ಲಿ ಹಿಂದಿನ ಕಾಲದ ಉಡುಗೆ-ತೊಡುಗೆಗಳಲ್ಲಿ ಬದಲಾವಣೆಯಾಗಿವೆ. ಯುವ ಪೀಳಿಗೆ ಇತರೆ ಸಮುದಾಯದವರನ್ನು ಅನುಕರಿಸುತ್ತಿದ್ದಾರೆ.

೭. ಬೇಟೆಯಾಡಿ ಕಾಡುಪ್ರಾಣಿಗಳನ್ನು ಆಹಾರವನ್ನಾಗಿ ಸ್ವೀಕರಿಸುವ ರೂಢಿ ಕೊರಗರ ಕೊರಗರಲ್ಲಿ ಕಡಿಮೆಯಾಗಿದೆ. ಮಾಂಸಹಾರದಂತೆಯೇ ಸಸ್ಯಾಹಾರಕ್ಕೆ ಪ್ರಾಮುಖ್ಯತೆ ಕೊಡುತ್ತಿದ್ದಾರೆ.

೮. ಕೊರಗರಲ್ಲಿ ಪಾರಂಪರಿಕ ವೈದ್ಯ ಪದ್ಧತಿ (ನಾಟಿವೈದ್ಯ)ಯ ಅವಲಂಬನೆ ಪ್ರಮಾಣ ಕಡಿಮೆಯಾಗಿದೆ. ಇತ್ತೀಚಿಗೆ ಆಸ್ಪತ್ರೆಗಳಲ್ಲಿ ಹೋಗುತ್ತಿದ್ದಾರೆ. ತಂತ್ರ-ಮಂತ್ರಗಳ ಚಿಕಿತ್ಸೆಯೂ ಕಡಿಮೆಯಾಗುತ್ತಿದೆ.

೯. ಕೊರಗರು ತಮ್ಮದೇ ಆದಂಥ 'ನಮ್ಮ ನ್ಯಾಯಾಲಯ'ವನ್ನು ಹೊಂದಿದ್ದಾರೆ. ಕುಟುಂಬದ ಗುರಿಕಾರನನ್ನು ಸೇರಿಸಿಕೊಂಡಂತೆ ಇದ್ದ ನ್ಯಾಯ ಪಂಚಾಯಿತಿ ಬದಲಾಗಿದೆ. ಬಹುತೇಕ ಸಮಸ್ಯೆ ಪ್ರಕರಣಗಳನ್ನು 'ನಮ್ಮ ನ್ಯಾಯಾಲಯ'ದಲ್ಲಿ ಬಗೆಹರಿಸುತ್ತಿದ್ದಾರೆ.

೯. ಯುವ ಪೀಳಿಗೆಯ ಕೊರಗರು ತಮ್ಮ ಹಿರಿಯರ ನಂಬಿಕೆ-ನಿಷೇಧಗಳನ್ನು ನಿರಾಕರಿಸುತ್ತಿದ್ದಾರೆ. ಶಿಕ್ಷಣ ಪಡೆದ ಫಲವಾಗಿ ಕೆಲವೊಂದು ಮೂಢನಂಬಿಕೆಗಳನ್ನು, ಅಮಾನವೀಯ ನಂಬಿಕೆ-ನಿಷೇಧಗಳನ್ನು ಪಾಲಿಸಲು ನಿರಾಕರಿಸುತ್ತಿದ್ದಾರೆ.

೧೦. ಬುಟ್ಟಿ ಹೆಣೆಯುವ ಕುಲಕಸುಬನ್ನು ಅಂದಾಜಿನ ಪ್ರಕಾರ ಶೇಕಡ ೨೫ರಷ್ಟು ಮಾತ್ರ ಕೊರಗರಲ್ಲಿ ಕಾಣಬಹುದು.

೧೧. ಕೊರಗರ ಸಾಂಸ್ಕೃತಿಕ ಕಲೆಗಳಿಗೆ ಸ್ಥಳೀಯರ ಮತ್ತು ಸರಕಾರದ ಸಹಕಾರ ಹೆಚ್ಚಾಗುತ್ತಿದೆ. ಕೊರಗರ ಡೋಲಿಗೆ ಸಾಂಸ್ಕೃತಿಕ ಗೌರವಗಳು ಹೆಚ್ಚಾಗಿವೆ. ಕೊರಗರ ಡೋಲನ್ನು ಅಸ್ಪೃಶ್ಯವಾಗಿ ಕಾಣುವುದು ಕಣ್ಮರೆಯಾಗುತ್ತಿವೆ. ಸರ್ಕಾರದ ಕಾರ್ಯಕ್ರಮಗಳು, ಶಾಲಾ ಕಾಲೇಜಿನ ಕಾರ್ಯಕ್ರಮಗಳು, ಹಬ್ಬ ಹರಿದಿನಗಳಲ್ಲಿ ಕೊರಗರ ಡೋಲಿಗೆ ಪ್ರಾಮುಖ್ಯತೆ ಹೆಚ್ಚಾಗಿದೆ. ಇಂದು ಕೊರಗರ ಡೋಲಿನ ಸಂಘಗಳನ್ನು ಕಾಣುತ್ತೇವೆ.

೧೨. ಕೊರಗರ ಜೀವನಕ್ಕಾಗಿ ಇಂದು ಸರ್ಕಾರ ಕೃಷಿ ಭೂಮಿಯನ್ನು ನೀಡುತ್ತಿದೆ. 'ಮಲ್ಲಿಗೆ ಕೃಷಿ' ಬೆಳೆಯಲು ತರಬೇತಿಯನ್ನು ನೀಡಲಾಗುತ್ತಿದೆ. ಈ ಮೂಲಕ ತಮ್ಮ ಜೀವನವನ್ನು ಉತ್ತಮಪಡಿಸಲು ಕೊರಗರಿಗೆ ಇದು ನೆರವಾಗಿದೆ. ಕೆಲವು ಕೊರಗರು 'ಮಲ್ಲಿಗೆ ಕೃಷಿ'ಯನ್ನು ಮಾಡದೇ ಭೂಮಿಯನ್ನು ಹಾಗೆಯೇ ಬಿಡುವುದು ಕಂಡುಬರುತ್ತಿದೆ.

೧೩. ಹಿಂದೆ ಕೊರಗರಲ್ಲಿ ಅವಿದ್ಯಾವಂತರ ಸಂಖ್ಯೆ ಹೆಚ್ಚಾಗಿತ್ತು. ಶಿಕ್ಷಣ ಕಾಳಜಿಯ ಕೊರತೆ, ಅಸ್ಪೃಶ್ಯತೆ ಇದಕ್ಕೆ ಕಾರಣವಾಗಿತ್ತು. ಆದರೆ ಇಂದು ಪರಿಸ್ಥಿತಿ ಬದಲಾಗಿದೆ. ಕೊರಗರಲ್ಲಿ ಶಿಕ್ಷಣದ ಅರಿವು ಮೂಡಿದೆ. ಇಂದಿನ ತಲೆಮಾರಿನ ಮಕ್ಕಳನ್ನು ಶಾಲೆಗೆ ಕಳುಹಿಸುವ ಪರಿಪಾಠ ಹೆಚ್ಚಾಗಿದೆ. ಶೈಕ್ಷಣಿಕ ಸಾಧನೆ ಮಾಡಿದ ವಿದ್ಯಾರ್ಥಿಗಳನ್ನು ಇಂದು ಕೊರಗರಲ್ಲಿ ಕಾಣುತ್ತಿದ್ದೇವೆ. ಇದು ಮುಂದಿನ ತಲೆಮಾರಿನಲ್ಲಿ ಕೊರಗರಲ್ಲಿ ಬದಲಾವಣೆಯ ಗಾಳಿ ಬೀಸಲು ನೆರವಾಗುತ್ತದೆ.

೧೪. ಆಶ್ರಮ ಶಾಲೆಗಳು ಕೊರಗರ ಶಿಕ್ಷಣಕ್ಕೆ, ವೃತ್ತಿ ತರಬೇತಿಗೆ, ವ್ಯಕ್ತಿತ್ವ ವಿಕಸನಕ್ಕೆ ನೆರವಾಗಿದೆ.

೧೫. ಕೊರಗರಲ್ಲಿ ಮದ್ಯಪಾನ ದುಶ್ಚಟ ಹೆಚ್ಚಾಗಿದೆ. ಅದನ್ನು ಹೊಗಲಾಡಿಸಲು ಕಟ್ಟುನಿಟ್ಟಾದ ಮದ್ಯವರ್ಜನ ಶಿಬಿರಗಳನ್ನು ಆಯೋಜಿಸಬೇಕು. ಮದ್ಯವ್ಯಸನದಿಂದಾಗುವ ಸಮಸ್ಯೆಗಳ ಬಗೆಗೆ ಇನ್ನಷ್ಟು ಪರಿಣಾಮಕಾರಿಯಾಗಿ ತಿಳುವಳಿಕೆ ಮೂಡಿಸಲು ಪ್ರಯತ್ನಿಸಬೇಕು.

೧೬. ಕೊರಗರಲ್ಲಿ ಅಪೌಷ್ಟಿಕತೆ ಜೊತೆಗೆ ಅನೇಕ ಕಾಯಿಲೆಗಳು ಇರುವುದು ಕಂಡುಬರುತ್ತದೆ. ಕಾಯಿಲೆಗಳಿಗೆ ತಕ್ಕ ಚಿಕಿತ್ಸೆಗಳನ್ನು ಕೊಡಿಸುವ ನಿಟ್ಟಿನಲ್ಲಿ ಹೈಟೆಕ್ ಆಸ್ಪತ್ರೆಗಳನ್ನು ಗೊತ್ತು ಮಾಡಿ ಉಚಿತ ಚಿಕಿತ್ಸೆ ಕೊಡಿಸುವ ಕೆಲಸ ಸರ್ಕಾರದಿಂದಾಗಬೇಕು.

೧೭. ಆದಿಮ ಬುಡಕಟ್ಟು ಎಂದು ವರ್ಗೀಕರಿಸಲ್ಪಟ್ಟ ಕೊರಗರಿಗೆ ಪ್ರತ್ಯೇಕ ಒಳಮೀಸಲಾತಿ ಯನ್ನು ಒದಗಿಸಬೇಕು. ಮುಂದುವರೆದ ಬುಡಕಟ್ಟು ಸಮುದಾಯಗಳ ಎದುರು ಮೀಸಲಾತಿಯಡಿಯಲ್ಲಿ ಸೌಲಭ್ಯ ಪಡೆಯಲು ಕಷ್ಟವಾಗುತ್ತಿದೆ.

೧೮. ಶಾಸನಬದ್ಧ ಜನಪ್ರತಿನಿಧಿತ್ವದಲ್ಲಿ ಪ್ರತ್ಯೇಕ ಮೀಸಲಾತಿಯನ್ನು ಸರ್ಕಾರ ಹೆಚ್ಚಿಸಬೇಕು.

೧೯. ಕೊರಗರ ಭಾಷೆ ಸಂಸ್ಕೃತಿ, ಅನನ್ಯತೆಗಳನ್ನು ಅಧ್ಯಯನ ಮಾಡುವ ಸಲುವಾಗಿ ರಾಜ್ಯದ ಯಾವುದಾದರೊಂದು ವಿಶ್ವವಿದ್ಯಾಲಯದಲ್ಲಿ ಕೊರಗ ಸಂಶೋಧನಾ ಪೀಠವೊಂದನ್ನು ಸ್ಥಾಪಿಸಬೇಕು.

೨೦. ಅತ್ಯಂತ ಬಡತನ ಜೀವನವನ್ನು ಅನುಭವಿಸುತ್ತಿರುವ ಕೊರಗ ವಿದ್ಯಾರ್ಥಿಗಳಿಗೆ ಹೆಚ್ಚಿನ ವಿದ್ಯಾರ್ಥಿವೇತನವನ್ನು ಆದಿಮ ಬುಡಕಟ್ಟು ನೆಲೆಯಲ್ಲಿ ನೀಡಬೇಕು.

# ಅನುಬಂಧಗಳು

೧. ಪರಾಮರ್ಶನ ಗ್ರಂಥಗಳು

೨. ವಕ್ತೃ ಮಾಹಿತಿ

೩. ಕ್ಷೇತ್ರಕಾರ್ಯ ಪ್ರಶ್ನಾವಳಿ ಮಾದರಿ

೪. ಕೊರಗರ ಜಾನಪದ ಸಾಹಿತ್ಯ

೫. ದಾಖಲೆಗಳು

೬. ಛಾಯಾಚಿತ್ರಗಳು

# ಪರಾಮರ್ಶನ ಗ್ರಂಥಗಳು


ಅಂಗಡಿ ಎಸ್.ಎಸ್., ೨೦೦೮, ಕರ್ನಾಟಕ ಬುಡಕಟ್ಟು ಭಾಷೆ; ಸೃಷ್ಟಿ ಪಬ್ಲಿಕೇಷನ್ಸ್, ಬೆಂಗಳೂರು

ಅಂಬಳಿಕೆ ಹಿರಿಯಣ್ಣ, ಮಲೆನಾಡ ಜಾನಪದ ಸಂಪ್ರದಾಯಗಳು, ಪುಸ್ತಕ ಚಿಲುಮೆ ಪ್ರಕಾಶನ, ಮೈಸೂರು, ೧೯೭೮

ಅನುಪಮಾ ಎಚ್.ಎಸ್., ಕೃಷ್ಣ ಜಿ. (ಸಂ), ಅಸಮಾನ ಭಾರತ, ಲಡಾಯಿ ಪ್ರಕಾಶನ, ಗದಗ, ೨೦೧೦

ಅಬ್ದುಲ್ ಅಜೀಜ್ ಮತ್ತು ವಾಸುಕಿ ಕೆ.ಜಿ., ಕರ್ನಾಟಕ ಆರ್ಥಿಕತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭

ಅಮತ್ಯಕಸೇನ್ (ಅನು), ಚಂದ್ರಶೇಖರ ಟಿ.ಆರ್., ಅಮರ್ತ್ಯತ್ಯಸೇನ್‌ರವರ ಅಭಿವೃದ್ಧಿ ಅಧ್ಯಯನಗಳು, ಕನ್ನಡ ಸಂಘ ಕ್ರೈಸ್ತ ಕಾಲೇಜು, ಬೆಂಗಳೂರು, ೧೯೯೯

ಅಶೀಶನಂದಿ (ಅನು) ಸುಬ್ಬಣ್ಣ ಕೆ.ವಿ., ಅಶೀಶನಂದಿ ವಿಚಾರಧಾರೆಗಳು, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ೧೯೯೫

ಅಶೋಕಕುಮಾರ ಯು.ಬಿ., ೨೦೦೧, ಕೃಷಿ ಕೂಲಿಕಾರರ ಬದುಕು ಬವಣೆ; ಚೇತನ ಬುಕ್‌ಹೌಸ್, ಬೆಂಗಳೂರು.

ಆರಾಧ್ಯ ಬಿ.ಎಂ., ಪರಿಶಿಷ್ಟ ಜನಾಂಗದವರಿಗೆ ಸಂವಿಧಾನದ ಕೊಡುಗೆ, ಕರ್ನಾಟಕ ಸರ್ಕಾರ, ವಿಧಾನಸೌಧ, ಬೆಂಗಳೂರು, ೧೯೮೫

ಆಸಿಫ್ ಷರೀಫ್, ರೇಷ್ಮೆನಗರ, ಅಂಕನಹಳ್ಳಿ ಪ್ರಕಾಶನ, ರಾಮನಗರ, ೨೦೦೬

ಕರೀಗೌಡ ಬೀಚನಹಳ್ಳಿ, ಕರಕುಶಲ ಕಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

ಕರೀಂಸಾಬ್ ಎಸ್.ಕೆ., ಜನಪದ ವೈದ್ಯ, ಕರ್ನಾಟಕ ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೮೯.

ಕರ್ನಾಟಕ ಗ್ಯಾಸೆಟಿಯರ್ ೧೯೭೫, ಕರ್ನಾಟಕ ಸರ್ಕಾರ, ಬೆಂಗಳೂರು

ಕೊಸಾಂಬಿ ಡಿ.ಡಿ. ನಿಮಗೆ ತಿಳಿದಿರಲಿ (ಸಂ), ವಸಂತರಾಜು ಎನ್.ಕೆ., ಚಿಂತನಾ ಪುಸ್ತಕ, ಜಯನಗರ, ಬೆಂಗಳೂರು, ೨೦೧೦.

ಖಂಡೋಬಾ ಪಿ.ಕೆ., (ಪ್ರ.ಸಂ.) ನಾಯಕ ಡಿ.ಬಿ., ಗಿರಿಜನ ಸಿರಿ, ಖಂಡೋಬಾ ಅಭಿನಂದನಾ ಸಮಿತಿ, ಕನ್ನಡ ಅಧ್ಯಯನ ಸಂಸ್ಥೆ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೩.

ಗಂಗಾಧರ ದೈವಜ್ಞ, ಬುಡಕಟ್ಟು ಸಮಾಜ ಹುಟ್ಟು ಸಾವಿನ ನಡುವೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

ಗಂಗಾಧರ ದೈವಜ್ಞ, ಕಚ್ಚೆಗೌಳಿಗರ ಪರಂಪರೆ ಮತ್ತು ಆಧುನಿಕತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨.

ಗಂಗಾಧರ ದೈವಜ್ಞ, ಕೊರಗರು ಸಮಕಾಲೀನ ಸ್ಪಂದನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨.

ಗೋಪಾಲಕೃಷ್ಣಯ್ಯ, ಕೆ ಎಲ್., ೨೦೦೩, ಇತಿಹಾಸ ರಾಜಕೀಯ, ನವ ಕರ್ನಾಟಕ ಪ್ರಕಾಶನ, ಬೆಂಗಳೂರು:

ಗೋಪಾಲ ಕೃಷ್ಣರಾವ್, ಸಾಮಾಜಿಕ ರಾಜಕೀಯ ಜ್ಞಾನದ ಮೂಲ ಪಾಠಗಳು, ಪ್ರಗತಿ ಪ್ರಕಾಶನ, ಬೆಂಗಳೂರು, ೧೯೮೬.

ಚಂದ್ರ ಪೂಜಾರಿ ಎಂ., ದೇಶೀಯತೆಯ ನೆರಳಿನಲ್ಲಿ ವಿಕೇಂದ್ರೀಕರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

ಚಂದ್ರ ಪೂಜಾರಿ ಎಂ., ರಾಜಕೀಯದ ಬಡತನ, ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ, ೨೦೦೮.

ಚಂದ್ರ ಪೂಜಾರಿ ಎಂ., ಯಾಕೀಗ ಭೂಮಿ ಪ್ರಶ್ನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

ಚಂದ್ರ ಕಾಳೇನಹಳ್ಳಿ, ಸೋಲಿಗರ ಸಂಸ್ಕೃತಿ ಉಪ ಸಂಸ್ಕೃತಿ ಮಾಲೆ, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩.

ಚಂದ್ರಶೇಖರ ಟಿ.ಆರ್., ಕರ್ನಾಟಕ ಜನಗಣತಿ–೨೦೧೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨.

ಚಂದ್ರಶೇಖರ, ಬಿ.ಎಸ್., ೨೦೦೧, ಸಮಾಜ ವಿಜ್ಞಾನಗಳಲ್ಲಿ ಸಂಶೋಧನಾ ವಿಧಾನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಚಲುವರಾಜು, ದಕ್ಕಲಿಗರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೯.

ಜಯಪ್ರಕಾಶ ಬಂಜಗೆರೆ, ಕರ್ನಾಟಕತ್ವ ಸಮಾಜೋ ಆರ್ಥಿಕ ತಳಹದಿ, ಕನ್ನಡ ಸಾಹಿತ್ಯ ಪರಿಷತ್, ಚಾಮರಾಜಪೇಟೆ, ಬೆಂಗಳೂರು, ೨೦೦೬.

ಡಂಗ ಡಿ.ಬಿ., ೧೯೮೮, ಜನಾಂಗ ಪರಿಚಯ, ಪೆರಿಯಾರ್ ಪ್ರಕಾಶನ, ಧಾರವಾಡ

ಡೊಮಿನಿಕ್ ಡಿ., ಜಾಗತೀಕರಣ ಐಡಿಯಾಲಜಿ ಮತ್ತು ಮಾನವ ಹಕ್ಕುಗಳು, ಸಖಿ ಪ್ರಕಾಶನ, ಹೊಸಪೇಟೆ, ೨೦೦೭.

ದಾಸೇಗೌಡ ಜಿ.ವಿ., ನಮ್ಮ ಜನಪದ ನಂಬಿಕೆಗಳು, ಚೇತನ ಬುಕ್‌ಹೌಸ್, ಮೈಸೂರು, ೨೦೦೭.

ದಿವಾಕರ ನಾ., ದಲಿತರು ವಿವೇಚನೆ ಒಂದು ಅವಲೋಕನ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೯.

ತಪಸ್ವೀಕುಮಾರ, ನಂ., ೨೦೦೧, ಸಂಸ್ಕೃತಿ ವಿಕಾಸ, ಚೇತನ ಬುಕ್‌ಹೌಸ್, ಬೆಂಗಳೂರು

ನಾಗೇಶ ಎಚ್.ವಿ., ಬುಡಕಟ್ಟು ಜನರ ನ್ಯಾಯ ತೀರ್ಮಾನಗಳು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೦೦೩.

ನಾಗೇಶ ಹೆಗಡೆ, ಅಭಿವೃದ್ಧಿಯ ಅಂಧಯುಗ, ಭೂಮಿ ಬುಕ್ಸ್, ಬೆಂಗಳೂರು, ೨೦೧೦.

ನಾರಾಯಣ ಕಿಕ್ಕೇರಿ, ಬುಡಕಟ್ಟು ಸಂಸ್ಕೃತಿ, ಅರುಹು–ಕುರುಹು ಪ್ರಕಾಶನ, ಕುವೆಂಪುನಗರ, ಮೈಸೂರು, ೨೦೧೧.

ನಾಯಕ ಎಸ್.ಆರ್., ಹಾಲಕ್ಕಿ ಒಕ್ಕಲಿಗರ ಸಂಸ್ಕೃತಿ; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩.

ನಾಯಕ ಎಸ್.ಆರ್., ಕರಾವಳಿ ಸೋಗುಗಳ ಬಹುರೂಪ, ೨೦೦೩.

ನಾರಾಯಣ ಕೆ.ವಿ., ಭಾಷೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧.

ನಿರುಪಮಾ., ಸಂಶೋಧನಾ ವಿಧಾನಗಳು,; ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೨..

ಪುಟ್ಟಯ್ಯ ಬಿ.ಎಂ., ದಲಿತರು ಮತ್ತು ಭೂಮಿಯ ಪ್ರಶ್ನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.

ಪ್ರಭಾಕರ ಎ.ಎಸ್., ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

ಪ್ರಭಾಕರ ಎ.ಎಸ್., ಬುಡಕಟ್ಟು ಅಭಿವೃದ್ಧಿ ಮೀಮಾಂಸೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

ಪ್ರಭಾಕರ ಎ.ಎಸ್. (ಸಂ), ಆದಿವಾಸಿ ಆಖ್ಯಾನ, ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ, ೨೦೦೬.

ಪ್ರಭಾಕರ ಎ.ಎಸ್., ಕರ್ನಾಟಕದ ಡೊಂಬರು, ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

ಪ್ರಭಾಕರ ಎ.ಎಸ್., ಚಂದ್ರಕಾಂತ ಟಿ.ಎನ್., ದೊಂಬರು ಒಂದು ಚಾರಿತ್ರಿಕ ಹಿನ್ನೋಟ, ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ, ೨೦೦೬.

ಪರಮಶಿವಯ್ಯ ಜೀ.ಶಂ., ಜನಪದ ಕಾವ್ಯ ಕಥೆಗಳು, ಸುರುಭಿ ಪ್ರಕಾಶನ, ಮೈಸೂರು, ೧೯೭೧.

ಪುರುಷೋತ್ತಮ ಬಿಳಿಮಲೆ, ಜಾನಪದ ಕ್ಷೇತ್ರಕಾರ್ಯ ಆಧುನಿಕ ವಿಧಾನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೩.

ಪುರುಷೋತ್ತಮ ಬಿಳಿಮಲೆ, ೧೯೯೩, ಕೊರಗರ ಸಂಸ್ಕೃತಿ,

ಪಾರ್ವತಮ್ಮ ಸಿ., ಆದಿವಾಸಿ ಸಮುದಾಯಗಳ ಅಭಿವೃದ್ಧಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

ಬರಗೂರು ರಾಮಚಂದ್ರಪ್ಪ, ಸಂಸ್ಕೃತಿ ಉಪಸಂಸ್ಕೃತಿ, ಭೂಮಿ ಬಳಗ, ಮಾನಸಗಂಗೋತ್ರಿ, ಮೈಸೂರು, ೧೯೯೪.

ಭಟ್ಟ ಜಿ.ಎಸ್., ಹಸಲರ ಸಂಸ್ಕೃತಿ; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩.

ಭೈರೇಗೌಡ ಎಂ., ಇರುಳಿಗರ ಜಾನಪದ ಅಧ್ಯಯನ, ಸಿವಿಜಿ ಪಬ್ಲಿಕೇಷನ್, ಬೆಂಗಳೂರು, ೨೦೦೦.

ಬೋರಲಿಂಗಯ್ಯ ಹಿ.ಚಿ., ಗಿರಿಜನ ನಾಡಿಗೆ ಪಯಣ, ರಾಗಿರೊಟ್ಟಿ ಪ್ರಕಾಶನ, ಬೆಂಗಳೂರು, ೧೯೯೧.

ಬೋರಲಿಂಗಯ್ಯ ಹಿ.ಚಿ., ಕಾಡು ಕಾಂಕ್ರೀಟ್ ಮತ್ತು ಜಾನಪದ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ೧೯೯೫.

ಬೋರಲಿಂಗಯ್ಯ ಹಿ.ಚಿ., ಬುಡಕಟ್ಟು ದೈವರಾಧನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

ಬೋರಲಿಂಗಯ್ಯ ಹಿ.ಚಿ., ಕರ್ನಾಟಕ ಅಭಿವೃದ್ಧಿ ಪಥ; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

ಬೋರಲಿಂಗಯ್ಯ ಹಿ.ಚಿ., ಸಿದ್ದಿಯರ ಸಂಸ್ಕೃತಿ; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩.

ಬೋರಲಿಂಗಯ್ಯ ಹಿ.ಚಿ., ಬುಡಕಟ್ಟು ಲೋಕದೃಷ್ಟಿ, ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

ಬೋರಲಿಂಗಯ್ಯ ಹಿ.ಚಿ., ವಿಸ್ಮೃತಿ ಮತ್ತು ಸಂಸ್ಕೃತಿ, ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೧.

ಬೋರಲಿಂಗಯ್ಯ ಹಿ.ಚಿ., ಪ್ರಭಾಕರ ಎ.ಎಸ್., ಕರ್ನಾಟಕ ಬುಡಕಟ್ಟುಗಳ ಚಿತ್ರ ಸಂಪುಟ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೩.

ಬೋರಲಿಂಗಯ್ಯ ಹಿ.ಚಿ., ೧೯೯೬, ಕರ್ನಾಟಕ ಜನಪದ ಕಲೆಗಳ ಕೋಶ; ಕನ್ನಡ ವಿಶ್ವವಿದ್ಯಾಲಯ, ಹಂಪಿ

ಬಸವರಾಜು ಕುರುವ (ಲೇ), ಕರ್ನಾಟಕ ಬುಡಕಟ್ಟು ಸಂಪುಟ–೨, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೨೦೦೦.

ಬಸವರಾಜ ಸಬರದ, ಸಮುದಾಯ ಮತ್ತು ಸಂಸ್ಕೃತಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೨.

ಮಂಗಳ ಶ್ರೀಧರ, ಬುಡಕಟ್ಟು ವೈದ್ಯ ಸಂಸ್ಕೃತಿ, ಮುದ್ದಣ ಪ್ರತಿಷ್ಠಾನ, ರಾಮನಗರ, ೨೦೦೮.

ಮಂಜುನಾಥ ಬೇವಿನಕಟ್ಟಿ, ಜನಪದ ನಂಬಿಕೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೬.

ಮಂಜುನಾಥ ಬೇವಿನಕಟ್ಟಿ (ಸಂ) ಸಾಂಸ್ಕೃತಿಕ ಅನನ್ಯತೆ ಮತ್ತು ಹಲಗಲಿ ಬಂಡಾಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯.

ಮಧು ಗುಂಡ್ಲುಪೇಟೆ, ಕರ್ನಾಟಕ ಬುಡಕಟ್ಟು ಜನಾಂಗಗಳ ಅಭಿವೃದ್ಧಿ; ಅಕ್ಷತ ಪ್ರಕಾಶನ, ಮೈಸೂರು, ೨೦೦೨.

ಮರುಳಸಿದ್ದಯ್ಯ ಎಚ್.ಎಂ., ಸಮುದಾಯ ಸಂಘಟನೆ, ಬೆಂಗಳೂರು, ೧೯೯೧.

ಮಹದೇವಯ್ಯ ಪಿ., ದಲಿತರು ಮತ್ತು ಪರ್ಯಾಯ ರಾಜಕಾರಣ; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫.

ಮುಜಾಪರ್ ಅಸ್ಸಾದಿ, ಇನ್ನೊಂದು ಮುಖ, ಮುದ್ದಪ್ಪ ಸ್ಮಾರಕ ಪ್ರತಿಷ್ಠಾನ, ಕೃಷ್ಣಾಪುರದೊಡ್ಡಿ, ೨೦೦೯.

ಮೈತ್ರಿ ಕೆ.ಎಂ., ಬುಡಕಟ್ಟು ಕುಲಕಸಬುಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

ಮೊಗಳ್ಳಿ ಗಣೇಶ, ದೇಶಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭.

ಮೊಗಳ್ಳಿ ಗಣೇಶ, ದಲಿತರು ಮತ್ತು ಜಾಗತೀಕರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

ಮೋಹನ್‌ಕೃಷ್ಣ ರೈ, ಪ್ರಭುತ್ವ ಮತ್ತು ಜನತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

ಮೋಹನ್ ಚಂದ್ರಗುತ್ತಿ, ಸಮಪಾಲು, ಪ್ರಸಾರಾಂಗ, ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ, ಶಿವಮೊಗ್ಗ, ೨೦೦೩.

ಮಹದೇವಯ್ಯ ಪಿ., ಸಾಮಾಜಿಕ ಉಪಭಾಷೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

ರಂಗಸ್ವಾಮಿ ಎ., ಬುಡಕಟ್ಟು ಜಾನಪದ, ಪ್ರಸಾರಾಂಗ, ಕರ್ನಾಟಕ ಮುಕ್ತ ವಿಶ್ವವಿದ್ಯಾಲಯ, ಮಾನಸಗಂಗೋತ್ರಿ, ಮೈಸೂರು, ೨೦೧೨.

ರಮೇಶ ಸ.ಚಿ., ೨೦೦೧, ಬೇಟೆ: ಸಾಂಸ್ಕೃತಿಕ ಪದಕೋಶ; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

ರೇಣುಕಾ ಕೋಡಗುಂಟಿ (ಸಂ), ಕರ್ನಾಟಕದಲ್ಲಿ ಶವಸಂಸ್ಕಾರ, ಮಂದಾರ ಪ್ರಕಾಶನ, ಮಸ್ಕಿ, ೨೦೦೯.

ರಾಮಕೃಷ್ಣ ಆರ್., ಕರ್ನಾಟಕದ ಬುಡಕಟ್ಟುಗಳು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೦೭.

ರಹಮತ್ ತರೀಕೆರೆ, ಪ್ರತಿ ಸಂಸ್ಕೃತಿ, ಕನ್ನಡ ಸಂಘ ಕ್ರೈಸ್ಟ್ ಕಾಲೇಜು, ಬೆಂಗಳೂರು, ೧೯೯೩.

ಲಕ್ಕಪ್ಪಗೌಡ ಎಚ್.ಜಿ., ಕರ್ನಾಟಕ ಬುಡಕಟ್ಟುಗಳು, ಸಂಪುಟ-೧, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೨೦೦೦.

ಲಕ್ಷ್ಮಣ್ ತೆಲಗಾವಿ (ಸಂ), ಸಂಶೋಧನಾ (ಚಿದಾನಂದಮೂರ್ತಿ ಅಭಿನಂದನಾ ಸಮಿತಿ,) ಬೆಂಗಳೂರು, ೧೯೯೧.

ಲಕ್ಷ್ಮಣ್ ತೆಲಗಾವಿ, ೧೯೯೯, ಹಿಂದುಳಿದ ವರ್ಗಗಳ ಮತ್ತು ಪರಿಶಿಷ್ಟ ಜಾತಿ, ವರ್ಗಗಳ ಚಳುವಳಿ; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

ವೆಂಕಟೇಶಮೂರ್ತಿ ಎಚ್.ಟಿ., ಸಮಾಜ ಪರಿವರ್ತನಾ ಚಳುವಳಿ ಮತ್ತು ಕರ್ನಾಟಕ ದಲಿತ ಚಳವಳಿ, ಈಶ್ವರಿ ಪ್ರಕಾಶನ, ಮೈಸೂರು, ೨೦೦೬.

ವಿನಯಲಾಲಾ ಮತ್ತು ಅಶೀಶನಂದಿ, ಹೊಸ ಶತಮಾನಕ್ಕೆ ಹೊಸ ಪರಿಭಾಷೆಗಳು, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ೨೦೦೭.

ವಿವೇಕ ರೈ ಬಿ.ಎ., ಕರ್ನಾಟಕ ಜನಪದ ನಂಬಿಕೆಗಳು, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೮೧.

ವಿಲಿಯಮ್ ಜಿ. ಗೂಡ್ (ಅನು), ಶಿವಮೂರ್ತಿ ಎಂ., ಸಾಮಾಜಿಕ ಸಂಶೋಧನೆ ವಿಧಾನಗಳು, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೯೫.

ಶಂಕರರಾವ್ ಚ.ನ., ಭಾರತದಲ್ಲಿ ಸಾಮಾಜಿಕ ಸಮಸ್ಯೆಗಳು ಮತ್ತು ಸಾಮಾಜಿಕ ವಿಘಟನೆ, ಜೈ ಭಾರತ ಪ್ರಕಾಶನ, ಮಂಗಳೂರು, ೧೯೯೯.

ಶಂಕರನಾರಾಯಣ ತೀ.ನಂ. (ಸಂ), ಕರ್ನಾಟಕ ಜನಪದ ಮಹಾಕಾವ್ಯಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೮.

ಶಂಕರನಾರಾಯಣ ತೀ.ನಂ., ಕಾಡುಗೊಲ್ಲರ ನಂಬಿಕೆಗಳು ಮತ್ತು ಆಚರಣೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮.

ಶಂಕರರಾವ್ ಚ.ನ., ಭಾರತೀಯ ಸಮಾಜ(ಸಂರಚನೆ ಮತ್ತು ಪರಿವರ್ತನೆ); ಜೈಭಾರತ ಪ್ರಕಾಶನ, ಬೆಂಗಳೂರು, ೨೦೦೫.

ಶಂಕರನಾರಾಯಣರಾವ್, ಪರಿವರ್ತನೆಯ ಹಾದಿಯಲ್ಲಿ ಕಿರು ಸಮುದಾಯಗಳು, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೨೦೦೦.

ಶಾಸ್ತ್ರಿ ಕೆ.ಜಿ, ಪಾಟೀಲ್ ಎಸ್.ಪಿ., ಕರ್ನಾಟಕದ ಸಾಂಸ್ಕೃತಿಕ ಪರಂಪರೆ; ಸಮಾಜ ಪುಸ್ತಕಾಲಯ, ಧಾರವಾಡ, ೧೯೭೬.

ಸುಂದರಯ್ಯ ಪಿ. (ಅನು), ಸುಜ್ಞಾನಮೂರ್ತಿ, ತೆಲಂಗಾಣ ಹೋರಾಟ, ಪಲ್ಲವ ಪ್ರಕಾಶನ, ಬಳ್ಳಾರಿ, ೨೦೧೩.

ಸೂರ್ಯನಾಥ, ಯು. ಕಾಮತ್(ಸಂ), ಕರ್ನಾಟಕ ರಾಜ್ಯ ಗೆಜೆಟಿಯರ್; (ಭಾಗ-೧,) ಕರ್ನಾಟಕ ರಾಜ್ಯ ಸರಕಾರ, ಬೆಂಗಳೂರು, ೧೯೮೪.

........ (ಸಂ) ೧೯೮೫, *ಕರ್ನಾಟಕ ರಾಜ್ಯ ಗೆಜೆಟಿಯರ್;* (ಭಾಗ-೨,) ೧೯೮೫. ಕರ್ನಾಟಕ ರಾಜ್ಯ ಸರಕಾರ, ಬೆಂಗಳೂರು

ಸೋಮಶೇಖರಗೌಡ, ಕನ್ನಡದ ಉಪಭಾಷೆಗಳು, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ, ಮಾನಸಗಂಗೋತ್ರಿ, ಮೈಸೂರು, ೨೦೧೦.

**ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧಗಳು**

ವಿಜಯಲಕ್ಷ್ಮಿ ಆರ್., ಹಾಲಕ್ಕಿ ಒಕ್ಕಲಿಗರ ಮಹಿಳೆ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮

ಕೊಂತಮ್ ಸತೀಶ, ಬೇಡಗಂಪಣರ ಸಾಮಾಜಿಕ ಹಾಗೂ ಆರ್ಥಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯.

ಮಲ್ಲಿಕಾರ್ಜುನ ಪ. ಸೊಬರದ, ಕುಣಬಿ ಸಮುದಾಯದ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧.

ಪ್ರಕಾಶ ಕೆ.ಪಿ., ಕನಕಪುರ ಪ್ರದೇಶದ ಇತಿಹಾಸ ಸಂಸ್ಕೃತಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨.

ಶಶಿಕಿರಣ ಜಿ., ಒಂದು ಬುಡಕಟ್ಟಿನ ಅರ್ಥವ್ಯವಸ್ಥೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೪.

**English Books**

Alchin F.R., 1963, Neolithic cattle keepers of south India- A Study of Deccan, Cambridge press, Cambridge

Ananthakrishna Iyer, L K., 1998, *The Mysore Tribes and Castes;* Mittal Publications, New Delhi

Hassan, S.S., 1989, *The Castes and Tribes of H E H Nizam's Dominions*; Asian Educational Services, New Delhi.

Banden Powell B H., ( Reprint) 1990, The Land system of British India; Low price publications, Delhi

Bose N.K., 1967, Culture and Society in India; Asia publishing house, bombay

Dikshit G.S., 1964, The Local government in Medieval Karnataka, Karnataka University, Dharawad

Dube S.C., 1990, Indian society; National book trust, Delhi

Frazer J.H., 1978, The Golden bough; Newyork

Gururajachar S., 1974, Some aspects and social life in Karnataka(1000-1300AD)Mysore University press, Mysore

Hayavadanarao, 1988, Indian caste system- A study; Asian publications, New Delhi

Hassan, Syed Sirjul, 1989, The Caste and Tribes of H E S, The Nizamas Dominions, New Delhi

Huffon J.K., 1977, Caste in India (Its Nature, function and origin) Oxford university press, Oxford

Iyer L K A., 1988, (Re print) The Mysore Tribes and Castes, Mittal publications, New Delhi

Karmakar D.P., 1974, A Cultural history of Karnataka; Karnataka Vidhyavardhaka sangha, Dharwad

Kuppuswamy G.R., 1975, Economic conditions in Karnataka, Karnataka university, Dharwad

Mohanty P.K., 2002, Development of primitive Tribal India; Concept publishing company, New Delhi

Nanjundaiah, 2005, Karnataka human development report; Karnataka Bangalore

Thurston Edger, 1906, Ethnographic notes in southern India; Government press, Madras

Thurston Edger, 1909, The caste and tribes of southern India; Asian publications, Delhi

The Encyclopaedic District Gazetteers of India Vol-1, Karnataka State, Bangalore

Tripathy S.N., 2006, Dynamics of Tribal migration; Sonali publications New Delhi

Urnahar, Ambika chandani 1995, Sociology of rural development; Rawat publications New Delhi

Yadappanavar A.V., 1991, Tribal education in India; Discovery publications, New Delhi

### ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಮಾಹಿತಿ ನೀಡಿದ ತಿಳುವಳಿಕೆದಾರರ ವಿವರ

| ಮಾಹಿತಿದಾರರ ಹೆಸರು | ವಯಸ್ಸು | ಉದ್ಯೋಗ | ವಾಸಿಸುವ ಹಳ್ಳಿ | ತಾಲೂಕು |
|---|---|---|---|---|
| ತೋಮರ | (೬೦) | ಕೃಷಿಕೂಲಿ | ಮಜೂರು | ಉಡುಪಿ |
| ಶ್ರೀಮತಿ ರತ್ನ | (೩೬) | ಕೃಷಿಕೂಲಿ | ಕಾಪು | ಉಡುಪಿ |
| ಶ್ರೀಮತಿ ಸುಂದರಿ | (೫೩) | ಗೃಹಿಣಿ | ಕಾಪು | ಉಡುಪಿ |
| ಹೈತಪ್ಪ | (೩೧) | ಡ್ರೈವರ್ | ಕಾಪು | ಉಡುಪಿ |
| ಬೊಗ | (೬೫) | ಕೂಲಿ | ತೋಟಿ, ಕುಟ್ಟಿಕಾಡು | ಉಡುಪಿ |
| ಸುಂದರ | (೪೦) | ಕೂಲಿ | ತೋಟಿ, ಕುಟ್ಟಿಕಾಡು | ಉಡುಪಿ |
| ಶ್ರೀಮತಿ ಶಾಂತ | (೪೭) | ಬುಟ್ಟಿ ಹೆಣೆಯುವುದು | ಕೋವೆ, ಕುಟ್ಟಿಕಾಡು | ಉಡುಪಿ |
| ಸೋಮಶೇಖರ | (೪೦) | ರೈಲ್ವೆ | ಪಾದೆಬೆಟ್ಟು | ಉಡುಪಿ |
| ಉಮೇಶ | (೨೮) | ಮೇಸ್ತ್ರಿ | ಪಾದೆಬೆಟ್ಟು | ಉಡುಪಿ |
| ಬಡಿಯ | (೬೦) | ಕೂಲಿ | ನಡೆಸಲ್ | ಉಡುಪಿ |
| ಸುಧಾಕರ | (೩೬) | ಕೂಲಿ | ನಡೆಸಲ್ | ಉಡುಪಿ |

| ಮಾಹಿತಿದಾರರ ಹೆಸರು | ವಯಸ್ಸು | ಉದ್ಯೋಗ | ವಾಸಿಸುವ ಹಳ್ಳಿ | ತಾಲೂಕು |
|---|---|---|---|---|
| ಮೆನ್ನೆ | (೭೫) | ವಯೋವೃದ್ಧ | ಪಡು | ಉಡುಪಿ |
| ಚಕ್ಕ | (೬೦) | ಗುಡಿಸುವುದು | ಪಡು | ಉಡುಪಿ |
| ಕಮಲ | (೩೨) | ಮನೆಕೆಲಸ | ಪಡು | ಉಡುಪಿ |
| ಸುರೇಶ | (೩೮) | ಬುಟ್ಟಿ ಹೆಣೆಯುವುದು | ಮಜೂರು | ಉಡುಪಿ |
| ಮುನೀರ | (೬೦) | ಕೂಲಿ | ಮಜೂರು | ಉಡುಪಿ |
| ಬಾಬು | (೫೦) | ಇಟ್ಟಿಗೆ ಪ್ಯಾಕ್ಟರಿ | ಕಾರ್ಕಳ ನಗರ | ಕಾರ್ಕಳ |
| ಮಂಜುನಾಥ | (೩೦) | ಕೂಲಿ | ಹೆಬ್ರಿ | ಕಾರ್ಕಳ |
| ಗೀತಾ | (೪೦) | ಗೃಹಿಣಿ | ನಲ್ಲೂರು | ಕಾರ್ಕಳ |
| ನಾಗರಾಜ | (೧೫) | ವಿದ್ಯಾರ್ಥಿ | ಬೆಳ್ಮಣ್ | ಕಾರ್ಕಳ |
| ಸುಚಿತ್ರಾ | (೧೫) | ವಿದ್ಯಾರ್ಥಿನಿ | ಪಿಲರ್‌ಕಾನ್ | ಕಾರ್ಕಳ |
| ರುಕ್ಮಿಣಿ | (೪೩) | ಕಾರ್ಖಾನೆ ಕೂಲಿ | ವಾರಂಗ್ | ಕಾರ್ಕಳ |
| ಸುಧಾಕರ | (೫೧) | ಖಾಸಗಿ ಕಂಪನಿ | ಕಾಡತಾಳ್ | ಕಾರ್ಕಳ |
| ಮಂಜು | (೬೦) | ಕೃಷಿಕೂಲಿ | ಕಾರ್ಕಳ ನಗರ | ಕಾರ್ಕಳ |

| ಮಾಹಿತಿದಾರರ ಹೆಸರು | ವಯಸ್ಸು | ಉದ್ಯೋಗ | ವಾಸಿಸುವ ಹಳ್ಳಿ | ತಾಲೂಕು |
|---|---|---|---|---|
| ಚೋಣ | (೭೫) | ವಯೋವೃದ್ಧ | ವಂಡ್ಸರ್ಸೆ | ಕುಂದಾಪುರ |
| ಸದಿಯಾ | (೫೬) | ಕಸ ಗುಡಿಸುವುದು | ಕೋಟ | ಕುಂದಾಪುರ |
| ಲಕ್ಷ್ಮೀ | (೩೨) | ಮನೆಕೆಲಸ | ಸಾಸ್ತಾನ | ಕುಂದಾಪುರ |
| ಗಿರಿಜಾ | (೩೮) | ಬುಟ್ಟಿ ಹೆಣೆಯುವುದು | ಕುಂದಾಪುರ ನಗರ | ಕುಂದಾಪುರ |
| ಸುರೇಶ | (೨೩) | ಕೂಲಿ | ಕುಂದಾಪುರ ನಗರ | ಕುಂದಾಪುರ |
| ಮಂಜು | (೪೫) | ಇಟ್ಟಿಗೆ ಫ್ಯಾಕ್ಟರಿ | ಕುಂದಾಪುರ ನಗರ | ಕುಂದಾಪುರ |
| ಶಶೀಕರ | (೧೬) | ವಿದ್ಯಾರ್ಥಿ | ಸಿದ್ಧಾಪುರ | ಕುಂದಾಪುರ |
| ಕುಶ | (೧೨) | ವಿದ್ಯಾರ್ಥಿ | ಹಾಲಾಡಿ | ಕುಂದಾಪುರ |
| ಸಾಕು | (೫೫) | ಕಸ ಗುಡಿಸುವುದು | ಕೋಟೇಶ್ವರ | ಕುಂದಾಪುರ |
| ನಾಗ | (೪೫) | ಮುನಿಸ್ಸಿಪಾಲಿಟಿ | ಸಿದ್ಧಾಪುರ | ಕುಂದಾಪುರ |
| ಬಡಿಯ | (೪೩) | ಕಾರ್ಖಾನೆ ಕೂಲಿ | ಹಾಲಾಡಿ | ಕುಂದಾಪುರ |
| ಶಂಕ್ರ | (೩೫) | ಖಾಸಗಿ ಕಂಪನಿ | ಕುಂದಾಪುರ ನಗರ | ಕುಂದಾಪುರ |
| ಈಶ್ವರ ಕೊರಗ | (೪೫) | ಕೃಷಿಕೂಲಿ | ಕೋಟ | ಕುಂದಾಪುರ |

| ಮಾಹಿತಿದಾರರ ಹೆಸರು | ವಯಸ್ಸು | ಉದ್ಯೋಗ | ವಾಸಿಸುವ ಹಳ್ಳಿ | ತಾಲೂಕು |
|---|---|---|---|---|
| ಮಂಜ್ರ ಕೊರಗ | (೮೦) | ವಯೋವೃದ್ಧ | ಅಳಿಕೆ | ಬಂಟ್ವಾಳ |
| ನಾಗ | (೪೫) | ಕಸ ಗುಡಿಸುವುದು | ಅಮ್ಟಾಡಿ | ಬಂಟ್ವಾಳ |
| ಲಕ್ಷ್ಮೀ | (೨೮) | ಅಂಗನವಾಡಿ ಕಾರ್ಯಕರ್ತೆ | ಅನಂತಾಡಿ | ಬಂಟ್ವಾಳ |
| ಗಿರಿಜಾ | (೩೨) | ಕೂಲಿ | ಬಡಗಕಜೆಕ್ಕಾರು | ಬಂಟ್ವಾಳ |
| ಶಂಕ್ರ ಕೊರಗ | (೨೩) | ಕೂಲಿ | ಬಾಳೆಪುಣಿ | ಬಂಟ್ವಾಳ |
| ಮಂಜು | (೪೫) | ಡ್ರೈವರ್ | ಕನ್ಯಾನ | ಬಂಟ್ವಾಳ |
| ಸುಬ್ಬಯ್ಯ | (೪೫) | ಮುನಿಸ್ಸಿಪಾಲಿಟಿ | ಕೇಪು | ಬಂಟ್ವಾಳ |
| ಬಾಬಿ | (೩೮) | ಕೂಲಿ | ಮಂಚಿ | ಬಂಟ್ವಾಳ |
| ಸಾಕು | (೧೫) | ವಿದ್ಯಾರ್ಥಿ | ಮಾಣಿ | ಬಂಟ್ವಾಳ |
| ಈಶ್ವರ | (೪೩) | ಮುನಿಸ್ಸಿಪಾಲಿಟಿ | ಪೆರುವಾಯಿ | ಬಂಟ್ವಾಳ |
| ನಿಂಗು | (೪೦) | ಕಾರ್ಖಾನೆ ಕೂಲಿ | ಪುದು | ಬಂಟ್ವಾಳ |
| ನಾಣು | (೩೫) | ಖಾಸಗಿ ಕಂಪನಿ | ವೀರಕಂಬ | ಬಂಟ್ವಾಳ |
| ಸಾಕು ಕೊರಗ | (೩೫) | ಕೃಷಿಕೂಲಿ | ವಿಟ್ಲ | ಬಂಟ್ವಾಳ |

| ಮಾಹಿತಿದಾರರ ಹೆಸರು | ವಯಸ್ಸು | ಉದ್ಯೋಗ | ವಾಸಿಸುವ ಹಳ್ಳಿ | ತಾಲೂಕು |
|---|---|---|---|---|
| ಜಯಕರ | (೫೩) | ಕೂಲಿ | ಅಡ್ಯಾರು | ಮಂಗಳೂರು |
| ಉದಯ | (೪೫) | ಮುನಿಸ್ಸಿಪಾಲಿಟಿ | ಬಜ್ಪೆ | ಮಂಗಳೂರು |
| ಸುಜಾತ | (೩೮) | ಅಂಗನವಾಡಿ ಕಾರ್ಯಕರ್ತೆ | ಬೆಳುವಾಯಿ | ಮಂಗಳೂರು |
| ಜಯಂತ | (೧೬) | ವಿದ್ಯಾರ್ಥಿ | ಗುರುಪುರ | ಮಂಗಳೂರು |
| ಸರಸ್ವತಿ | (೪೦) | ಕೂಲಿ | ಐಕಳ | ಮಂಗಳೂರು |
| ಸುಶ್ಮಿತ | (೧೬) | ವಿದ್ಯಾರ್ಥಿನಿ | ಕಿನ್ನಿಗೋಳಿ | ಮಂಗಳೂರು |
| ವಾಸು | (೩೮) | ಮುನಿಸ್ಸಿಪಾಲಿಟಿ | ಚೇಳ್ಯಾರು | ಮಂಗಳೂರು |
| ಅರ್ಜುನ | (೨೮) | ಕೂಲಿ | ತೆಂಕಮಿಜಾರು | ಮಂಗಳೂರು |
| ಸುನೀತಾ | (೩೧) | ಫ್ಯಾಕ್ಟರಿ | ಪುತ್ತಿಗೆ | ಮಂಗಳೂರು |
| ಗಂಗಾ | (೪೩) | ಮುನಿಸ್ಸಿಪಾಲಿಟಿ | ಬಾಳ | ಮಂಗಳೂರು |
| ಸಾಧನಾ | (೩೦) | ಕಾರ್ಖಾನೆ ಕೂಲಿ | ಜೋಕಟ್ಟೆ | ಮಂಗಳೂರು |
| ರವಿ | (೩೫) | ಖಾಸಗಿ ಕಂಪನಿ | ಕುಪ್ಪೆಪದವು | ಮಂಗಳೂರು |
| ನೀತಾ | (೩೫) | ಕೃಷಿಕೂಲಿ | ಮುಚ್ಚೂರು | ಮಂಗಳೂರು |



ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ -೫೮೩ ೨೭೬

## ಪ್ರಶ್ನಾವಳಿ

## ಸಾಮಾಜಿಕ ಬದಲಾವಣೆಯಲ್ಲಿ ಕೊರಗರು (ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಯನ್ನು ಪರಿಗ

೧. ಸಾಮಾನ್ಯ ಮಾಹಿತಿ

ಎ. ಸಮೀಕ್ಷೆಯ ದಿನಾಂಕ

ಬಿ. ಬುಡಕಟ್ಟು :

ಸಿ. ಬೆಡಗು :

ಡಿ. ಮಾತೃಭಾಷೆ

ಇ. ಮನೆದೇವರು :

ಎಫ್. ಕುಲಚಿಹ್ನೆ

ಜಿ. ಮನೆತನದ ಹೆಸರು

ಎಚ್. ಗ್ರಾಮ / ಪಟ್ಟಣ / ನಗರ

ಐ. ವಾರ್ಡ್

ಜೆ. ಪಂಚಾಯತಿ

ಕೆ. ಮನೆ ಸಂಖ್ಯೆ :

ಎಲ್. ತಾಲೂಕು / ಮಂಡಲ

ಎಂ. ಜಿಲ್ಲೆ ರಾಜ್ಯ :

ಎನ್. ಮಾತನಾಡುವ ಇತರ ಭಾಷೆಗಳು :

ಒ. ಭೂಹಿಡುವಳಿ (ಎಕರೆಗಳಲ್ಲಿ)

೧. ಒಣ : ೨. ನೀರಾವರಿ :

ಪಿ. ನಿವೇಶನ, ಮನೆ ಇದೆ :

ಕ್ಯೂ. ನಿವೇಶನ ಇದೆ, ಮನೆ ಇಲ್ಲ

ಆರ್. ನಿವೇಶನ : ಅ. ಸ್ವಂತದ್ದು ಆ. ಸರ್ಕಾರದ್ದು

ಎಸ್. ಮನೆ : ಅ. ಸ್ವಂತ ಆ. ಸರ್ಕಾರದ್ದು

ಟಿ. ವಿದ್ಯುತ್ : ಅ. ಸ್ವಂತ ಆ. ಸರ್ಕಾರದ್ದು

ಯು. ಪಶುಸಂಪತ್ತು (ಸಂಖ್ಯೆಗಳಲ್ಲಿ)

೧. ಎತ್ತು, ಹೋರಿ :

೨. ಆಕಳು, ಕರು :

೩. ಎಮ್ಮೆ, ಕೋಣ :

೪. ಕುರಿ :

೫. ಮೇಕೆ :

೬. ಕೋಳಿ :

**ವಿ. ಮನೆ ವಿವರ**

೧. ಗುಡಿಸಲು

೨. ಟಿನ್‌ಮನೆ

೩. ದಾಬಾ ಮಾಳಿಗೆ

೪. ಆರ್.ಸಿ.ಸಿ.

೫. ಹೆಂಚಿನ ಮನೆ

೬. ಆಶ್ರಯ ಮನೆ

೭. ಬಾಡಿಗೆ ಮನೆ

**ಡಬ್ಲ್ಯೂ. ಇತರೆ ಸೌಲಭ್ಯಗಳು**

೧. ಪಡಿತರ ಚೀಟಿ

೨. ಗ್ಯಾಸ್

೩. ನಲ್ಲಿ

೪. ಶೌಚಾಲಯ

೫. ಸ್ನಾನಗೃಹ

೬. ಸೈಕಲ್

೭. ರೇಡಿಯೋ

೮. ಟೇಪ್ ರಿಕಾರ್ಡರ್

೯. ಟಿ.ವಿ.

೧೦. ದೂರವಾಣಿ

೧೧. ಮೋಟರ್ ಸೈಕಲ್

೧೨. ಇತರೆ

**II. ವೈಯಕ್ತಿಕ ಮಾಹಿತಿ**

| ಕ್ರ.ಸಂ. | ಕುಟುಂಬದ ಸದಸ್ಯರ ಹೆಸರುಗಳು | ಸಂಬಂಧ | ಲಿಂಗ | ವಯಸ್ಸು | ಶಿಕ್ಷಣ | ವೈವಾಹಿಕ ಸ್ಥಾನಮಾನ | ಕಸಬು | ಕುಟುಂಬ ಯೋಜನೆ | ಪಾರಂಪರಿಕ ಉಡುಪು | ಸರ್ಕಾರಿ ಸೌಲಭ್ಯಗಳು ( ) | | | |
|---|---|---|---|---|---|---|---|---|---|---|---|---|---|
| | | | | | | | | | | ಓಟಿನಕಾರ್ಡ | ವಿಧವಾ ವೇತನ | ಅಂಗವಿಕಲ | ಶಿಷ್ಯವೇತನ |
| ೧ | | ಮುಖ್ಯಸ್ಥ/ಮುಖ್ಯಸ್ಥೆ | | | | | | | | | | | |
| ೨ | | | | | | | | | | | | | |
| ೩ | | | | | | | | | | | | | |
| ೪ | | | | | | | | | | | | | |
| ೫ | | | | | | | | | | | | | |
| ೬ | | | | | | | | | | | | | |
| ೭ | | | | | | | | | | | | | |
| ೮ | | | | | | | | | | | | | |
| ೯ | | | | | | | | | | | | | |
| ೧೦ | | | | | | | | | | | | | |
| ೧೧ | | | | | | | | | | | | | |
| ೧೨ | | | | | | | | | | | | | |

ಮಾರ್ಗದರ್ಶಕರು
**ಡಾ ಗಂಗಾಧರ ದೈವಜ್ಞ ಪ್ರಾಧ್ಯಾಪಕರು**

ಸಂಶೋಧಕರು
**ರಾಘವೇಂದ್ರ ಎಲ್.**

**ಮಾಹಿತಿ ದಾಖಲೆದಾರರ ಸಹಿ ಮತ್ತು ವಿಳಾಸ**

ಅನುಬಂಧ–೪

## ಕೊರಗರ ಜನಪದ ಸಾಹಿತ್ಯ

ಕೊರಗರಲ್ಲಿ ಎಲ್ಲ ಸಮುದಾಯಗಳಲ್ಲಿರುವಂತೆ ಜನಪದ ಸಾಹಿತ್ಯವೂ ಇದೆ. ಕೊರಗ ಭಾಷೆ ತನ್ನ ಅಸ್ತಿತ್ವವನ್ನು ಸುತ್ತಲಿನ ತುಳು, ಕನ್ನಡದೊಂದಿಗೆ ವಿಲೀನಗೊಳಿಸಿಕೊಳ್ಳುತ್ತಿರುವ ಸದ್ಯದ ಪ್ರಕ್ರಿಯೆಯಲ್ಲಿ ಅವರ ಜನಪದ ಸಾಹಿತ್ಯವೂ ಪರಿಸರದ ತುಳು ಅಥವಾ ಕನ್ನಡದಲ್ಲೆ ಬಹುಪಾಲು ದೊರೆಯುತ್ತಿದೆ. ಇಂದು ದೊರಕುತ್ತಿರುವ ಅವರ ಜನಪದ ಸಾಹಿತ್ಯದಲ್ಲಿ ಅವರ ಬದುಕಿನ ಸಾಂಸ್ಕೃತಿಕ ಎಳೆಗಳನ್ನು ಗುರುತಿಸಬಹುದಲ್ಲದೆ, ನಿಧಾನವಾಗಿ ಅವರ ಸಾಂಸ್ಕೃತಿಕ ಅನನ್ಯತೆಯ ದಟ್ಟತೆ ಕರಗುತ್ತಿರುವುದನ್ನು ಗಮನಿಸಬಹುದು. ಅವರ ಬದುಕಿನಲ್ಲಾಗುತ್ತಿರುವ ಸಾಮಾಜೀಕರಣ ಆರ್ಥಿಕ, ಸಾಮಾಜಿಕ ಉನ್ನತೀಕರಣದ ಫಲವಾಗಿ ಹೀಗಾಗುತ್ತಿರುವುದು ಸಹಜ ಹಾಗೂ ಅನಿವಾರ್ಯ. ಆದರೆ ಇಂದಿನ ಅವರ ಬದುಕಿನಲ್ಲಿ ಕಾಣಿಸುವ ದೃಶ್ಯ ಹಾಗೂ ಕೇಳಿಸುವ ದನಿಯ ಹಿಂದಿನ ವಿಷಣ್ಣತೆ ಹಾಗೂ ಸೂಕ್ಷ್ಮ ಪ್ರತಿಭಟನೆಯನ್ನು ಅವರ ಜನಪದ ಸಾಹಿತ್ಯ ಹಾಗೂ ಅವರನ್ನು ಕುರಿತು ಸಿಗುವ ಜನಪದ ಸಾಹಿತ್ಯಗಳಲ್ಲಿ ಗುರುತಿಸಬಹುದು. ಆ ಮೂಲಕ ಒಂದು ಸಮುದಾಯದ ಲೋಕದೃಷ್ಟಿ ಹಾಗೂ ಅವರನ್ನು ಕುರಿತು ಇತರರ ಲೋಕದೃಷ್ಟಿ ಎರಡನ್ನೂ ಗುರುತಿಸಬಹುದು.

**ಇಲ್ಲಿ ಅಧ್ಯಯನಕ್ಕೆ ಬಳಸಿಕೊಂಡ ಸಾಮಗ್ರಿಗಳು**

೧. ಕೊರಗ ಭಾಷೆಯಲ್ಲಿ ದೊರೆತ ಎರಡು ಜನಪದ ಕತೆಗಳು(ಕನ್ನಡ ರೂಪ)

೨. ತುಳು ಭಾಷೆಯಲ್ಲಿ ದೊರೆವ ಕೊರಗರ ಸಾಂಸ್ಕೃತಿಕ ವೀರ ಕೊರಗ ತನಿಯನ ಕುರಿತ ಕತೆ.

೩. ಸಮುದಾಯದ ವಿಧಿ ಆಚರಣೆಯಲ್ಲಿ ಕೊರಗರನ್ನು ಕುರಿತಂತೆ ದೊರೆವ 'ಹಗಣ'ದ ಮಾದರಿಯ ಒಂದು ಪ್ರದರ್ಶನದ ವಿವರ.

೪. ಕೊರಗ ಸಮುದಾಯವನ್ನು ಕುರಿತು ದೊರೆವ ಗಾದೆಗಳಲ್ಲಿ ವ್ಯಕ್ತವಾಗುವ ಅವರ ಲೋಕದೃಷ್ಟಿ ಹಾಗೂ ಅವರನ್ನು ಕುರಿತ ಇತರರ ಲೋಕದೃಷ್ಟಿ.

## ನರಿ ಕತೆ

ಒಂದು ಊರಲ್ಲಿ ಒಬ್ಬ ಬಡಬ್ರಾಹ್ಮಣ. ಅವನಿಗೊಬ್ಬಳು ಹೆಂಡತಿ ಹಾಗೂ ಮಗಳು. ಅವರು ಪಡಿ ಬೇಡಿಕೊಂಡು ಬದುಕು ಸಾಗಿಸುತ್ತಿದ್ದರು. ಇವರ ಬಳಿಗೆ ಒಂದು ನರಿ ಪ್ರತಿದಿನ ಬರುತ್ತಿತ್ತು. ಆ ನರಿ ಬ್ರಾಹ್ಮಣನ ಮಗಳನ್ನು ಕಂಡು ಅವನಲ್ಲಿ ಕೇಳಿತು "ನಿನ್ನ ಮಗಳನ್ನು ನನಗೆ ಕೊಡುವೆಯಾ" ಅದಕ್ಕೆ ಬ್ರಾಹ್ಮಣನು "ಯಾರಿದು?" ಎಂದು ಅತ್ತ ಇತ್ತ ನೋಡಿದನು. ಅಲ್ಲೊಂದು ನರಿಯಿತ್ತು. "ಇದೇಕೆ ಹೀಗೆ ಕೇಳುತ್ತಿದೆ? ಏನೇ ಆಗಲಿ" ಎಂದು ಆ ಬ್ರಾಹ್ಮಣ ತನ್ನಲ್ಲೇ ಹೇಳಿಕೊಳ್ಳುತ್ತಾ ತನ್ನ ಜೋಳಿಗೆಯನ್ನು ಹೆಗಲಿಗೇರಿಸಿಕೊಳ್ಳುತ್ತಾ ಭಿಕ್ಷೆ ಬೇಡಲು ನಡೆದನು. ಬ್ರಾಹ್ಮಣ ಭಿಕ್ಷಾಟನೆ ಮುಗಿಸಿ ಮರಳಿದ. ತಾನು ಭಿಕ್ಷೆ ಎತ್ತಿ ತಂದ ಸಾಮಗ್ರಿಗಳನ್ನು ಲೆಕ್ಕ ಮಾಡತೊಡಗಿದ. ತನ್ನ ಹೆಂಡತಿಯನ್ನು ಕರೆದು "ಹಸಿವೆಯಾಗುತ್ತಿದೆ. ಬೇಗನೆ ಅಡುಗೆ ಮಾಡು" ಎಂದನು. ಆ ದಿನ ಊಟ ಪೂರೈಸಿ ಎಲ್ಲರೂ ನಿದ್ರೆ ಹೋದರು.

ಮರುದಿನ ಬೆಳಿಗ್ಗೆ ಬ್ರಾಹ್ಮಣ ಮೀಯಲೆಂದು ಕೆರೆಗೆ ಹೋದನು. ಸ್ನಾನ ಮುಗಿಸಿ ಮರಳಿದ. ಅಲ್ಲಿಗೆ ಬಂದ ನರಿ "ನಿನ್ನ ಮಗಳನ್ನು ನನಗೆ ಕೊಡುತ್ತೀಯಾ ಏನು?" ಎಂದು ಗದರಿಸಿ ಪ್ರಶ್ನಿಸಿತು. ಬ್ರಾಹ್ಮಣ "ಓ ಮಾರಾಯ ನನ್ನ ಮಗಳನ್ನು ನೀನು ಬಯಸುವುದಾದರೆ ಕೊಡುತ್ತೇನೆ. ಮದುವೆ ಯಾವ ದಿನ? ಮದುವೆ ಖರ್ಚಿಗೆ ನನ್ನಲ್ಲಿ ಇಲ್ಲ. ನಾನು ಬಡವ, ನನಗೆ ದಿನ ದಿನ ಹೊಟ್ಟೆ ಹೊರೆಯುವುದೇ ಕಷ್ಟವಾಗಿದೆ. ನಾನು ಹೇಗೆ ಮದುವೆ ನಡೆಸಲಿ?" ಎಂದು ಹೇಳಿದ. "ಆ ಬಗ್ಗೆ ನೀನು ಚಿಂತಿಸಬೇಕಾಗಿಲ್ಲ. ಆಕೆಯನ್ನು ನನ್ನೊಂದಿಗೆ ಇಂದೇ ಕಳುಹಿಸಿಕೊಡು" ಎಂದು ನರಿ ಹೇಳಿತು. "ಒಳ್ಳೆಯದು ಹಾಗಾದರೆ ಆಕೆಯನ್ನು ಇಂದೇ ನಿನ್ನೊಂದಿಗೆ ಕರೆದೊಯ್ಯು" ಎಂದನು.

ಬ್ರಾಹ್ಮಣ ತನ್ನ ಹೆಂಡತಿಗೆ ಹೇಳಿದ "ನೋಡಿಲ್ಲಿ ಮಾರಾಯ್ತಿ. ನಾವು ನಮ್ಮ ಮಗಳನ್ನು ನರಿಯ ಜತೆ ಕಳುಹಿಸಿಕೊಡಬೇಕಾಗುತ್ತದೆ. ಆ ನರಿ ನಮ್ಮ ಮಗಳನ್ನು ತಿಂದು ಮುಗಿಸಬಹುದು. ಅವಳು ಬದುಕಿ ಬರುವ ಎಲ್ಲ ಆಸೆಯನ್ನು ತೊರೆದು ಕಳುಹಿಸಿಕೊಡಬೇಕಾಗಿದೆ. ಅದು ಒಂದು ತಿಂಗಳಿಂದ ಮಗಳನ್ನು ಕಳುಹಿಸಿಕೊಡುವಂತೆ ಕೇಳುತ್ತಲೇ ಇದೆ. ನಾವು ಕಳುಹಿಸದೆ ಇಲ್ಲೇ ಇದ್ದರೆ ಅದು ನಮ್ಮನ್ನು ಇಲ್ಲಿ ಉಳಿಯಬಿಡದು. ಆದುದರಿಂದ ಅವಳನ್ನು ಕಳುಹಿಸಿ ಕೊಡೋಣ. ಅಂತೂ ಇಂತೂ ನಮಗಂತೂ ನಷ್ಟ" ಎಂದನು.

ಆ ಬಳಿಕ ನರಿ ಬ್ರಾಹ್ಮಣನ ಮಗಳನ್ನು ಕರೆದೊಯ್ದಿತು. ಒಂದು ವರ್ಷ ಕಳೆಯಿತು. ಮಗಳು ಬದುಕಿದ್ದಾಳೆಯೇ ಇಲ್ಲವೇ ನೋಡುವುದಕ್ಕೂ ಬ್ರಾಹ್ಮಣ ಹೋಗಲಿಲ್ಲ. ಒಂದು ದಿನ ನರಿಯೇ ಬಂದಿತು. "ಬ್ರಾಹ್ಮಣಾ, ಮಗಳನ್ನು ನೋಡುವುದಕ್ಕೆ ಬರುವೆಯಾ?" ಎಂದು ಕೇಳಿತು. ಅದಕ್ಕೆ ಬ್ರಾಹ್ಮಣ "ಓಹೋ ನೀನೆಯೋ, ಆ ದಿನ ನನ್ನ ಮಗಳನ್ನು ಕರೆದೊಯ್ದವನು?" ಎಂದು

ಕೇಳಿದನು. "ಹೌದು ನಾನೇ. ನೀನು ನಿನ್ನ ಮಗಳು ಇದ್ದಾಳೋ ಸತ್ತಿದ್ದಾಳೋ ನೋಡಲು ಬರಲೇ ಇಲ್ಲ. ನಾಳೆ ನಾನು ನಿನ್ನ ಮನೆಗೆ ಬರುತ್ತೇನೆ. ನಾಳೆ ಜೊತೆಯಾಗಿ ನಮ್ಮ ಮನೆಗೆ ಹೋಗೋಣ" ಎಂದಿತು. "ನಾಳೆ ಬೆಳಗ್ಗೆ ಬೇಗನೇ ಬಾ. ಈಗ ಹೋಗು" ಎಂದು ಬ್ರಾಹ್ಮಣ ನರಿಯನ್ನು ಹಿಂದಕ್ಕೆ ಕಳುಹಿಸಿದ.

ಬ್ರಾಹ್ಮಣ ಮನೆಗೆ ಬಂದನು. ತನ್ನ ಹೆಂಡತಿಯಲ್ಲಿ "ಏ ಮಾರಾಯ್ತೀ, ನರಿ ಇಂದೂ ಬಂದಿತ್ತು. ಮಗಳನ್ನು ನೋಡಲು ಬರುವುದಿಲ್ಲವೇ ಎಂದು ನನ್ನಲ್ಲಿ ಮತ್ತೆ ಮತ್ತೆ ಕೇಳಿತು" ಎಂದು ಹೇಳಿದನು. ಅದಕ್ಕೆ ನಾನು "ನನ್ನ ಮಗಳು ಬದುಕಿದ್ದಾಳೋ ನನಗೆ ತಿಳಿಯದು" ಎಂದೆ. ಮರುದಿನ ನನ್ನಲ್ಲಿಗೆ ಬಂದ ನರಿ "ಮಗಳನ್ನು ನೋಡಲು ಬರುತ್ತೀಯಾ ಇಲ್ಲವಾ?" ಎಂದು ಪ್ರಶ್ನಿಸಿತು. "ನಾಳೆ ನಮ್ಮನ್ನು ಕರೆದೊಯ್ಯಲು ನರಿ ಬರುತ್ತದೆ. ಅದರ ಜತೆ ನಾವು ಹೋಗಬೇಕಾಗಿದೆ. ನೀನೇನು ಹೇಳುತ್ತಿ ಹೋಗೋಣವೆ?" ಎಂದು ಕೇಳಿದನು. ಅದಕ್ಕೆ ಅವನ ಹೆಂಡತಿ "ಆಗಲಿ, ಹೋಗೋಣ. ಅವಳನ್ನು ನೋಡಲು ಸಾಧ್ಯವಾದರೆ ಸಂತೋಷ. ಅವಳು ಹೇಗಿದ್ದಾಳೋ ತಿಳಿಯದು" ಎಂದಳು.

ಮರುದಿನ ಬೆಳಗ್ಗೆ ನರಿ ಬಂದಿತು. ಅದು ಕೇಳಿತು, "ಮಾವಾ ನಾವು ಹೋಗೋಣವೆ?" ಅದಕ್ಕೆ ಬ್ರಾಹ್ಮಣ "ಬಾ ಮಾರಾಯಾ, ಸ್ವಲ್ಪ ಕುಳಿತುಕೊ. ಬಾಯಾರಿಕೆ ಆದಲ್ಲಿ ತಣಿಸಿಕೊ" ಎಂದನು. ನರಿ "ನನಗೆ ಕುಡಿಯಲೂ ಬೇಡ ತಿನ್ನಲೂ ಬೇಡ. ನಾವು ಹೋಗೋಣ" ಎಂದಿತು. ಅದಕ್ಕೆ ಬ್ರಾಹ್ಮಣ ಎಂದನು. "ಹೌದೋ ಮಾರಾಯ ನಾವು ಹೋಗುವುದೇನೋ ಸರಿ. ಆದರೆ ಇದರಿಂದ ನನ್ನ ಇಂದಿನ ತಿರುಗಾಟ ನಿಂತು ಹೋಗುತ್ತದೆ. ಇದರಿಂದ ನಮ್ಮ ಇಂದಿನ ಆಹಾರ ಸಂಪಾದನೆ ಇಲ್ಲವಾಗುತ್ತದೆ" ಎಂದನು.

ಅದಕ್ಕೆ ನರಿ "ಇಂದಿನ ಸಂಪಾದನೆ ಇಲ್ಲವಾದಲ್ಲಿ ಹೋಗಲಿ, ಇಂದು ನೀವು ಬರಲೇಬೇಕು. ನನ್ನ ಮನೆಯನ್ನು ನೋಡಬೇಕು. ಅಲ್ಲಿ ನಿಮ್ಮ ಮಗಳನ್ನು ನೋಡಬಹುದು. ಈಗ ಹೋಗೋಣ" ಹೀಗೆ ಹೇಳಿ ನರಿ ಅವರನ್ನು ತನ್ನ ಜತೆ ಕರೆದೊಯ್ದಿತು. ಅವರು ಹೋಗುತ್ತಿರುವಷ್ಟರಲ್ಲಿ ಅವರಿಗೆ ಒಂದು ಕಾಡು ಎದುರಾಯಿತು. ಅಲ್ಲೊಂದು ತೋಡು ಸಿಕ್ಕಿತು. ಆ ತೋಡಿನಲ್ಲಿ ಅವರನ್ನು ನಡೆಸಿಕೊಂಡು ಮುಂದುವರಿಯಿತು. ಅಷ್ಟರಲ್ಲಿ ಒಂದು ಗುಹೆ ಎದುರಾಯಿತು. "ಗುಹೆಯೊಳಗೆ ಹೋಗೋಣ" ಎಂದಿತು ನರಿ. ಬ್ರಾಹ್ಮಣ ಮತ್ತು ಅವನ ಹೆಂಡತಿಗೆ ಇದನ್ನು ಕೇಳಿ ಭಯವಾಯಿತು. "ಈ ಗುಹೆಯೊಳಗೆ ಯಾರು ನುಸುಳುವುದು? ನಮ್ಮಿಂದಾಗುವ ನಾವು ಬರಲಾರೆವು. ನಮ್ಮ ಮಗಳನ್ನು ಇಲ್ಲಿಗೆ ಕರೆದು ತಂದು ತೋರಿಸು. ನಾವು ಇಲ್ಲೇ ನಿಲ್ಲುತ್ತೇವೆ" ಎಂದರು. ಅದಕ್ಕೆ ನರಿ ಹೇಳಿತು. "ನೀವು ನನ್ನ ಮನೆಯನ್ನು(ಕೊಟ್ಟ) ನೋಡಲೆಂದು ಬಂದಿರಿ. ನೀವು ಇಲ್ಲೇ ಹೊರಗೆ ನಿಂತರೆ ನಮ್ಮ ಮನೆಯ ಚಂದವನ್ನು ಅದೆಂತು ನೋಡುವಿರಿ. ಒಳಗೆ ಬನ್ನಿ ನಡೆಯಿರಿ". ಇಷ್ಟು

ಹೇಳಿದ ನರಿ ತನ್ನ ಮಾವನ ಕೈ ಹಿಡಿದು ಒಳಗೆ ಬಲವಂತದಿಂದ ಕರೆದೊಯ್ದಿತು. ಭಯದಿಂದ ಒಳಗೆ ಗಂಡಹೆಂಡತಿ ನಡೆದರು. ಬ್ರಾಹ್ಮಣನ ಕೈಕಾಲುಗಳು ನಡುಗತೊಡಗಿದವು. ಆದರೂ ಒಳಗೆ ನಡೆದರು.

ಸುಮಾರು ಒಂದು ಫರ್ಲಾಂಗಿನಷ್ಟು ದೂರ ತೆವಳಿಕೊಂಡು ಸಾಗಿದರು. ಅಷ್ಟರಲ್ಲಿ ಒಂದು ಸುಂದರವಾದ ಅರಮನೆ ಎದುರಾಯಿತು. ಅದನ್ನು ನೋಡಿದ ಬ್ರಾಹ್ಮಣ ದಂಪತಿಗಳು ಚಕಿತರಾದರು. "ಓಹೋ ನೋಡಲು ನರಿಯಾದರೂ ನಿರ್ಮಿಸಿದ ಅರಮನೆ ಸುಂದರವಾಗಿದೆ" ಎಂದು ಬ್ರಾಹ್ಮಣ ದಂಪತಿಗಳು ಸಂತೋಷಗೊಂಡರು. ಬೇಗ ಬೇಗನೇ ನಡೆಯತೊಡಗಿದರು.

ಅವನ ಅರಮನೆಯ ಕೆಲಸದಾಳುಗಳು "ಅತಿಥಿಗಳು ಬಂದರು, ಬಂದರು" ಎಂದು ಹೇಳುತ್ತಾ ಅವರಿಗೆ ಕುಳಿತುಕೊಳ್ಳಲು ಕುರ್ಚಿಗಳನ್ನು ತಂದಿತ್ತರು. ಬಂದವರಿಗೆ ಬೆಲ್ಲ ನೀರು ಇಟ್ಟರು. ವೀಳೆಯದೆಲೆ ಮುಂದಿಟ್ಟರು. ಬ್ರಾಹ್ಮಣ ದಂಪತಿಗಳು ಅವುಗಳನ್ನು ಮೆದ್ದರು. "ನಮ್ಮ ಮಗಳನ್ನು ತೋರಿಸಿ" ಎಂದರು. ಕೂಡಲೇ ನರಿ ಬ್ರಾಹ್ಮಣನ ಮಗಳನ್ನು ಕರೆದು "ನೋಡು ನಿನ್ನ ತಂದೆ ತಾಯಂದಿರು ಬಂದಿದ್ದಾರೆ. ಹೊರಗೆ ಬಾ. ನಿನ್ನನ್ನು ಸ್ವಲ್ಪ ನೋಡಲಿ?" ಎಂದಳು.

ಅದಕ್ಕೆ ಬ್ರಾಹ್ಮಣ ಹೇಳಿದ "ನಿನ್ನ ಗಂಡನೇ ನಮ್ಮನ್ನು ಇಲ್ಲಿಗೆ ಕರೆತಂದ. ನಮಗೆ ದಾರಿ ತಿಳಿದಿರಲಿಲ್ಲ. ನಾವು ನಿನ್ನ ಆಶೆ ಬಿಟ್ಟಿದ್ದೆವು. ನರಿ ನಿನ್ನನ್ನು ಎಲ್ಲಿಗೋ ಕೊಂಡೊಯ್ದು ತಿಂದುಬಿಟ್ಟಿದೆ ಎಂದು ಭಾವಿಸಿದ್ದೆವು. ಆದರೆ ನೀನು ಬದುಕಿದ್ದಿ. ನೋಡಿ ತುಂಬ ಸಂತೋಷವಾಯಿತು" ಎಂದರು.

"ಇದೀಗ ನಾವು ಹೋಗುತ್ತೇವೆ" ಎಂದು ಬ್ರಾಹ್ಮಣ ದಂಪತಿಗಳು ಹೇಳಿದರು. "ಮಾನವರೇ ಇಲ್ಲಿ ನೋಡಿ, ನಾನು ನಿಮ್ಮ ಮಗಳನ್ನು ನನ್ನೊಂದಿಗೆ ಕರೆತಂದೆ. ಇದೀಗ ಅವಳನ್ನು ಮದುವೆ ಮಾಡಿಕೊಡಬೇಕು" ಎಂದು ನರಿ ಹೇಳಿತು.

ಅದಕ್ಕೆ ಅವಳ ತಂದೆ ಬ್ರಾಹ್ಮಣ ಹೇಳಿದನು "ಮದುವೆ ಮಾಡಿಕೊಡುವುದಕ್ಕೆ ನಮಗೆ ಅನುಕೂಲವಿಲ್ಲ. ನಮ್ಮಲ್ಲಿ ಹಣವಾಗಲೀ, ಅಕ್ಕಿಯಾಗಲೀ ಇಲ್ಲ. ನಾನು ಹೇಗೆ ಮದುವೆ ನಡೆಸಿಕೊಡಲಿ? ನೀನೇ ಎಲ್ಲಾ ಖರ್ಚು ಮಾಡುವುದಾದರೆ ನಾವು ಬಂದು ಮದುವೆ ಮಾಡಿಕೊಡುತ್ತೇವೆ" ಎಂದನು.

ನರಿ ಅದಕ್ಕೆ "ಆಗಲಿ ನಿಮಗೆ ಬೇಕಾದವರನ್ನು ಒಟ್ಟು ಸೇರಿಸಿ ದಿಬ್ಬಣ ಕರೆತನ್ನಿ. ನಾನು ಇಲ್ಲೇ ಮದುವೆಗೆ ಏರ್ಪಾಡು ಮಾಡುತ್ತೇನೆ" ಎಂದನು. ಅದಕ್ಕೆ ಬ್ರಾಹ್ಮಣ "ನಿನ್ನಲ್ಲಿಗೆ ಹೆಣ್ಣನ್ನು ತಂದು ಮದುವೆ ಮಾಡಿಕೊಟ್ಟಲ್ಲಿ ಅದರಿಂದ ನಾವು ಹಲ್ಕ(ಅನುಮಾನ) ಆಗುವುದಿಲ್ಲವೇ? ನಿನ್ನಲ್ಲಿಗೆ ನಾವು ದಿಬ್ಬಣ ತರಲಾರೆವು. ಹೀಗೆ ಮಾಡಿದಲ್ಲಿ ನಿಮ್ಮ ಜನ ನನ್ನನ್ನು ಹಾಸ್ಯ ಮಾಡುವರು.

ನಮ್ಮೂರಿಗೆ ಬಂದರೆ ನರಿ ದಿಬ್ಬಣ ಬಂದಿತೆಂದು ಜನ ನಗಾಡಿಯಾರು. ಆದುದರಿಂದ ನೀನು ಒಬ್ಬನೇ ನಮ್ಮಲ್ಲಿಗೆ ಬಾ. ನೀನು ಮದುವೆ ಖರ್ಚಿಗೆ ನಮಗೆ ಸ್ವಲ್ಪ ಸಹಾಯ ಮಾಡಬೇಕು" ಎಂದನು. "ಆಗಲಿ" ಎಂದಿತು ನರಿ. ನರಿ ಮತ್ತೆ ಹೇಳಿತು. "ನಾನು ನಿನಗೊಂದು ಪೆಟ್ಟಿಗೆಯನ್ನು ಕೊಡುವೆ. ಅದನ್ನು ನಿಮ್ಮೊಂದಿಗೆ ಕೊಂಡೊಯ್ಯಿರಿ. ಸ್ನಾನವಾದ ಮೇಲೆ ಬೇಕಿದ್ದ ವಸ್ತುವನ್ನು ಮನಸ್ಸಿನಲ್ಲಿ ಎಣಿಸಿಕೊಂಡು ಬಾಗಿಲು ತೆರೆಯಬೇಕು. ಆಗ ಆ ವಸ್ತುಗಳು ಪ್ರತ್ಯಕ್ಷವಾಗುತ್ತವೆ" ಎಂದಿತು.

"ಹಾಗಿದ್ದರೆ ಆಗಲಿ" ಬ್ರಾಹ್ಮಣ ಹೇಳಿದ. "ನಮಗೆ ಮೊದಲಿಗೆ ಒಂದು ಮನೆ ಬೇಕು. ಆ ಬಳಿಕ ಅಕ್ಕಿಬೇಕು. ಮನೆಗೆ ಬೇಕಾದ ವಸ್ತುಗಳು ಆಗಬೇಕು. ಪಾತ್ರೆ ಪರಡಿಗಳು, ಉಪ್ಪು, ಮೆಣಸು, ಖರ್ಚಿಗೆ ಕಾಸು, ಮೈಮುಚ್ಚಲು ಬೇಕಾದ ಉಡುಪು ಇವಿಷ್ಟುಬೇಕು" ಎಂದನು ಆ ಬ್ರಾಹ್ಮಣ. ಅದಕ್ಕೆ ನರಿ ಹೇಳಿತು "ನಿನಗೆ ಏನು ಬೇಕೆಂದೆನಿಸುತ್ತದೆಯೋ ಅವನ್ನೆಲ್ಲಾ ಮನಸ್ಸಿನಲ್ಲಿ ಎಣಿಸಿಕೊ. ಎಲ್ಲವೂ ನಿನ್ನ ಕೈಸೇರುತ್ತದೆ" ಎಂದಿತು. ಆ ಪೆಟ್ಟಿಗೆಯನ್ನು ಬ್ರಾಹ್ಮಣನಿಗೆ ನರಿ ಕೊಟ್ಟಿತು. ಪೆಟ್ಟಿಗೆಯನ್ನು ಹಿಡಿದುಕೊಂಡ ದಂಪತಿಗಳು ಮರುದಿನ ಬೆಳಗ್ಗೆ ತಮ್ಮ ಮನೆಗೆ ಬಂದರು. ಬ್ರಾಹ್ಮಣ ತನ್ನ ಹೆಂಡತಿಯಲ್ಲಿ ಹೇಳಿದ. "ನರಿ ನಮಗೆ ಒಂದು ಪೆಟ್ಟಿಗೆಯನ್ನು ಕೊಟ್ಟಿದೆ. ಇದರಿಂದ ಹೊಸದೇನನ್ನಾದರೂ ಪಡೆಯಬಹುದೋ ಏನೋ ತಿಳಿಯದು. ಏನೇ ಆಗಲಿ ಪರೀಕ್ಷಿಸಿ ನೋಡೋಣ" ಎಂದನು.

ಮರುದಿನ ಬೆಳಗ್ಗೆ ಎದ್ದ ಬ್ರಾಹ್ಮಣ ಸ್ನಾನ ಮುಗಿಸಿ ಬಂದು ಪೆಟ್ಟಿಗೆಯ ಎದುರು ಉದ್ದಂಡ ನಮಸ್ಕಾರ ಮಾಡಿದ. "ದೇವರೇ, ನರಿ ನಮಗೊಂದು ಪೆಟ್ಟಿಗೆಯನ್ನು ಕೊಟ್ಟಿದೆ. ಇದರಿಂದ ನಮಗೆ ಒಳ್ಳೆಯದಾಗುತ್ತದೋ ಕೆಟ್ಟದಾಗುತ್ತದೋ ತಿಳಿಯದು. ಏನಿದ್ದರೂ ಮನಸ್ಸಿನಲ್ಲಿ ನನಗೆ ಬೇಕಿದ್ದ ವಸ್ತುಗಳನ್ನು ಎಣಿಸುತ್ತಾ ಪೆಟ್ಟಿಗೆಗೆ ನಮಸ್ಕರಿಸುತ್ತಿದ್ದೇನೆ. ನಾನು ಬಯಸಿದ ವಸ್ತುಗಳು ಕಣ್ಣೆದುರಿಗೆ ಬಂದಲ್ಲಿ ಅದು ನನ್ನ ಅದೃಷ್ಟ ಹಾಗಾಗದಿದ್ದಲ್ಲಿ ಎಂದಿನಂತೆ ಭಿಕ್ಷೆ ಬೇಡಿಕೊಂಡು ಬರುತ್ತೇನೆ" ಎಂದನು. ಮೊದಲಿಗೆ ಹೇಳಿದ "ನಮಗೊಂದು ಅಡುಗೆ ಮನೆ. ಜಗಲಿ, ಮಲಗುವ ಕೋಣೆ ಆಗಬೇಕು" ಹೀಗೆ ಹೇಳಿ ಎದ್ದೇಳುವಷ್ಟರಲ್ಲಿ ಒಂದು ಸುಂದರವಾದ ಮನೆಯೊಳಗೆ ಇದ್ದಂತಾಯಿತು! ಅವನು ಹೇಳಿದ. ನರಿ ಹೇಳಿದಂತೆ ಆಗಿದೆ! ನಮಗೊಂದು ಹೊಸ ಮನೆ ಆಗಿದೆ. ತನ್ನ ಹೆಂಡತಿಯಲ್ಲಿ ಕೇಳಿದ "ಮನೆಯಲ್ಲಿ ಎಷ್ಟು ಕೋಣೆಗಳಿವೆ? ಕೆಳಗೆಷ್ಟು ಕೋಣೆಗಳು, ಮೇಲೆಷ್ಟು ನೋಡಿಕೊಂಡು ಬಾ" ಎಂದನು. ಅವಳು ಒಂದು ಕೋಣೆಗೆ ಹೋದ ಬ್ರಾಹ್ಮಣನ ಹೆಂಡತಿ "ಇಲ್ಲಿ ಒಂದು ಪೆಟ್ಟಿಗೆಯಿದೆ. ಅದರೊಳಗೆ ತುಂಬ ದುಡ್ಡು ಇದೆ. ಅಷ್ಟೇ ಅಲ್ಲ. ಇದರಲ್ಲಿ ಏನೇನೋ ಸಾಮಾನು ಇವೆ" ಎಂದಳು. ಅವಲು ಅಲ್ಲಿಂದ ಅಡುಗೆ ಮನೆಗೆ ಹೋದಳು. ಅಲ್ಲಿ ಬಗೆಬಗೆಯ ಅಡುಗೆ ಸಿದ್ಧವಾಗಿದೆ. ಬಚ್ಚಲು ಮನೆಯಲ್ಲಿ ಸ್ನಾನಕ್ಕೆ ನೀರು ಕಾದಿತ್ತು. ಇದನ್ನು ಕಂಡ ಗಂಡ

"ಮೊದಲು ಸ್ನಾನ ಮಾಡೋಣ, ಊಟ ಮುಗಿಸೋಣ. ಆ ಬಳಿಕ ಏನಿದೆ ಏನಿಲ್ಲ ಎನ್ನುವುದನ್ನು ವಿಚಾರಿಸೋಣ. ಆಮೇಲೆ ನಮಗೇನು ಬೇಕು ಎನ್ನುವುದನ್ನು ಆಲೋಚಿಸೋಣ" ಎಂದನು.

ಗಂಡ ಹೆಂಡತಿ ಸ್ನಾನ ಮುಗಿಸಿದರು. ಊಟ ಪೂರೈಸಿದರು. ಊಟವಾದ ಬಳಿಕ ಅವನು ಹೇಳಿದ : ನರಿ ಬಂದರೆ ಹೀಗೆ ಹೇಳೋಣ. "ಮದುವೆ ದಿಬ್ಬಣ ನಾಡಿದ್ದೇ ಬರಲಿ" ಎಂದು.

ಈ ದಿನ ಅವರಿಬ್ಬರೂ ನಿದ್ರೆ ಹೋದರು. ಮರುದಿನ ಬೆಳಗ್ಗೆ ಹೆಂಡತಿ ನೀರುತರಲು ಹೋದಳು ನೀರು ತರುವಾಗ ನೆರೆಹೊರೆಯವರು "ಈ ಮನೆ ನಿಮಗೆ ಹೇಗೆ ಬಂತು" ಎಂದು ಕೇಳಿದರು. ಅದಕ್ಕೆ ಅವಳು "ನಾವು ನಮ್ಮ ಮಗಳನ್ನು ನರಿಗೆ ಕೊಟ್ಟೆವು. ಪ್ರತಿಯಾಗಿ ಅದು ನಮಗೆ ಬೇಕಾದುದೆನ್ನೆಲ್ಲಾ ನೀಡಿತು. ನಾಳೆ ನರಿ ಮದುವೆ ದಿಬ್ಬಣ ತೆಗೆದುಕೊಂಡು ಬರಲಿದೆ. ಇಲ್ಲಿ ನಾಳೆ ನನ್ನ ಮಗಳ ಮದುವೆ ನಡೆಯಲಿದೆ" ಎಂದಳು.

"ಹಾಗೇನಾ, ದೊಡ್ಡ ಗುಮ್ಮತ್ತಾ ನಿಮ್ಮಲ್ಲಿ" ಎಂದರು. ಅವರು, "ನಾವು ನಿಮ್ಮನ್ನೆಲ್ಲಾ ಆಮಂತ್ರಿಸುತ್ತೇವೆ. ನೀವೆಲ್ಲರೂ ನಮ್ಮ ಮಗಳ ಮದುವೆಗೆ ಬರಬೇಕು" ಎಂದು ಬ್ರಾಹ್ಮಣನ ಹೆಂಡತಿ ಹೇಳಿದಳು.

ನರಿ ದಿಬ್ಬಣ ತೆಗೆದುಕೊಂಡು ಬಂದಿತು. ಬೇಕಾದ ಸಾಮಾನುಗಳನ್ನು ತಂದಿತು. ಮದುವೆಗೆ ಬೇಕಾದ ಪುರೋಹಿತರನ್ನು ಮತ್ತಿತರರನ್ನು ಕರೆತಂದಿತು. ಮದುವೆ ಸಾಂಗವಾಗಿ ಜರಗಿತು. ಮದುಮಗನ ದಿಬ್ಬಣ ದಂಡಿಗೆಯಲ್ಲಿ ಬಂದಿತು. ಮದುಮಗ ಮಾತ್ರ ನರಿ. ಆದರೆ ನರಿಯೊಂದಿಗೆ ಧಾರೆ ನಡೆದುಹೋಯಿತು. ಊರವರು "ಮದುಮಗಳು ಸುಂದರವಾಗಿದ್ದಾಳೆ, ಆದರೆ ಮದುಮಗ ಮಾತ್ರ ನರಿ" ಎಂದರು. ಧಾರೆಯ ಗಂಡು ನರಿಯನ್ನು ಹಿಡಿದು ಕುಳ್ಳಿರಸಿದರು. ಅದು ಆ ಕಡೆ ಈ ಕಡೆ ಓಡಾಡತೊಡಗಿತು. ಹೇಗೋ ಧಾರೆ ನಡೆಯಿತು. ದಿಬ್ಬಣ ಮರಳಿ ಹೋಯಿತು.

ಬ್ರಾಹ್ಮಣನ ಬಳಿಯಿರುವ ಪೆಟ್ಟಿಗೆಯ ಮೇಲೆ ಊರವರ ಕಣ್ಣು ಬಿದ್ದಿತ್ತು. "ಈ ಬಡ ಬ್ರಾಹ್ಮಣ ಇಷ್ಟೊಂದು ಸಂಪತ್ತನ್ನು ಮಗಳನ್ನು ನರಿಗೆ ಕೊಟ್ಟು ಪಡೆದ. ದಿನವೂ ನಮ್ಮ ಮನೆಗೆ ಬೇಡಲು ಬರುತ್ತಿದ್ದ. ಬೆಳಗ್ಗೇನು, ಸಂಜೆಗೇನು ಎಂದು ಲೆಕ್ಕ ಹಾಕುತ್ತಿದ್ದ ಅವನು. ಇದ್ದಕ್ಕಿದ್ದಂತೆ ಇಷ್ಟೊಂದು ಸಂಪತ್ತನ್ನು ಹೇಗೆ ಪಡೆದ" ಎನ್ನತೊಡಗಿದ ಅವರು ಬಡ ಬ್ರಾಹ್ಮಣನ ಮೇಲೆ ಅಸೂಯೆಪಡತೊಡಗಿದರು. ಅಸೂಯಾಪರರಾದ ಅವರು ಬ್ರಾಹ್ಮಣನ ಹೆಂಡತಿಯಲ್ಲಿ ಕೇಳಿದರು. "ನಿನಗೆ ಈ ಶ್ರೀಮಂತಿಕೆ ಹೇಗೆ ಬಂತು? ದಿನವೂ ಮನೆ ಮನೆ ಬೇಡುತ್ತಿದ್ದವರು ನೀವು". ಎಂದರು. ಹೀಗೆ ಹೇಳಿದವಳು ಕ್ಷೌರಿಕನ ಹೆಂಡತಿ. ಆಕೆ ಗಂಡನಲ್ಲಿಗೆ ಹೋಗಿ. "ನೋಡಿ ಮಾರಾಯ್ರೆ, ನೀವು ಇದ್ದೇನು ಉಪಯೋಗ? ಬ್ರಾಹ್ಮಣನನ್ನು ನೋಡಿದಿರಾ? ಭಿಕ್ಷೆ ಬೇಡಿಕೊಂಡು ಬಂದು ಉಣ್ಣುತ್ತಿದ್ದ. ಈಗ ಒಮ್ಮೆ ಹೋಗಿ ಅವನ ಮನೆಯನ್ನು ನೋಡಿಕೊಂಡು ಬನ್ನಿ" ಎಂದಳು. "ಹೌದೇ, ಅವನು ಅಷ್ಟೊಂದು ದೊಡ್ಡವನಾಗಿ ಬಿಟ್ಟನಾ? ಹೌದಾದರೆ ಒಮ್ಮ ನೋಡಿಕೊಂಡು

ಬರಬೇಕು. ನಾವು ಹೋಗೋಣ. ಅವನಿಗೆ ಈ ಸ್ಥಿತಿ ಹೇಗೆ ಬಂತೆಂಬುದನ್ನು ನಾನು ಅವನಲ್ಲಿ ಕೇಳುತ್ತೇನೆ". ಹೀಗೆ ಹೇಳಿ ಆ ಕ್ಷೌರಿಕ ಬ್ರಾಹ್ಮಣನಲ್ಲಿಗೆ ಬಂದನು. ಬಂದು ಬ್ರಾಹ್ಮಣನಲ್ಲಿ "ಇದು ಯಾವ ನಮೂನೆಯ ಕೆಲಸ ಇದು ಹೇಗೆ ಸಾಧ್ಯವಾಯಿತು?" ಎಂದು ಕೇಳಿದ.

"ಇಲ್ಲಿ ನೋಡು ಮಾರಾಯಾ, ನಾನು ನನ್ನ ಮಗಳನ್ನು ನರಿಗೆ ಮದುವೆ ಮಾಡಿ ಕೊಟ್ಟೆ. ಈ ನರಿ ನಿನಗೆ ಒಂದು ಚಿಕ್ಕ ಪೆಟ್ಟಿಗೆಯನ್ನು ನೀಡಿತು. ಸ್ನಾನ ಮಾಡಿ ಈ ಪೆಟ್ಟಿಗೆಯ ಬಾಯಿ ತೆರೆದು ಕೈಬೆರಳುಗಳಿಂದ ಎರಡು ಬಾರಿ ಹೊಡೆದು ಮತ್ತೆ ಕಣ್ಣುಮುಚ್ಚಿ ಮನಸ್ಸಿನಲ್ಲಿ ಬೇಕಾದುದನ್ನು ಎಣಿಸಿಕೊಂಡರೆ ಹಣ, ಬಂಗಾರ ಎಲ್ಲವೂ ಒದಗುತ್ತವೆ" ಎಂದು ಆ ಬ್ರಾಹ್ಮಣ ಹೇಳಿದ. "ಹಾಗಾದರೆ ಒಮ್ಮೆ ನೋಡಬೇಕೆಲ್ಲಾ" ಎಂದು ಹೇಳಿ ಆ ಕ್ಷೌರಿಕ ಮನೆಗೆ ಮರಳಿದ. ಹೆಂಡತಿಗೆ ಹೇಳಿದ, "ಹೇಗಾದರೂ ಮಾಡಿ ಆ ಪೆಟ್ಟಿಗೆಯನ್ನು ನಾವು ಕದ್ದು ತರಬೇಕು" ಎಂದುಕೊಂಡರು.

ಒಂದು ದಿನ ಬ್ರಾಹ್ಮಣ ಸ್ವಜಾತಿ ಬಾಂಧವರನ್ನೆಲ್ಲಾ ತನ್ನ ತಾಯಿಯ ಶ್ರಾದ್ಧಕ್ಕಾಗಿ ಮನೆಗೆ ಆಮಂತ್ರಿಸಿದ. "ಇಂದು ನನ್ನ ತಾಯಿಯ ಶ್ರಾದ್ಧದ ದಿನ. ನೀವೆಲ್ಲರೂ ಮಧ್ಯಾಹ್ನದ ಊಟಕ್ಕೆ ಬರಬೇಕು" ಎಂದು ಹೋಗಿ ಆಮಂತ್ರಿಸಿ ಬಂದ. ಊರವರೆಲ್ಲರೂ ಹೇಳತೊಡಗಿದರು "ನೋಡೋಣ, ಈ ಬ್ರಾಹ್ಮಣ ಕೊಟ್ಟರೆ ನಾಲ್ಕಾರು ಮಂದಿಗೆ ಊಟ ಕೊಟ್ಟಾನು. ಊರವರೆಲ್ಲರಿಗೂ ಆತ ಎಲ್ಲಿಂದ 'ಕೊಟ್ಟಾನು? ಹುಚ್ಚುತನ" ಎಂದುಕೊಳ್ಳುತ್ತಾ ಐವತ್ತು ಅರುವತ್ತು ಮಂದಿ ಸೇರಿ ಬ್ರಾಹ್ಮಣನ ಮನೆಗೆ ಹೋದರು. ಬ್ರಾಹ್ಮಣ ಬರಹೇಳಿದ ಹೊತ್ತಿಗೆ ಸರಿಯಾಗಿ ಅವರು ಅಲ್ಲಿಗೆ ಹೋದರು. ಅಲ್ಲಿ ಅಡುಗೆಯವರೂ ಇಲ್ಲ. ಊಟಕ್ಕೆ ಅಡುಗೆಯೂ ಆಗಿರಲಿಲ್ಲ. ಗಂಡ, ಹೆಂಡತಿ ಇಬ್ಬರೂ ಕುಳಿತಿದ್ದರು. ಊರ ಬ್ರಾಹ್ಮಣರು "ಈ ಬ್ರಾಹ್ಮಣ ನಮ್ಮನ್ನೆಲ್ಲ ತಾಯಿಯ ವಾರ್ಷಿಕ ಶ್ರಾದ್ಧಕ್ಕೆ ಬರಹೇಳಿದ್ದಾನೆ. ಬಂದು ನೋಡಿದರೆ ಇಲ್ಲಿ ಅಡುಗೆ ಮನೆಯಲ್ಲಿ ಯಾವ ಸದ್ದೂ ಇಲ್ಲ. ನಮಗೇನನ್ನು ಬಡಿಸುತ್ತಾನೆ ನೋಡಬೇಕು" ಎನ್ನತೊಡಗಿದರು. ನಾವೀಗ ಹೋಗಿ ಅವನನ್ನು ಗದರಿಸಿ "ಊಟ ಎಲ್ಲಿ" ಎಂದು ಕೇಳೋಣ. ಅವನು ಊಟ ನೀಡಿದಿದ್ದರೆ ಎರಡು ಬಡಿದು ಹೋಗೋಣ. ಹೀಗೆ ಅವರು ಗುಂಪಾಗಿ ಬ್ರಾಹ್ಮಣನ ಬಳಿಗೆ ಹೋದರು.

"ನೋಡಯ್ಯಾ, ಊಟ ಎಲ್ಲಿ? ನಮ್ಮನ್ನು ಊಟಕ್ಕೆ ಎರಡು ಗಂಟೆಗೆ ಬರುವಂತೆ ಹೇಳಿದ್ರಿ, ನಾವು ಬಂದಿದ್ದೇವೆ ಊಟ ಬಡಿಸು" ಎಂದು ಗದರಿಸಿ ಕೇಳಿದರು. ಅದಕ್ಕೆ ಬ್ರಾಹ್ಮಣ "ಶ್ರಾದ್ಧದ ಕರ್ಮಾಂಗಗಳೆಲ್ಲವೂ ಆಗಬೇಕು. ಮಂತ್ರಪಠಣವಾಗಬೇಕು. ಆ ಬಳಿಕವೇ ಊಟ" ಎಂದನು. ಶ್ರಾದ್ಧಕರ್ಮ(ಮೂಲದಲ್ಲಿ ವಾಮ>ಹೋಮ) ಆರಂಭವಾಯಿತು. ಮಂತ್ರಪಠಣಕ್ಕೆ ತೊಡಗಿದರು. ಎಲೆಯನ್ನು(ವಾಯುಸಾನ್ನ) ಕಾಗೆಗೆ ಹೊರಗೆ ಇರಿಸಿಯಾಯಿತು. ಬ್ರಾಹ್ಮಣರು ಊಟಕ್ಕೆ ಕುಳಿತರು. "ಅಡುಗೆಯವರು ಎಲ್ಲಿ? ಊಟಕ್ಕೆ ಬಳಸು" ಎಂದು ಬಂದ ಬ್ರಾಹ್ಮಣರು ಹೇಳಿದರು.

ಬಂದವರಿಗೆ ಹೊಟ್ಟೆ ತುಂಬ ಬಡಿಸಲಾಯಿತು. ಕೈತುಂಬ ದಕ್ಷಿಣೆ ನೀಡಲಾಯಿತು. ಬಂದ ಬ್ರಾಹ್ಮಮರ ಉ ಮನೆಗೆ ಹೊರಟರು. ಕೊನೆಯಲ್ಲಿ ಊರ ಕ್ಷೌರಿಕ ಹೋಗಿ ಒತ್ತಾಯ ಪೂರ್ವಕ(ಬ್ರಾಹ್ಮಣನನ್ನು) ಭಂಗಿಸಿ "ನಿನ್ನ ಒಕ್ಕಲಾದ ನಮಗೆ ಊಟವಿಲ್ಲವೇ"? ಎಂದು ಕೇಳಿದ. ಬ್ರಾಹ್ಮಣ ಹೇಳಿದ "ನೀನು ಕೊಂಚ ಬೇಗ ಬರಬೇಕಿತ್ತು. ಈಗ ಎಲ್ಲವೂ ಮುಗಿದಿದೆ. ಇನ್ನೊಂದು ಸರ್ತಿ ಒಕ್ಕಲಿನವರನ್ನೆಲ್ಲಾ ನಾನು ಬರಹೇಳುತ್ತೇನೆ. ಆಗ ಬನ್ನಿರಿ, ಊಟ ಮಾಡಬಹುದು ಎಂದ". ಅದಕ್ಕೆ ಕ್ಷೌರದವನು ಹೇಳಿದ "ಹಾಗಾದರೆ ನನಗಿಂದು ಊಟವಿಲ್ಲವೇ? ಊಟ ನೀಡದಿದ್ದರೆ ನಿನ್ನನ್ನು ಸುಮ್ಮಗೆ ಬಿಡಲಾರೆ" ಎಂದು ಗದರಿಸಿದ. ಕ್ಷೌರದವನಿಗೂ ಬ್ರಾಹ್ಮಣನಿಗೂ ಜಗಳ ಆರಂಭವಾಯಿತು. ಬ್ರಾಹ್ಮಣನಿಗೆ ಎರಡು ಹೊಡೆದು ಬ್ರಾಹ್ಮಣನನ್ನು ದೂಡಿ ಅವನಲ್ಲಿದ್ದ ಪೆಟ್ಟಿಗೆಯನ್ನು ಅಪಹರಿಸಿಕೊಂಡು ಹೋದ. ಅವನು ಹೋದಾಗ ಆ ಬ್ರಾಹ್ಮಣನ ಮನೆಯಲ್ಲಿ ಏನೇನೂ ಉಳಿದಿರಲಿಲ್ಲ. ಅಕ್ಕಿ, ಉಪ್ಪು, ಮೆಣಸು ಒಂದೂ ಇರಲಿಲ್ಲ. ಬರಿ ಮನೆ ಮಾತ್ರ ಉಳಿದಿತ್ತು. ಬ್ರಾಹ್ಮಣ ದಂಪತಿಗಳು "ದೇವರೇ ನಮ್ಮ ಅಳಿಯ ನಮಗೆ ಸುಖ ಸಂಪತ್ತನ್ನು ತಂದಿತ್ತ. ಆದರೆ ನಮ್ಮ ಶತ್ರುಗಳು ಅದನ್ನು ಅನುಭವಿಸಲು ಬಿಡಲಿಲ್ಲ" ಎಂದು ಅವರು ಗೋಳಾಡತೊಡಗಿದರು. ಅಳುತ್ತಾ ಕುಳಿತು ರಾತ್ರಿ ಕಳೆದರು. ಇದನ್ನು ತಿಳಿದ ನರಿ ಮರುದಿನ ಬೆಳಿಗ್ಗೆ ಬಂದಿತು.

"ಮಾವನವರೇ, ಏಕೆ ಅಳುತ್ತಿದ್ದೀರಿ? ಏನಾಯಿತು? ಯಾರು ಏನು ಮಾಡಿದರು?" ಎಂದು ಕೇಳಿತು. ಬ್ರಾಹ್ಮಣ ನಡೆದ ಕತೆಯನ್ನೆಲ್ಲಾ ವಿವರಿಸಿ ಹೇಳಿದ. ಅದಕ್ಕೆ ನರಿ ಹೇಳಿತು "ಅದನ್ನು ಅವರು ತೆಗೆದುಕೊಂಡು ಹೋದರೆ ಹೋಗಲಿ. ನಿಮಗೆ ನಾನು ಇನ್ನೊಂದು ಪೆಟ್ಟಿಗೆಯನ್ನು ನೀಡುತ್ತೇನೆ. ತೆಗೆದುಕೊಳ್ಳಿ. ನೀವು ನೆನೆದದ್ದನ್ನು ಈ ಪೆಟ್ಟಿಗೆ ನೀಡುತ್ತದೆ. ಹಿಂದೆ ನಾನು ಕೊಟ್ಟಿದ್ದ ಪೆಟ್ಟಿಗೆಯಿಂದ ಹೇಗೆ ಬೇಕುಬೇಕಾದವುಗಳನ್ನು ಪಡೆಯುತ್ತಿದ್ದೀರೋ ಹಾಗೆಯೇ ಇದರಿಂದಲೂ ಪಡೆಯಬಹುದು. ಇಂದೂ ಊರಿನವರನ್ನು ನಿನ್ನ ಒಕ್ಕಲಿನವರನ್ನು ಊಟಕ್ಕೆ ಕರೆದು ಉಣಬಡಿಸು" ಅವರು ಬಂದಾಗ ಅವರ ಎದುರು ಈ ಪೆಟ್ಟಿಗೆಯನ್ನು ತೆಗೆದು ಎರಡು ಬಾರಿ ಬೆರಳುಗಳಿಂದ ಹೊಡೆದು ಎಷ್ಟು ಜನ ಸೇರಿ ನನ್ನ ಪೆಟ್ಟಿಗೆಯನ್ನು ಕದ್ದೊಯ್ದಿದ್ದಾರೋ ಅಷ್ಟು ಜನ ಸಿಪಾಯಿಗಳು ಹೊರಬಂದು ಕದ್ದೊಯ್ದವರಿಗೆ ಹೊಡೆಯಬೇಕು ಎನ್ನು. ಅಷ್ಟರಲ್ಲಿ ಅಲ್ಲಿದ್ದವರು ನಿನ್ನಲ್ಲಿ "ನಮಗೆ ಮಾಫಿ ಕೊಡಬೇಕು. ದಮ್ಮಯ್ಯ. ನಮಗೆ ನಿನ್ನ ಪೆಟ್ಟಿಗೆ ಬೇಡ. ನಿನಗೆ ತಂದೊಪ್ಪಿಸುತ್ತೇವೆ. ನಮ್ಮನ್ನು ಬಿಟ್ಟು ಬಿಡಿ" ಎನ್ನುತ್ತಾರೆ. ಆಗ ಪೆಟ್ಟಿಗೆಯ ಬಾಯಿಯನ್ನು ಮುಚ್ಚಿಬಿಡು. ಬಂದ ಸಿಪಾಯಿಗಳೆಲ್ಲರೂ ಮಾಯಾವಾಗುತ್ತಾರೆ. ಬಂದವರೆಲ್ಲ ಹೊರಟು ಹೋಗಿ ಕೊಂಡೊಯ್ದ ನಿನ್ನ ಪೆಟ್ಟಿಗೆಯನ್ನು ಮರಳಿಸುತ್ತಾರೆ" ಎಂದಿತು ನರಿ. 'ಆಗಲಿ' ಎಂದನು ಬ್ರಾಹ್ಮಣ. ಈ ಜನರಿಗೆ ತಕ್ಕ ಮದ್ದರೆಯುವುದಾಗಿ ಬ್ರಾಹ್ಮಣ ಎಣಿಸಿಕೊಂಡು ಊರಮೇಲೆ ಹೋಗಿ ಎಲ್ಲರನ್ನೂ ಊಟಕ್ಕೆ ಆಮಂತ್ರಿಸಿ ಬಂದ. ಎಲ್ಲರೂ ಬಂದರು.

"ಮೊನ್ನೆಯಷ್ಟೇ ಈ ಬ್ರಾಹ್ಮಣನ ಪೆಟ್ಟಿಗೆಯನ್ನು ನಾವು ಒಯ್ದಿದ್ದೆವು. ಇಂದು ಮತ್ತೆ ಊಟಕ್ಕೆ ಕರೆಯುತ್ತಿದ್ದಾನೆ. ಇಂದೇನು ಮಾಡುತ್ತಿದ್ದಾನೆ. ನೋಡಬೇಕು" ಎಂದುಕೊಂಡರು ಊರಮಂದಿ. ಬಂದ ಊರಮಂದಿ ಉಂಡು ತೆರಳಿದರು. ಆ ಬಳಿಕ ಒಕ್ಕಲು ಮಂದಿ ಬಂದರು. ಬ್ರಾಹ್ಮಣ ಪೆಟ್ಟಿಗೆಗೆ ಬಡಿದು "ಯಾರಿಗೆ ಊಟ ಬೇಕು? ಬನ್ನಿ ಕುಳಿತುಕೊಳ್ಳಿ" ಎಂದನು. ಅಡುಗೆಯವರೆ ಬಂದವರಿಗೆ ಬಡಿಸಿರಿ ಎಂದು ಬ್ರಾಹ್ಮಣ ಹೇಳಿದ. ಪೆಟ್ಟಿಗೆ ಬಡಿದ. ಒಡನೆಯೇ ಪೆಟ್ಟಿಗೆಯೊಳಗಿಂದ ಸಿಪಾಯಿಗಳು ಬಂದರು. ಒಬ್ಬೊಬ್ಬರಿಗೆ ಇಬ್ಬರಂತೆ ಸಿಪಾಯಿಗಳು ಪ್ರತ್ಯಕ್ಷರಾದರು. ಸಿಪಾಯಿಗಳು ಒಬ್ಬೊಬ್ಬ ಒಕ್ಕಲಿನವನಿಗೂ ಮೈತುಂಬ ಪೆಟ್ಟು ಹೊಡೆದರು. ಅತ್ತರು, ಚೀರಿದರು. ದಮ್ಮಯ್ಯ ದಕ್ಕಯ್ಯ ಹಾಕಿದರು. "ನಮಗೆ ನಿಮ್ಮ ಪೆಟ್ಟಿಗೆ ಬೇಡ ಎನ್ನುತ್ತಾ ಅಪಹರಿಸಿದ್ದ ಪೆಟ್ಟಿಗೆಯನ್ನು ಮರಳಿಸಿದರು. ಅಷ್ಟರಲ್ಲಿ ಬ್ರಾಹ್ಮಣ ಪೆಟ್ಟಿಗೆಯ ಮುಚ್ಚಳ ಮುಚ್ಚಿದ. ಬಂದ ಸಿಪಾಯಿಗಳು ಮರೆಯಾದರು. "ಇನ್ನು ಮುಂದೆ ನಾವು ನಿನ್ನ ಸುದ್ದಿಗೆ ಬರುವುದಿಲ್ಲ" ಎಂದ ಹೇಳಿ ಹೊರಟುಹೋದರು. ಹೀಗೆ ಬ್ರಾಹ್ಮಣರೂ ಅವನ ಹೆಂಡತಿಯೂ ನೆಮ್ಮದಿಯಲ್ಲಿ ಇರಹತ್ತಿದರು".

ಇತ್ತ ಬ್ರಾಹ್ಮಣನನ್ನು ಮದುವೆಯಾದ ನರಿ ರಾತ್ರಿಯ ಮೊದಲ ಅರ್ಧ ನರಿಯಾಗಿದ್ದರೆ, ಮುಂದಿನ ಅರ್ಧ ಮನುಷ್ಯನಾಗಿರುತ್ತಿತ್ತು. ಹೀಗಾದಾಗ ನರಿಯ ಹೆಂಡತಿ ಸ್ನಾನಕ್ಕಾಗಿ ಬಿಸಿನೀರು ಕಾಯಿಸುತ್ತಿದ್ದಳು. ಬಿಸಿನೀರು ಕಾದಾಗ ನರಿ ಅಲ್ಲಿಗೆ ಬಂದು "ಸಾರಾಬಿರ್ದ್ ಬರಲಿ, ಗೆಜ್ಜೆಯ ಕಂಬಳಿ ಹಾಸಲಿ" ಎನ್ನುತ್ತಿತ್ತು. ಅಷ್ಟರಲ್ಲಿ ನರಿಯ ರೂಪ ಮಾಯವಾಗಿ ಅಲ್ಲಿ ಮನುಷ್ಯ ಆಕಾರ ರೂಪುಗೊಳ್ಳುತ್ತಿತ್ತು. ಆ ಬಳಿಕ ಸ್ನಾನ ಮಾಡಿ ಊಟವಾಗುತ್ತಿತ್ತು. ಇಷ್ಟಾದ ಬಳಿಕ "ಸಾರಾ ಬಿರ್ದ್ ಬರಲಿ, ಗೆಜ್ಜೆಯ ಕಂಬಳಿ ಹಾಸಲಿ" ಎಂದಾಗ ಮತ್ತೆ ಮನುಷ್ಯ ರೂಪ ಹೋಗಿ ನರಿರೂಪು ಬರುತ್ತಿತ್ತು. ಹೀಗಿರುವಾಗ ಆ ಬ್ರಾಹ್ಮಣನ ಮಗಳು ಮನಸ್ಸಲ್ಲೇ ಆಲೋಚಿಸಿದಳು. "ಇದು ಹೇಗೆ ಆಗುತ್ತಿದೆ? ನಾನೊಮ್ಮೆ ನೋಡಬೇಕು" ಎನ್ನುತ್ತಾ ಕುದಿಕುದಿ ಬಿಸಿನೀರು ಮಾಡಿಟ್ಟಳು. ಒಂದಿಷ್ಟು ತಣ್ಣೀರು ಸಿಗದಂತೆ ಮಾಡಿದಳು. ಅವಳು ದೂರ ನಿಂತೆಲ್ಲವನ್ನೂ ನೋಡಹತ್ತಿದಳು. ನರಿ ಸ್ನಾನಕ್ಕೆಂದು ಬಂದಿತು. ಬಿಸಿ ನೀರಿಗೆ ಕೈ ಹಾಕಿ ನೋಡಿದರೆ ಅದು ಕುದಿಯುತ್ತಿತ್ತು. ನಈರು ಬೆರಸಲೆಂದು ಅತ್ತಿತ್ತ ನೋಡಿದರೆ ಒಂದು ಹನಿ ನೀರೂ ಕಾಣಿಸಲಿಲ್ಲ". ಎಲ್ಲಾದರೂ ಹೋಗಿ ತಣ್ಣೀರು ತರುವುದಾಗಿ ಹೇಳಿ ಅವನು(ನರಿ) ಹೋದನು. ಅವನು ನೀರು ತರುವುದರೊಳಗೆ ಆಕೆ ಅವನ ಕಂಬಳಿಯನ್ನು ಬಿಸಿನೀರಿನ ಒಲೆಯೊಳಗೆ ಹಾಕಿ ಸುಟ್ಟಳು. ಅದರಿಂದ ಕೆಟ್ಟ ವಾಸನೆ ಬರಹತ್ತಿತ್ತು. "ಅಯ್ಯೋ ದೇವರೇ, ನನ್ನ ಕಂಬಳಿ ಅದು ಹೆಗೆ ಬೆಂಕಿಯೊಳಗೆ ಬಿದ್ದಿತು ಎನ್ನುತ್ತಾ ನೀರು ಹಿಡಿದುಕೊಂಡು ಬಂದನು. ಅವನು ಓಡಿ ಬಂದಾಗ ಅವಳು ಅವನಿಗೆದುರಾದಳು. ಅವನನ್ನು ಅಪ್ಪಿ ಹಿಡಿಯಲು ಮುಂದಾದಳು. ಅವನು ಹೇಳಿದ "ನಿಲ್ಲು, ನಿಲ್ಲು, ಮುಟ್ಟ ಬೇಡ, ದೂರ ಹೋಗು".

"ನಾನೇಕೆ ದೂರ ನಿಲ್ಲಬೇಕು" ಎಂದಳು ಆಕೆ.

"ನೀನು ನನ್ನನ್ನು ಮುಟ್ಟಿದಲ್ಲಿ ನೀನು ಸುಟ್ಟು ಹೋಗುವೆ. ನನ್ನನ್ನು ನಾನೇ ಪರೀಕ್ಷೆಗೆ ಗುರಿಪಡಿಸಬೇಕಾಗಿದೆ. ಮೂರು ಕೊಪ್ಪರಿಗೆ ನೀರು ಸಿದ್ಧಮಾಡು. ನನ್ನ ಪರೀಕ್ಷೆ ನೋಡು" ಎಂದನು.

ಅವನು ಒಂದು ಕೊಪ್ಪರಿಗೆ ತಣ್ಣೀರಿಗೆ ಹಾರಿದನು. ಅವನು ಅದರೊಳಗೆ ಹಾರಿದೊಡನೆ ಅದರೊಳಗಿನ ತಣ್ಣೀರು ಗುಜುಗುಜು ಕುದಿಯತೊಡಗಿತು. ಆ ಬಳಿಕ ಇನ್ನೊಂದು ಕೊಪ್ಪರಿಗೆಯೊಳಗೆ ಹಾರಿದ. ಅದು ಬಿಸಿಯಾಯಿತು. ಮೂರನೆಯ ಕೊಪ್ಪರಿಗೆಗೆ ಹಾರಿದಾಗಲೂ ಅದು ಸ್ವಲ್ಪ ಬಿಸಿಯಾಯಿತು.

ಅವನು ನೀರಿಂದ ಮೇಲೆ ಬಂದು ಹೆಂಡತಿಯನ್ನು ಪ್ರೀತಿಯಿಂದ ಮಾತನಾಡಿಸಿದನು "ಈಗ ನನ್ನನ್ನು ಮುಟ್ಟು ನೋಡೋಣ ಎಂದನು. ಹೆಂಡತಿ. ಗಂಡನನ್ನು ಮುಟ್ಟಿದಾಗ ಅವನ ಮೈ ತಣ್ಣಗಾಗಿತ್ತು. ಅಂದಿನಿಂದ ಗಂಡ ಹೆಂಡತಿ ಸಂತೋಷದಿಂದ ಪ್ರೀತಿಯಿಂದ ಇದ್ದರು".

ಕೃಪೆ: ಡಾ. ಡಿ.ಎನ್. ಶಂಕರಭಟ್ಟರ The Koraga Language ಪುಸ್ತಕದಲ್ಲಿ ಪ್ರಕಟವಾದ The tale of Fox ಕತೆಯ ಅನುವಾದ.

## ಹಸು ಮತ್ತು ಹುಲಿ

ಒಂದಾನೊಂದು ಊರಲ್ಲಿ ಒಬ್ಬ ಬ್ರಾಹ್ಮಣನಿದ್ದನು. ಅವನಿಗೊಬ್ಬಳು ಹೆಂಡತಿ. ಅವರು ಊರಲ್ಲಿ ದಾನದಕ್ಷಿಣೆ ಪಡೆದು ಬದುಕು ಸಾಗಿಸುತ್ತಿದ್ದರು. ಒಂದು ದಿನ ಆ ಬ್ರಾಹ್ಮಣನಿಗೆ ಗೋದಾನವಾಗಿ ಒಂದು ಹಸು ಸಿಕ್ಕಿತು. ತಂದ ಹಸುವನ್ನು ಆತ ಹೆಂಡತಿಗೆ ಸಾಕಲು ಒಪ್ಪಿಸಿದ. ಆಕೆ ಅದಕ್ಕೆ ಹುಲ್ಲುನೀರು ಕೊಟ್ಟು ಚೆನ್ನಾಗಿ ಸಾಕಿದಳು. ಕೆಲವು ದಿನಗಳಲ್ಲಿ ಅದಕ್ಕೆ ಗಬ್ಬ ಕಟ್ಟಿತು. ಬ್ರಾಹ್ಮಣಿತಿಗೆ ಸಂತೋಷವಾಯಿತು. ಅಷ್ಟರಲ್ಲಿ ಆ ಹಸುವಿಗೆ ಕ್ಷಯರೋಗ ತಗಲಿತು. ಹಾಲು ಕೊಡುವುದು ನಿಲ್ಲಿಸಿತು. ಮನೆ ಯಜಮಾನಿಗೆ ಹಸುವಿನ ಮೇಲೆ ಸಿಟ್ಟು ಬಂದಿತು. ಅವಳು ಹಸುವನ್ನು ಬೈದಳು. "ತುಂಬಿದ ಬಸುರಿಯಾದ ನಿನ್ನನ್ನು ಹುಲಿ ಹಿಡಿಯಲಿ" ಎಂದು ಹೇಳಿ ಅದನ್ನು ಕಾಡಿಗೆ ಅಟ್ಟಿದಳು.

ಹಸು ಕಾಡಿಗೆ ನಡೆಯಿತು. ಅಲ್ಲಿ ಒಂದು ಹುಲಿಯ ಬಾಯಿಗೆ ಸಿಕ್ಕಿತು. "ನಾನು ಮೂರು ದಿನಗಳಿಂದ ಉಪವಾಸವಿದ್ದೇನೆ. ಹೊಟ್ಟೆ ಹಸಿದಿದೆ. ನಿನ್ನನ್ನು ತಿಂದೇ ತಿನ್ನುತ್ತೇನೆ" ಎಂದು ಹುಲಿ ಅಬ್ಬರಿಸಿತು. ಆಗ ಹಸು "ನಾನು ಬಸುರಿ. ನೀನೂ ನನ್ನಂತೆ ಬಸುರಿ. ನೀನೂ ಹೆಣ್ಣು, ನಾನೂ ನಿನ್ನಂತೆ ಹೆಣ್ಣು. ನನ್ನನ್ನು ನೀನು ಚೆನ್ನಾಗಿ ನೋಡಿಕೊಂಡರೆ ಒಂದಲ್ಲ ಒಂದು ದಿನ ನಿನ್ನ

ಉಪಕಾರಕ್ಕೆ ಬರುತ್ತೇನೆ'' ಎಂದಿತು. ಹುಲಿಯ ಮನಸ್ಸು ಕರಗಿತು. ಎರಡೂ ಪ್ರೀತಿಯಿಂದ ಇದ್ದವು. ಕಾಡಿಗೆ ಜೊತೆಯಾಗಿ ಹೋಗಿ ಬರುತ್ತಿದ್ದವು.

ಒಂದು ದಿನ ಹುಲಿ ಮರಿ ಹಾಕಿತು. ಹಸುವೂ ಈಯಿತು. ಹಸು ಮತ್ತು ಹುಲಿಯ ಮರಿಗಳು ಜೊತೆಯಾಗಿ ಬೆಳೆಯುತ್ತಿದ್ದವು. ಹುಲಿಯ ಮರಿಗೆ ಹುಲಿರಾಜನೆಂದೂ, ಹಸುವಿನ ಕರುವಿಗೆ ಬಸವರಾಜನೆಂದೂ ಹೆಸರಿಟ್ಟರು. ಹೀಗಿರುವಾಗ ಒಂದು ದಿನ ಹಸುವಿಗೆ ಎರಡು ಕಡಿ ತೆಂಗಿನಕಾಯಿ ಸಿಕ್ಕಿತು. ಅದು ತಂದು ತನ್ನ ಮಗನಿಗೆ ಕೊಟ್ಟಿತು. ಬಸವರಾಜ ತನ್ನ ಗೆಳೆಯ ಹುಲಿರಾಜನನ್ನು ಕರೆದು "ನನ್ನ ಅಮ್ಮ ಎರಡು ಕಡಿ ತೆಂಗಿನಕಾಯಿ ತಂದಿದ್ದಾರೆ. ಜೊತೆಯಾಗಿ ತಿನ್ನೋಣ" ಎಂದಿತು. ಇದನ್ನು ಕೇಳಿಸಿಕೊಂಡ ಮರಿ ಹುಲಿರಾಜನಿಗೆ ಸಿಟ್ಟು ಬಂದಿತು. "ನಿನ್ನ ಅಮ್ಮ ನಿನಗೆ ಆಹಾರ ತಂದುಕೊಡುತ್ತಾಳೆ. ನನ್ನ ಅಮ್ಮ ಈತನಕ ನನಗೆ ಆಹಾರ ತಂದದ್ದಿಲ್ಲ. ಇಂದು ನಾನು ನನ್ನ ಅಮ್ಮ ನೀಡುವ ಹಾಲನ್ನು ಕುಡಿಯಲಾರೆ" ಎಂದಿತು. ಅಷ್ಟರಲ್ಲಿ ಹುಲಿ ಬಂದಿತು. ಹಾಲು ಕುಡಿಯುವಂತೆ ಹೇಳಿತು. "ಅಮ್ಮಾ ನಾನು ನಿನ್ನ ಹಾಲನ್ನು ಕುಡಿಯಲಾರೆ, ಬಸವರಾಜನ ತಾಯಿ ಅವನಿಗೆ ಆಹಾರ ತಂದುಕೊಡುತ್ತಾಳೆ. ನೀನು ನನಗೆ ಈತನಕ ಏನನ್ನೂ ತಂದುಕೊಟ್ಟಿಲ್ಲ. ಅದಕ್ಕಾಗಿ ನಾನು ನಿನ್ನ ಹಾಲು ಕುಡಿಯುವುದಿಲ್ಲ" ಎಂದಿತು. ಇದನ್ನು ಕೇಳಿಸಿಕೊಂಡ ಹುಲಿಗೆ ಹಸುವಿನ ಮೇಲೆ ಸಿಟ್ಟು ಬಂದಿತು. "ಆ ದಿನ ನಾನು ನಿನ್ನನ್ನು ತಿನ್ನದೆ ಬದುಕಿಸಿದೆ, ಇಂದು ನೀನು ನನ್ನ ಮತ್ತು ಮಗೂನ ನಡುವೆ ವೈರತ್ವ ತಂದು ಹಾಕುತ್ತೀಯಾ. ನಿನ್ನನ್ನು ನಾಳೆ ಮಧ್ಯಾಹ್ನ ಹನ್ನೆರಡು ಗಂಟೆಯ ಹೊತ್ತಿಗೆ ಕೊಂದು ತಿನ್ನುತ್ತೇನೆ" ಎಂದು ಗರ್ಜಿಸಿತು. ಹಸುವಿಗೆ ಈ ಸುದ್ದಿ ತಿಳಿಯಿತು. ಆ ದಿನ ಹೊತ್ತಾರೆ ಎದ್ದ ಹಸು ತನ್ನ ಮಗನನ್ನು ಕರೆಯಿತು. "ಇಂದು ಬೇಗನೇ ನನ್ನ ಕೆಚ್ಚಲಿಗೆ ಬಾಯಿಕೊಟ್ಟು ಹೊಟ್ಟೆ ತುಂಬ ಹಾಲು ಕುಡಿ. ನಾಳೆಯಿಂದ ನಿನಗೆ ಹಾಲು ಸಿಗಲಾರದು ಮಗಾ" ಎಂದಿತು. ಬಾಲ ಬಸವರಾಜ ಅದೇಕಮ್ಮ ಹೀಗೆ ಹೇಳುತ್ತಿ ಎಂದು ಕೇಳಿದ. "ನೀನು ಕಾರಣ ಹೇಳದಿದ್ದರೆ ನಾನು ನಿನ್ನ ಹಾಲು ಕುಡಿಯಲಾರೆ" ಎಂದನು. "ಮಗನೆ, ಬೇರೆ ಏನೂ ಅಲ್ಲ. ಹುಲಿ ಈ ದಿನ ನನ್ನ ಮೇಲೆ ಏರಿ ತಿನ್ನಲಿದೆಯಂತೆ, ನಾನು ಸಾಯಲಿದ್ದೇನೆ. ನನಗೆ ಬದುಕಿನ ಆಶೆ ಇಲ್ಲ" ಎಂದಿತು, ಇದನ್ನು ಕೇಳಿದ ಬಾಲಕ ಬಸವರಾಜ ಗೋಳೋ ಎಂದು ಅಳತೊಡಗಿದ. "ನಾನು ನಿನ್ನ ಹಾಲು ಕುಡಿಯಲಾರೆ ಅಮ್ಮಾ, ಸಾಯಲು ಹೊರಟಿರುವ ನಿನ್ನ ಹಾಲನ್ನು ನಾನು ಕುಡಿಯಲಾರೆ" ಎಂದಿತು. ಹಸು ಎರಡೂ ಹೊಂಡ ತೋಡಿ ಅದರಲ್ಲಿ ತನ್ನ ಹಾಲನ್ನು ತುಂಬಿಟ್ಟಿತು. ಹಸು ಮಗನಿಗೆ ಹೇಳಿತು. "ಮಗನೇ, ನಾನು ಹೋದ ಬಳಿಕ ಈ ಹೊಂಡದ ಹಾಲನ್ನು ನೋಡುತ್ತಿರು. ಹುಲಿ ನನ್ನನ್ನು ಹಿಡಿದೊಡನೆ ಈ ಹಾಲಿನ ಬಣ್ಣ ಕಪ್ಪಾಗುತ್ತದೆ. ನನ್ನನ್ನು ಅದು ತಿಂದು ಮುಗಿಸಿದೊಡನೆ ಅದರ ಬಣ್ಣ ಕೆಂಪಾಗುತ್ತದೆ''.

ಇಷ್ಟು ಹೇಳಿ ಹಸು ಹುಲಿಯಿದ್ದಲ್ಲಿಗೆ ಹೋಯಿತು. ಕರು ಬಸವರಾಜು ಹೊಂಡವನ್ನು ನೋಡುತ್ತಾ ಅಳುತ್ತಿತ್ತು. ಹಸು ಅಡವಿ ಸೇರಿತು. ಹುಲಿ ಹಸುವನ್ನು ಕಂಡೊಡನೆ ಹಾರಿ ಕಚ್ಚಿಕೊಂದು ತಿಂದಿತು.

ಕರು ಬಸವರಾಜ ಹೊಂಡದೊಳಗಿನ ಹಾಲನ್ನು ನೋಡುತ್ತಾ ಕುಳಿತಿತ್ತು. ಅಲ್ಲಿಗೆ ಹುಲಿರಾಜ ಬಂದಿತು. "ನೋಡು ಹುಲಿರಾಜ, ಇಂದು ನಿನ್ನ ಅಮ್ಮ ನನ್ನ ಅಮ್ಮನನ್ನು ಕೊಂದು ತಿಂದಳು. ಇನ್ನೂ ನನ್ನನ್ನು ನೋಡಿಕೊಳ್ಳುವವರು ಯಾರೂ ಇಲ್ಲ. ನಾನು ಎಲ್ಲಿಗೆ ಹೋಗಲಿ?" ಎನ್ನುತ್ತಾ ಬಸವರಾಜ ಅಳತೊಡಗಿದ. ಹುಲಿರಾಜ ಗೆಳೆಯನನ್ನು ಸಮಾಧಾನ ಮಾಡತೊಡಗಿದ. "ನನ್ನ ಅಮ್ಮ ನಿನ್ನ ಅಮ್ಮನನ್ನನ್ನು ಕೊಂದು ತಿಂದುದಕ್ಕೆ ದುಃಖಿಸಬೇಡ. ನಾವಿಬ್ಬರೂ ಸೇರಿ ನನ್ನ ಅಮ್ಮನನ್ನು ಕೊಂದು ತಿನ್ನೋಣ" ಎಂದಿತು. ಇದನ್ನು ಕೇಳಿದ ಬಸವರಾಜ ಅಳು ನಿಂತಿತು. ಹುಲಿ ಬರುವ ಹೊತ್ತಾಯಿತು. ಅಲ್ಲಿ ಒಂದು ದೊಡ್ಡ ಹೊಂಡ. ಅದರ ಮೇಲಕ್ಕೆ ಒಂದು ದೊಟ್ಟ ಬೆಟ್ಟವಿದ್ದಿತ್ತು. ಹುಲಿ ಮರಿ ಹಾಗೂ ಹಸುವಿನ ಮರಿಗಳು ದೊಡ್ಡ ಗಾತ್ರದ ಕಲ್ಲುಗಳನ್ನು ಸಂಗ್ರಹಿಸಿ ಹೊಂಡದ ಬಳಿ ಇರಿಸಿದವು. ಹುಲಿ ಬಂದಿತು. ಹುಲಿ ತನ್ನ ಮರಿಗೆ ಹಾಲು ಕುಡಿವಂತೆ ಹೇಳಿತು. "ನನಗೆ ನಿನ್ನ ಹಾಲು ಬೇಡ. ಅಮ್ಮ, ನಾನೂ ಸಣ್ಣ ಮರಿ ಹೌದು. ಬಸವರಾಜು ಎಳೆಗಂದಿ, ಅವನ ಅಮ್ಮ ಬಾರದೆ ನಾನು ಹಾಲು ಕುಡಿಯಲಾರೆ. ಅವನ ಅಮ್ಮ ಬಂದೊಡನೆ ನಾವು ಜೊತೆಯಾಗಿ ಹಾಲು ಕುಡಿಯುತ್ತೇವೆ. ಅಲ್ಲಿಯವರೆಗೆ ಹಾಲು ಬೇಡ" ಎಂದಿತು.

"ಬೇಡ ಮಗಾ, ಕಾಡಿನಲ್ಲಿ ನೂರ ಒಂದು ಬಗೆಯ ಸೊಪ್ಪಿನ ಕುಡಿ ತಿಂದು ಅದು ಬರಬೇಕು. ತುಂಬ ತಡವಾಗಬಹುದು. ನಾನಾದರೋ ಮರದ ತೊಗಟೆ ಅಗಿದು ಬಂದೆ, ನನ್ನ ಕೆಚ್ಚಲು ತುಂಬಿದೆ. ಮಗನೇ ನನ್ನ ಹಾಲು ಕುಡಿ" ಎಂದಿತು ಹುಲಿ. "ನೀನು ಎಷ್ಟು ಒತ್ತಾಯಿಸಿದರೂ ಅಮ್ಮಾ ನಾನು ನಿನ್ನ ಹಾಲು ಕುಡಿಯಲಾರೆ" ಎಂದನು ಹುಲಿರಾಜ. ಹುಲಿ ಕಣ್ಣೀರು ಹಾಕಿ ಅತ್ತಿತು. ಅಮ್ಮಾ ನೀನು ಹೇಳಿದಂತೆ ಕೇಳುವಿಯಾ, ಹಾಗಿದ್ದರೆ ನಾನು ಹಾಲು ಕುಡಿವೆ" ಎಂದು ಹುಲಿ ಮರಿ ಹೇಳಿತು. "ಮಗೂ, ನೀನು ಹೇಳಿದಂತೆ ನಾನು ಕೇಳುವೆ" ಎಂದಿತು ಹುಲಿ. ಹಾಗಿದ್ದರೆ ನೀನು ಹೋಗಿ ಆ ಹೊಂಡದ ಬಳಿ ನಿಲ್ಲು ನಾನು ನಿನ್ನ ಹಾಲು ಕುಡಿಯಲು ಅಲ್ಲಿಗೆ ಬರುವೆ" ಎಂದಿತು ಹುಲಿ ಮರಿ. ಹುಲಿಹೋಗಿ ಹೊಂಡದ ಬಳಿ ನಿಂತಿತು. ಹುಲಿರಾಜ ಹಾಲು ಕುಡಿಯಲೆಂದು ಅಮ್ಮನ ಬಳಿ ಬಂದಿತು. ತಾಯಿಯ ಕೆಚ್ಚಲಿಗೆ ಬಾಯಿ ಹಾಕಿದ ಹುಲಿರಾಜ ಅಮ್ಮನನ್ನು ಹೊಂಡಕ್ಕೆ ನೂಕಿತು. "ಬಸವರಾಜಾ, ಬಾ, ಕಲ್ಲುಗಳನ್ನು ಹೊತ್ತು ಹಾಕು" ಎಂದು ಕೂಗು ಹೇಳಿತು. ಬಸವರಾಜ ತಂದಿಟ ಕಲ್ಲುಗಳನ್ನು ಹೊಂಡಕ್ಕೆ ಎಸೆಯಿತು. ಹುಲಿಯ ಮೆಲೆ ಕಲ್ಲುಗಳ ಬಿದ್ದುವು. ಅದು ಅಲ್ಲೇ ಬಿದ್ದು ಸತ್ತಿತು.

ಈಗ ಇಬ್ಬರಿಗೂ ನೋಡಿಕೊಳ್ಳಲು ಅಮ್ಮಂದಿರು ಇಲ್ಲ. ಅವರು ಎಲ್ಲಿಗೆ ಹೋಗಬೇಕು? ದಿಕ್ಕಿಲ್ಲದಾದರು. ಇಬ್ಬರೂ ಕುಳಿತು ಅಳತೊಡಗಿದರು. ಅಷ್ಟರಲ್ಲಿ ನಾರಾಯಣ ದೇವರು ಲಕ್ಷ್ಮೀದೇವಿಯೊಂದಿಗೆ ಕಾಣಿಸಿಕೊಂಡರು. "ಮಕ್ಕಳೇ ಈ ಕಾಡಿನ ನಡುವೆ ನೀವೇಕೆ ಇದ್ದೀರಿ? ನಿಮಗೇನು ಕಷ್ಟ ಬಂದಿತು. ಹೇಳಿ" ಎಂದರು.

ಮರಿಗಳು ಹೇಳಿದವು "ನನ್ನ ಅಮ್ಮನನ್ನು ಇವನ ಅಮ್ಮ ಕೊಂದು ತಿಂದಳು. ಅದಕ್ಕಾಗಿ ನಾವಿಬ್ಬರೂ ಸೇರಿ ಅವನ ಅಮ್ಮನನ್ನು ಕೊಂದೆವು. ಹೀಗಾಗಿ ನಾವೀಗ ತಬ್ಬಲಿಗಳು. ಏನಾದರೂ ಮಾಡೋಣವೆಂದರೆ ನಮಗೆ ಮನುಷ್ಯ ರೂಪವಿಲ್ಲ. ನಮ್ಮ ಹೆಸರು ಬಸವರಾಜ, ಹುಲಿರಾಜ. ನಮಗೆ ಮನುಷ್ಯ ರೂಪ ನೀಡಿ. ಬದುಕಲು ದಾರಿ ಮಾಡಿಕೊಡಿ" ಎಂದು ಕೇಳಿಕೊಂಡರು.

"ಇಬ್ಬರೂ ಎರಡೆರಡು ಕಲ್ಲು ಹಿಡಿದುಕೊಂಡು ಬನ್ನಿ" ಎಂದ ದೇವರು ಇಬ್ಬರಿಗೂ ಎರಡೆರಡು ಕಿವಿಗೆ ವಜ್ರದ ಒಂಟಿ ಮಾಡಿಕೊಟ್ಟರು. "ಈ ಒಂಟಿ ಇನ್ನೊಬ್ಬರ ಕೈಗೆ ಹೋಗದಂತೆ ಎಚ್ಚರಿಕೆಯಿಂದಿರಿ. ಇವುಗಳನ್ನು ಕಳೆದುಕೊಂಡರೆ ನಿಮ್ಮ ಜೀವಕ್ಕೆ ಅಪಾಯ ಉಂಟು" ಎಂದು ದೇವರು ಹೇಳಿದರು. ಕಿವಿಗೆ ಒಂಟಿಗಳನ್ನು ಧರಿಸಿಕೊಂಡೊಡನೆ ಆ ಮರಿಗಳಿಗೆ ಮನುಷ್ಯ ರೂಪ ಬಂದಿತು. ದೇವರು ಇಷ್ಟರಲ್ಲಿ ಮಾಯವಾದರು. ಹುಡುಗರು ಮತ್ತೆ ಅಳತೊಡಗಿದರು.

ದೇವರು ಮತ್ತೆ ಕಾಣಿಸಿಕೊಂಡರು. "ಏಕೆ ಮತ್ತೆ ಅಳುತ್ತೀರಿ?" ಎಂದು ದೇವರು ಕೇಳಿದರು. "ನಿಮಗೇನು ಬೇಕು? ನಿಮಗೆ ದೀರ್ಘಾಯುಷ್ಯ ನೀಡಿದ್ದೇನೆ. ನಿಮಗೆ ಇನ್ನೇನು ಬೇಕು" ಎಂದು ಕೇಳಿದರು. ಅದಕ್ಕೆ ಆ ಹುಡುಗರು "ನಮಗೆ ಇನ್ನೇನೂ ಬೇಡ, ಆದರೆ ಕೈಗಳಿಗೊಂದು ಆಯುಧ ಬೇಕು" ಎಂದರು. ಆಗ ದೇವರು "ಎರಡು ಕೋಲುಗಳನ್ನು ಮುರಿದುಕೊಂಡು ಬನ್ನಿ" ಎಂದರು. ಆ ಹುಡುಗರು ಹಾಗೆಯೇ ಮಾಡಿದರು. ದೇವರು ಎರಡು ಪಿಸ್ತೂಲುಗಳನ್ನು ನಿರ್ಮಿಸಿದರು. "ಸಾವಿರ ಆಳುಗಳು ಬಂದರೂ ಈ ಪಿಸ್ತೂಲಿನ ಒಂದು ಗುರಿಗೆ ಎಲ್ಲರೂ ನಾಶವಾಗುವರು" ಎಂದು ಹೇಳಿ ಇಬ್ಬರಿಗೂ ಒಂದೊಂದು ಪಿಸ್ತೂಲು ನೀಡಿದರು. ಬಸವರಾಜ, ಹುಲಿರಾಜ ಇಬ್ಬರು ಊರ ಕಡೆಗೆ ನಡೆದರು.

ಹೀಗಿರುವಾಗ ಒಂದೂರಲ್ಲಿ ಒಬ್ಬ ಅರಸು. ಅಲ್ಲೊಂದು ಶಾರ್ದೂಲವಿದ್ದಿತ್ತು. ಅದು

ಮನುಷ್ಯರನ್ನು ಬೇಟೆಯಾಡತೊಡಗಿತು. ಸಂಜೆ ಹೊತ್ತು ಕಂತಿದೊಡನೆ ಅದು ಮನುಷ್ಯರನ್ನು ತಿನ್ನತೊಡಗುತ್ತಿತ್ತು. ಅದನ್ನು ಎದುರಿಸಲಾಗದೆ ಎಲ್ಲರೂ ದುಃಖಿತರಾದರು.

ಆ ಅರಸರ ಅರಮನೆಯ ಪಕ್ಕದಲ್ಲಿ ಒಂದು ಕೆರೆ ಇತ್ತು. ಆ ಶಾರ್ದೂಲ ನೀರು ಕುಡಿಯಲು ಆ ಕೆರೆಗೆ ಬರುತ್ತಿತ್ತು. ಹೀಗಾಗಿ ಸಂಜೆ ಆರರ ಹೊತ್ತಿಗೆ ಇಡಿಯ ಊರನ್ನೇ ಮುಚ್ಚಿ ಜನ ಮನೆ ಸೇರುತ್ತಿದ್ದರು. ಆ ದಿನ ಈ ಇಬ್ಬರು ಯುವಕರು ಕೆರೆಯ ದಂಡೆಯ ಸಮೀಪಕ್ಕೆ ಬಂದರು. ಅಲ್ಲೇ

ವಿಶ್ರಮಿಸಿದರು. ಅಷ್ಟರಲ್ಲಿ ಒಂದು ಮುದುಕಿ ಬಂದು 'ನೀವು ಯಾರಪ್ಪ? ನೀವು ಯಾರ ಮಕ್ಕಳು? ಇಲ್ಲೇಕೆ ಮಲಗಿದ್ದೀರಿ? ಶಾರ್ದೂಲ ಬಂದು ನಿಮ್ಮ ಮೇಲೆ ಎರಗಿ ಖಂಡಿತಾ ಕೊಲ್ಲುತ್ತದೆ. ಇಲ್ಲೇ ಸಮೀಪ ಅರಮನೆ ಇದೆ. ಅಲ್ಲಿ ಹೋಗಿ ಮಲಗಿಕೊಳ್ಳಿ' ಎಂದಳು. ಆದರೆ ಆ ಬಾಲಕರು ಮುದುಕಿಯ ಮಾತುಗಳನ್ನು ಕಿವಿಗೆ ಹಾಕಿಕೊಳ್ಳಲಿಲ್ಲ. ರಾತ್ರೆಯಾಯಿತು. ಎಂದಿನಂತೆ ಶಾರ್ದೂಲ ಬಂದಿತು.

ಹುಲಿರಾಜನಿಗೆ ಗಾಢ ನಿದ್ದೆ ಬಂದಿತ್ತು. ಬಸವರಾಜ ಎಚ್ಚರವಾಗಿದ್ದನು. ತನ್ನ ಪಿಸ್ತೂಲಿನಿಂದ ಶಾರ್ದೂಲಕ್ಕೆ ಈಡಿಟ್ಟನು. ಅದರ ಶಬ್ದಕ್ಕೆ ಹುಲಿರಾಜನಿಗೆ ಎಚ್ಚರವಾಯಿತು. ಅವನೂ ತನ್ನ ಪಿಸ್ತೂಲಿನಿಂದ ಗುರಿಯಿಟ್ಟು ಹೊಡೆದನು. ಶಾರ್ದೂಲ ಸತ್ತು ಬಿದ್ದಿತು. ಇಬ್ಬರೂ ಸೇರಿ ಅದರ ಕಿವಿತುದಿ, ಮೂಗು ಹಾಗೂ ಬಾಲದ ತುದಿಗಳನ್ನು ಕತ್ತರಿಸಿ ತಂದು ಬಟ್ಟೆಯೊಂದರಲ್ಲಿ ಕಟ್ಟಿ ತಮ್ಮ ತಲೆ ಬುಡದಲ್ಲಿರಿಸಿ ನಿದ್ದೆ ಹೋದರು. ಹೊತ್ತು ಮೂಡಿತು. ಊರ ಆಗಸ ತನ್ನ ಬಟ್ಟೆ ಒಗೆಯಲು ಕೆರೆಗೆ ಬಂದನು. ಅಲ್ಲಿ ಮಲಗಿದ್ದ ಶಾರ್ದೂಲವನ್ನು ಕಂಡು ಭಯಪಟ್ಟನು. ಶಾದೂಲ ಬದುಕಿದೆಯೋ ಎಂದು ಭಾವಿಸಿ ಕಲ್ಲು ಎಸೆದ. ಆದರೆ ಅದು ಅಲ್ಲಾಡಲಿಲ್ಲ. ಅದು ಸತ್ತಿತ್ತು. ಇದನ್ನು ತಿಳಿದ ಅಗಸ ಶಾರ್ದುಲದ ಕತ್ತರಿಸಿದ ಕಿವಿ, ಮೂಗು, ಬಾಲದ ತುದಿಯನ್ನು ಕತ್ತರಿಸಿಕೊಂಡು ಕಟ್ಟಿ ನೇರವಾಗಿ ಅರಮನೆಗೆ ನಡೆದ. ಅರಸ ಶಾರ್ದೂಲವನ್ನು ಕೊಂದವನಿಗೆ ತನ್ನ ಮಗಳನ್ನು ಮದುವೆಮಾಡಿ ಕೊಡುವುದಾಗಿ ಘೋಷಿಸಿದ್ದ. ಅಳಿಯನಿಗೆ ಪಟ್ಟವನ್ನು ಬಿಟ್ಟುಕೊಡುವುದಾಗಿ ಹೇಳಿದ್ದ ಆಗಸ ಅರಮನೆಗೆ ನಡೆದವನೇ ತಾನು ತಂದಿದ್ದ ಶಾರ್ದೂಲದ ಬಾಲ, ಮೂಗು ಹಾಗೂ ಕಿವಿ ತುದಿಗಳನ್ನು ಅರಸನ ಮುಂದಿಟ್ಟು 'ನಾನು ಶಾರ್ದೂಲವನ್ನು ಹೊಡೆದು ಕೊಂಡಿದ್ದೇನೆ. ನೀವು ಆಡಿದಂತೆ ಮಗಳನ್ನು ಮದುವೆ ಮಾಡಿಕೊಡಿ' ಎಂದನು.

ಅರಸ ತನ್ನವರಿಗೆ ಮದುಮಗಳನ್ನು ಸ್ನಾನಮಾಡಿಸಿ ಮದುವೆ ಸಿಂಗಾರ ಮಾಡಿಸಿ ತಲೆ ತುಂಬ ಹೂಮುಡಿಸಿ ಅಲಂಕರಿಸುವಂತೆ ಹೇಳಿದ. ಅಷ್ಟರಲ್ಲಿ ಹಿಂದಿನ ದಿನ ಯುವಕರನ್ನು ಕೆರೆದಂಡೆಯಲ್ಲಿ ಕಂಡಿದ್ದ ಮುದುಕಿ "ಈ ಆಗಸ ಶಾರ್ದೂಲವನ್ನು ಕೊಂದಿರಲಾರ, ನಾನೂ ನಿನ್ನೆ ಕೆರೆದಂಡೆಯಲ್ಲಿ ಇಬ್ಬರು ಯುವಕರಿದ್ದುದನ್ನು ಕಂಡಿದ್ದೆ. ಅವರನ್ನು ಇಲ್ಲಿಗೆ ಕರೆಸಿದರೆ ಸತ್ಯ ತಿಳಿಯುತ್ತದೆ" ಎಂದಳು. ಅರಸ ಯುವಕರನ್ನು ಕರೆತರುವಂತೆ ಜನ ಕಳುಹಿಸಿದ. ಹೋದ ಆಳುಗಳು ಮರಳಿ ಬಂದು "ಅವರು ಮಾತಾಡಿದರೆ ಮಾತಾಡುತ್ತಿಲ್ಲ" ಎಂದರು. ಅರಸ ಸ್ವತಃ ಯುವಕರಲ್ಲಿಗೆ ತೆರಳಿ ಅರಮನೆಗೆ ಬರುವಂತೆ ಆಹ್ವಾನಿಸಿದ. ಅವರು ಬಂದರು. "ನೀವು ಶಾರ್ದೂಲವನ್ನು ಕೊಂದಿರಾ?" ಎಂದು ಕೇಳಿದ. ಯುವಕರು ಅರಸನಲ್ಲಿ "ತಾವು ಕೊಂದುದು ಹೌದು" ಎಂದು ಹೇಳಿದರು. "ಅರಸ ಹೀಗೇಕೆ ಕೇಳುತ್ತಿದ್ದಾನೆ" ಎಂದು ಅವರು ಕೇಳಿದರು. ಆಗ ಅರಸ ನರಹಂತಕ ಶಾರ್ದೂಲವನ್ನು ಕೊಂದವರಿಗೆ ತನ್ನ ಮಗಳನ್ನು ಮತ್ತು ಪಟ್ಟವನ್ನು ಬಿಟ್ಟುಕೊಡುವುದಾಗಿ

ಹೇಳಿರುವುದಾಗಿ ತಿಳಿಸಿದ. ಆಗ ಆ ಯುವಕರು "ನಮಗೆ ಪಟ್ಟವೂ ಬೇಡ, ಅರಸನ ಮಗಳೂ ಬೇಡ ನೀವೆಲ್ಲರೂ ಒಳಳೆಯವರಾಗಿರಿ" ಎಂದರು.

"ಅದಾಗದು ನನ್ನ ಮಗಳನ್ನು ಮದುವೆ ಮಾಡಿಕೊಂಡು ಈ ಪಟ್ಟವನ್ನು ಆಳಿಕೊಂಡು ಬರಬೇಕು" ಎಂದು ಅರಸ ಹೇಳಿದ. ಆಗ ಬಣ್ಣ ಹುಲಿರಾಜ ತಮ್ಮ ಬಸವರಾಜನನ್ನ ನೋಡಿ "ಈ ಶಾರ್ದೂಲವನ್ನು ಕೊಂಡವನು ನಾನಲ್ಲ ಇವನು ಬಸವರಾಜ" ಎಂದನು. ಆಗ ತಮ್ಮ ಬಸವರಾಜ ಅಣ್ಣನತ್ತ ಕೈತೋರಿಸಿ "ನಾನಲ್ಲ ಕೊಂದವನು, ಇವನು ನನ್ನ ಅಣ್ಣ ಹುಲಿರಾಜ. ಅವನಿಗೆ ಪಟ್ಟಾಧಿಕಾರವನ್ನು ನೀಡಬೇಕು" ಎಂದನು. ಹಾಗೆ ಹುಲಿರಾಜನಿಗೆ ಅರಸನ ಮಗಳೊಂದಿಗೆ ಮದುವೆ ನಡೆಯಿತು. ಪಟ್ಟದ ಅಧಿಕಾರವೂ ಬಂದಿತು.

ಒಂದು ದಿನ ತಮ್ಮ ಬಸವರಾಜ ಅಣ್ಣ ಹುಲಿರಾಜನಲ್ಲಿ ಹೇಳಿದ "ಅಣ್ಣಾ ನಾನು ಬೇರೆ ಹೋಗಿ ನಿನ್ನಂತೆ ಮದುವೆ ಮಆಡಿಕೊಂಡು ಬರುತ್ತೇನೆ." ಹೀಗೆ ಹೇಳಿ ಆತ ಹೊರಟು ಹೋದ. ಹೊರಡುವ ಮೊದಲು ಮನೆ ಮುಂದೆ ಒಂದು ರಾಮತುಳಸಿ ಗಿಡ ನೆಟ್ಟು ಅದಕ್ಕೆ ನೀರೆರೆದು, ತೆಂಗಿನ ಕಾಯಿ ಒಡೆದು, ಸೊಡರು ಬೆಳಗಿಸಿದ. ಏಳು ರಾತ್ರಿ ಏಳು ಹಗಲು ನಡೆದ. ಅಲ್ಲೊಂದು ದೊಡ್ಡ ಕೆರೆ. ಅದರ ದಂಡೆಯಲ್ಲಿ ದೊಡ್ಡ ಗೋಳಿ ಮರ. ಅದರ ಬುಡದಲ್ಲಿ ಬಸವರಾಜ ವಿಶ್ರಮಿಸಿದ. ಅಷ್ಟರಲ್ಲಿ ಅವನ ಬಳಿಗೆ ಏಳು ಹೆಡೆಯ ಮಹಾಶೇಷ ಬಂದಿತು. ಅದು ತನ್ನ ಹೆಡೆಯೊಳಗಿನ ಮಾಣಿಕ್ಯವನ್ನು ಏಳು ಗಾವುದ ದೂರ ಇರಿಸಿ ಸ್ನಾನಕ್ಕೆ ಕೆರೆಗಿಳಿಯಿತು. ಅಲ್ಲೇ ಕುಳಿತಿದ್ದ ಯುವಕ ಬಸವರಾಜ.... ಆ ಮಾಣಿಕ್ಯಕ್ಕೆ.... ಆಗ ಮಾಣಿಕ್ಯದಿಂದ ಹೊರಸೂಸುತ್ತಿದ್ದ ಬೆಳಕು ಮಸುಕಾಯಿತು.

ಸರ್ಪರಾಜ ಓಡೋಡುತ್ತಾ ಬಂದಿತು. ಬಸವರಾಜ ಗೋಳಿ ಮರ ಏರಿ ಕುಳಿತ. ಬಂದ ಸರ್ಪರಾಜ ತನ್ನ ಹೆಡೆಗಳನ್ನು ಮರಕ್ಕೆ ಮತ್ತೆ ಮತ್ತೆ ಜಪ್ಪಿಕೊಂಕಡು ಸತ್ತುಹೋಯಿತು. ಬೆಳಕಾದಾಗ ಬಸವರಾಜ ಮರ ಇಳಿದು ಬಂದು ಮಾಣಿಕ್ಯವನ್ನು ಕೆರೆಯ ನೀರಲ್ಲಿ ತೊಳೆದ. ಅಷ್ಟರಲ್ಲಿ ಆ ಕೆರೆಯ ನಡುವೆ ದಾರಿ ಕಾಣಿಸಿತು. ಅವನು ಅದರಲ್ಲಿ ನಡೆದುಹೋಗಿ ಒಂದು ಮನೆಯ ಸಮೀಪ ಹೋದನು. ಒಳಗಿದ್ದವರನ್ನು ಕರೆದ. ಯಾರೂ ಓಗೊಡಲಿಲ್ಲ. ಮನೆಯೊಳಗೆ ಕಾಲಿರಿಸಿದ. ಯಾರೂ ಕಾಣಸಿಗಲಿಲ್ಲ. ಆ ಮನೆಯೊಳಗೆ ಏಳು ಕೋಣೆಗಳಿದ್ದುವು. ಆರು ಕೋಣೆಗಳೊಳಗೆ ಹೋಗಿ ಬಂದರು, ಯಾರೂ ಇಲ್ಲ. ಏಳನೆಯ ಕೋಣೆ ಹೊಕ್ಕನು.

"ಮನೆಯೊಳಗೆ ಯಾರು?" ಬಸವರಾಜ ಕೇಳಿದ. ಕೋಣೆಯೊಳಗಿಂದ ಯುವತಿಯೊಬ್ಬಳು ಹೊರಬಂದಳು. "ಯಾರಪ್ಪ ನೀನು? ಇಲ್ಲಿಗೇಕೆ ಬಂದೆ? ನನ್ನ ಅಪ್ಪ ಇಲ್ಲಿಗೆ ಬಂದರೆ ಕೊಂದು ತಿನ್ನುತ್ತಾನೆ" ಎಂದಳು. "ನಾನು ನಿನ್ನ ಅಪ್ಪನನ್ನು ಕೊಂದು ಭಸ್ಮ ಮಾಡಿಯೇ ಬಂದಿದ್ದೇನೆ" ಎಂದನು. "ನನ್ನ ಅಪ್ಪನನ್ನು ಹೇಗೆ ಕೊಂದೆ? ನನ್ನ ಅಪ್ಪನನ್ನು ಯಾರೂ ಕೊಲ್ಲಲಾರರು. ನೀನು

ನಿಜವಾಗಿಯೂ ನನ್ನ ಅಪ್ಪನನ್ನು ಕೊಂದೆಯಾ?" ಎಂದು ಕೇಳಿದನು. "ಹೌದು ನಿನ್ನ ಅಪ್ಪ ಏಳು ಹೆಡೆಯ ಮಹಾಶೇಷನನ್ನು ನಾನೇ ಕೊಂದೆ" ಎಂದನು. "ಇದು ಹೌದಾದರೆ ನೀನೇ ನನ್ನ ಗಂಡ, ನಾನು ನಿನ್ನ ಹೆಂಡತಿ. ಇನ್ನೂ ಮುಂದೆಕ್ಕೆ ನಾವಿಬ್ಬರೂ ಸುಖವಾಗಿ ಈ ಮನೆಯಲ್ಲೇ ಇರೋಣ" ಎಂದಳು.

ಹೀಗಿರುವಾಗ, ಒಂದಾನೊಂದು ಊರಲ್ಲಿ ಒಬ್ಬ ಅರಸ. ಅವನಿಗೊಬ್ಬ ಮಗ. ಒಂದು ದಿನ ಆ ಮಗ ಕೆರೆಯ ಬಳಿಗೆ ಬಂದನು. ಕೆರೆಯ ದಂಡೆಯ ಕಲ್ಲ ಮೇಲೆ ಒಂದು ಬಂಗಾರದ ಕೂದಲನ್ನು ಕಂಡನು. ಅದನ್ನು ತನ್ನ ಅಂಗಿ ಜೇಬಿಗೆ ಹಾಕಿಕೊಡನು. ಮನೆಗೆ ಮರಳಿದನು. ತನ್ನ ಮದುವೆಗೆ ಹೆಣ್ಣು ಹುಡುಕುತ್ತಿದ್ದ ತಂದೆಯಲ್ಲಿ ಹೇಳಿದ "ಈ ಬಂಗಾರದ ಕೂದಲಿನ ಹುಡುಗಿಯನ್ನು ಕರೆತಂದರೆ ನಾನು ಮದುವೆಯಾಗುತ್ತೇನೆ" ಅರಸ ಬಂಗಾರದ ಕೂದಲಿನ ಹುಡುಗಿಗೆ ನಾಲ್ಕು ಊರು, ನಾಲ್ಕು ದೇಶಗಳಿಗೆ ಜನ ಕಳುಹಿಸಿದ. ಎಲ್ಲಿಗೆ ಹೋದರೂ ಬಂಗಾರದ ಕೂದಲ ಹುಡುಗಿ ಕಾಣಸಿಗಲಿಲ್ಲ. ಆಗ ಕುಂಬಾರ್ತಿ ಹೆಂಗಸೊಬ್ಬಳು ಬಂದು ರಾಜನಲ್ಲಿ "ನಾನು ಬಂಗಾರದ ಕೂದಲ ಹುಡುಗಿಯನ್ನು ಕರೆತರುತ್ತೇನೆ. ತಂದು ಕೊಟ್ಟಲ್ಲಿ ಏನು ಕೊಡುತ್ತೀರಿ" ಎಂದು ಕೇಳಿದಳು. "ನೀನು ಏನನ್ನು ಕೇಳುತ್ತೀಯೋ ಅದನ್ನು ಖಂಡಿತಾ ಕೊಡುತ್ತೇನೆ" ಎಂದು ಅರಸ ಹೇಳಿದ. "ಹಾಗಾದರೆ ನನಗೆ ಏಳು ಬುತ್ತಿ ಅನ್ನ ಕಟ್ಟಿಕೊಡಿರಿ" ಎಂದಳು ಕುಂಬಾರ್ತಿ. ಅರಸನ ಕಡೆಯವರು ಹಾಗೆಯೇ ಮಾಡಿದರು. ಕಟ್ಟಿಕೊಟ್ಟ ಬುತ್ತಿಯನ್ನು ಹಿಡಿದುಕೊಂಡು ಅವಳು ಕೆರೆಯ ಬಳಿಗೆ ಬಂದಳು. ಹಳೇ ಮುದುಕಿಯ ವೇಷ ತೊಟ್ಟು ಕೆರೆದಂಡೆಯ ಮೇಲೆ ಕುಳಿತಳು. ಏಳು ಹೆಡೆಯ ಮಹಾಶೇಷನ ಮಗಳು ದಿನ ಅಲ್ಲಿಗೆ ಸ್ನಾನಕ್ಕೆಂದು ಬರುತ್ತಿದ್ದಳು. ಅವಳು ಸ್ನಾನ ಮುಗಿಸಿ ಹೋಗುವಾಗ ಈ ಕುಂಬಾರ್ತಿ "ಮಗಳೇ ನಾನು ನಿನ್ನ ಜತೆ ಬರಲೆ?" ಎಂದು ಕೇಳುತ್ತಿದ್ದಳು. ಅದಕ್ಕೆ ಅವಳು ಉತ್ತರಿಸುತ್ತಿರಲಿಲ್ಲ. ಆರು ದಿನ ಕಳೆಯಿತು. ಏಳನೆಯ ದಿನ ಬಂದಿತು ಇಂದೂ ಕೇಳಿದಳು "ಅಜ್ಜಿ ಇಂದು ನನ್ನ ಜತೆ ಬಾ" ಎಂದಳು ಬಂಗಾರದ ಕೂದಲ ಹೆಣ್ಣು ಮುದುಕಿ ವೇಷದ ಕುಂಬಾರ್ತಿ ಅವಳ ಬೆನ್ನು ಹಿಂದೆ ನಡೆದಳು. "ಅಜ್ಜಿ ಅಜ್ಜಿ ನೀನು ದಿನಾ ಸ್ನಾನ ಮಾಡಬೇಕು. ಇದರಿಂದ ನಿನ್ನ ಜೀವಕ್ಕೆ ಒಳ್ಳೆಯದಾಗುತ್ತದೆ" ಎಂದಳು. ಅದಕ್ಕೆ ಕುಂಬಾರ್ತಿ ಹೌದೆಂದು ಒಪ್ಪಿ ದಿನಾ ಸ್ನಾನ ಮಾಡತೊಡಗಿದಳು. ಆರು ದಿನ ಸ್ನಾನ ಮಾಡುವಷ್ಟರಲ್ಲಿ ಅವಳು ತೊಟ್ಟ ವೇಷ, ಬಣ್ಣ ಎಲ್ಲ ಕರಗಿ ಎಳೆ ವಯಸ್ಸಿನ ಹುಡುಗಿಯಾದಳು. ಅವಳು "ಬಂಗಾರದ ಕೂದಲ ಅಕ್ಕಾ, ನಾನ ನಿನಗೆ ಅಡುಗೆ ಮಾಡಿಹಾಕುತ್ತೇನೆ. ಇಲ್ಲಿ ಬಂದ ಬಳಿಕ ಮುದುಕಿಯಾಗಿದ್ದ ನಾನು ಎಳೆ ವಯಸ್ಸಿನ ಹುಡುಗಿಯಾಗಿದ್ದೇನೆ... ಅದಕ್ಕಾಗಿ ನೀನು ಏನೇ ಕೆಲಸ ಹೇಳು, ನಆನು ಮಾಡಿಯೇ ಮಾಡುತ್ತೇನೆ" ಎಂದಳು. ಮರುದಿನ ಕುಂಬಾರ್ತಿ ಹುಡುಗಿ ಬಂಗಾರದ ಕೂದಲ ಹುಡುಗಿಯಲ್ಲಿ "ಅಕ್ಕಾ ನಿನ್ನ ಗಂಡನ ಜೀವ ಎಲ್ಲಿದೆ? ಏನು ಮಾಡಿದರೆ ಮಾತ್ರ ಆತ ಸಾಯುತ್ತಾನೆ? ಇಂದು ರಾತ್ರೆ ನಿನ್ನ ಗಂಡನಲ್ಲಿ ಕೇಳಿ ಹೇಳುತ್ತಿಯಾ? ಅವನ ಶತ್ರುಗಳಿಂದ ರಕ್ಷಿಸಲು ಹೀಗೆ ಕೇಳಿದೆ, ಬೇಸರ ಮಾಡಬೇಡ"

ಎಂದಳು. ಈ ರಾತ್ರಿ ಬಂಗಾರದ ಕೂದಲ ರಾಣಿ ತನ್ನ ಗಂಡನ ಬಳಿ "ನಿನ್ನ ಜೀವ ಎಲ್ಲಿದೆ? ಏನು ಮಾಡಿದರೆ ನೀನು ಸಾಯುತ್ತಿ? ಶತ್ರುಗಳಿಂದ ನಿನ್ನ ಪ್ರಾಣವನ್ನು ರಕ್ಷಿಸಲು ಹೀಗೆ ಕೇಳುತ್ತಿದ್ದೇನೆ" ಎಂದಳು. ಹೆಂಡತಿ ಕೇಳಿದುದಷ್ಟೇ! ನಂಬಿದ ಅವನು "ನನ್ನ ಕಿವಿಯ ಈ ಎರಡು ಕುಂಡಲಗಳು ಕಳಚಿ ಹೋದರೆ ನಾನು ಸಾಯುತ್ತೇನೆ" ಎಂದನು.

ಬಸವರಾಜ ತನ್ನ ಹೆಂಡತಿಯಲ್ಲಾಡಿದ ಮಾತುಗಳನ್ನು ಕುಂಬಾರ್ತಿ ಕೇಳಿಸಿಕೊಂಡಳು. ಆತ ನಿದ್ರಿಸಿದ್ದಾಗ ಅವನಿಗೆ ತಿಳಿಯದಂತೆ ಅವನ ಕಿವಿಯ ಕುಂಡಲಗಳನ್ನು ಅಪಹರಿಸಿ ಬೂದಿರಾಶಿಯೊಳಗೆ ಅಡಗಿಸಿ ಇಟ್ಟಳು! ಬೆಳಿಗ್ಗೆ ನೋಡಿದರೆ ಬಸವರಾಜ ತೀರಿಕೊಂಡಿದ್ದ. ಇದನ್ನು ಕಂಡ ಬಂಗಾರದ ಕೂದಲ ಹುಡುಗಿ ಬೆಚ್ಚಿಬಿದ್ದಳು. ಗಂಡನ ಸಾವನ್ನು ಕಂಡು ಚೀರಿಟ್ಟಳು, ಎದೆ ಬಡಿದುಕೊಂಡಳು. ತನಗೆ ಯಾರು ಗತಿ ಎಂದು ಬೊಬ್ಬೆ ಇಟ್ಟಳು. ಆಗ ಕುಂಬಾರರ ಹೆಣ್ಣು "ಅಕ್ಕಾ ನೀನು ಅಳಬೇಡ. ನನ್ನ ಮನೆಗೆ ಬಾ ನಿನಗೆ ಅಲ್ಲಿ ಒಳ್ಳೆಯ ಗಂಡು ನೋಡಿ ಮದುವೆ ಮಾಡಿಸುತ್ತೇನೆ" ಎಂದಳು. ಇದನ್ನು ನಂಬಿದ ಅವಳು ಕುಂಬಾರ್ತಿಯ ಜತೆ ಹೊರಟಳು ಅವಳು ಬಂಗಾರದ ಕೂದಲ ರಾಣಿಯನ್ನು ಅರಸನ ಮನೆಗೆ ಕರೆತಂದಳು.

ಅರಸನ ಕಡೆಯವರು ಮದುವೆಗೆ ಎಲ್ಲ ಸಿದ್ಧತೆಗಳನ್ನು ಮಾಡಿದರು. ಆಗ ಅವಳು "ನಾನು ಮದುವೆ ಮಾಡಿಕೊಳ್ಳಬೇಕಾದರೆ ಅದರ ಮೊದಲು ನಾನು ಹೊತ್ತ ಹಕಕೆಯೊಂದನ್ನು ತೀರಿಸಬೇಕಾಗಿದೆ. ಅದರ ಮೊದಲು ಮದುವೆ ಸಾಧ್ಯವಿಲ್ಲ" ಎಂದಳು. "ಹರಕೆ ಏನು?" ಅರಸನ ಮಂದಿ ಕೇಳಿದರು. "ನೀನು ಸಾವಿರ ಎಡೆ ಬಳಸಿ ಅದರ ಮೇಲೆ ತುಪ್ಪ ಬಳಸಬೇಕು. ಜೊತೆಗೆ ಒಬ್ಬೊಬ್ಬರಿಗೂ ದಕ್ಷಿಣೆ ನೀಡಬೇಕು" ಇದು ನನ್ನ ಹರಕೆ ಎಂದಳು. ಒಪ್ಪಿಕೊಂಡು ಸಾವಿರ ಮಂದಿಯನ್ನು ಊಟಕ್ಕೆ ಆಮಂತ್ರಿಸಿದರು.

ಈ ಕಡೆ ಹುಲಿರಾಜ ಮುಂಜಾನೆ ನಿದ್ರೆಯಿಂದ ಎದ್ದು ನಡಿದಾಗ ತುಳಸಿ ಗಿಡ ಬಾಡಿದೆ. ಹೊತ್ತಿಸಿಟ್ಟ ಸೊಡರು ನಂದಿದೆ. ಕೂಡಲೇ ಆತ ಬಸವರಾಜನನ್ನ ಹುಡುಕುತ್ತ ಹೊರಟ. ಏಳು ರಾತ್ರಿ ಹಗಲು ನಡೆಯುತ್ತಲೇ ಹೋದ. ನಡೆದು ನಡೆದು ಆ ಕೆರೆಯ ಸಮೀಪಕ್ಕೆ ಬಂದ. ಆ ಕೆರೆ ದಂಡೆಯಲ್ಲೇ ಮಲಗಿ ನಿದ್ರಿಸಿದ. "ನಿನ್ನ ತಮ್ಮ ಬಸವರಾಜ ಕೆರೆಯೊಳಗೆ ಇದ್ದಾನೆ. ಅಲ್ಲಿಗೆ ಹೋಗು" ಎಂದು ಯಾರೋ ಕನಸಲ್ಲಿ ಹೇಳಿದಂತಾಯಿತು. ನಿದ್ರೆಯಿಂದ ಎಚ್ಚರವಾದೊಡನೆ ಎದ್ದು ಕೆರೆಯ ನಡುರಲ್ಲಿ ಮುಖತೊಳೆದ. ನೀರು ಮುಟ್ಟಿದುದೇ ತಡ, ಕೆರೆಯ ನಡವೆ ಹಾದಿ ಕಾಣಿಸಿತು. ಅದರಲ್ಲಿ ಮುಂದುವರಿದ. ತಮ್ಮ ಬಸವರಾಜ ನಿದ್ದೆಡೆಗೆ ತಲುಪಿದ. ಆದರೆ ಆತ ಜೀವದಿಂದಿರಲಿಲ್ಲ. "ಅಯ್ಯೋ ದೇವರೆ ನನ್ನ ತಮ್ಮನ ಜೀವ ತೆಗೆದರಲ್ಲ! ಇನ್ನು ನಾನು ಹೇಗೆ ಬದುಕಲಿ?" ಎಂದು ಗೋಗರೆದ. ಅಲ್ಲೇ ನಿದ್ರೆ ಹತ್ತಿತು. ಅಷ್ಟರಲ್ಲಿ ಇನ್ನೊಂದು ಕನಸು ಬಿದ್ದಿತು. ಅಲ್ಲೇ ಸಮೀಪದ ಬೂದಿರಾಶಿಯೊಳಗೆ ತಮ್ಮನ ಕಿವಿಯ ಕುಂಡಲಗಳು ಇವೆ. ಅವುಗಳನ್ನು ತಂದು ಕೊಟ್ಟಲ್ಲಿ ಮತ್ತೆ ಆತ ಜೀವಂತವಾಗುತ್ತಾನೆ" ಎಂದು.

ಕೂಡಲೇ ಅವನು ಹೋಗಿ ಬೂದಿಯನ್ನೆಲ್ಲಾ ಸಂಗ್ರಹಿಸಿ ಬಟ್ಟೆಯಲ್ಲಿ ಕಟ್ಟಿದನು. ಅಲ್ಲೇ ಇದ್ದ ಕೆರೆಗೆ ಕೊಂಡೊಯ್ದು ಬೂದಿಯನ್ನು ತೊಳೆದಾಗ ಅದರೊಳಗೆ ಇದ್ದ ಕಿವಿಯ ಆಭರಣ ಸಿಕ್ಕಿತು. ಅವುಗಳನ್ನು ಸತ್ತು ಮಲಗಿದ್ದ ತಮ್ಮನಿಗೆ ಮುಟ್ಟಿಸಿದಾಗ ಅವನಿಗೆ ಮರು ಜೀವ ಬಂದಿತು. ಹುಲಿರಾಜ ತಮ್ಮ ಬಸವರಾಜನಲ್ಲಿ "ನಿನ್ನ ಜೀವ ಹೋಗುವಂತೆ ಮಾಡಿದವರು ಯಾರು?" ಎಂದು ಕೇಳಿದನು. "ಯಾರೋ ಒಬ್ಬಳು ಹೆಂಗಸು ನನ್ನ ಜೀವ ತೆಗೆದಳು" ಎಂದನು. ಹಾಗೆ ಮಾತಾನಾಡುತ್ತಾ ಮೇಲೆ ಬಂದಾಗ ಒಂದು ಕೆರೆ ಕಾಣಿಸಿತು. ಅಲ್ಲಿ ಮೇಲೊಂದು ಕೆರೆ, ಕೆಳಗೊಂದು ಕೆರೆ. ಮೇಲಿನ ಕೆರೆಯ ಪಕ್ಕಕ್ಕೊಂದು ಬಿದಿರಿನ ಹಿಣಿಲು, ಅದರಲ್ಲೊಂದು ಮಂಗ. ಇವರು ನೋಡುತ್ತಿದ್ದಂತೆ ಆ ಮಂಗ ಕೆರೆಗೆ ಹಾರಿತು. ಅಷ್ಟರಲ್ಲಿ ಅದು ಮನುಷ್ಯನಾಯಿತು. ಆ ಮನುಷ್ಯ ನಡೆದು ಕೆಳಗಿನ ಕೆರೆಯಡೆಗೆ ಹೋದನು. ಕೆಳಗಿನ ಕೆರೆಯ ನೀರು ಮುಟ್ಟಿದ್ದ ತಡ ಅವನು ಮತ್ತೆ ಮಂಗನಾದನು. ಅಣ್ಣ ತಮ್ಮ ಮಾತಾನಾಡುತ್ತಾ ಎರಡು ಕೆರೆಗಳಿಂದ ಸ್ವಲ್ಪ ನೀರು ತೆಗೆದುಕೊಂಡರು. ಅದನ್ನು ಬಿದಿರಿನ ಅಂಡೆಗಳಲ್ಲಿ ತುಂಬಿರಿಸಿಕೊಂಡರು.

ಹುಲಿರಾಜ ಹಿಡಿದುಕೊಂಡು ನೀರು ಚಿಮುಕಿಸಿ ಬಸವರಾಜನನ್ನು ಮಂಗನಾಗಿ ಮಾಡಿದ. ಮಂಗನ ಸೊಂಟಕ್ಕೆ ಹಗ್ಗ ಕಟ್ಟಿ ಇನ್ನೊಂದು ತುದಿಯನ್ನು ಹುಲಿರಾಜ ಹಿಡಿದು ಕೊಂಡನು. ಅವನು ಮಂಗನನ್ನು ಹಿಡಿದುಕೊಂಡು ಮದುವೆ ಸನ್ನಾಹ ನಡೆಯುತ್ತಿದ್ದೆಡೆಗೆ ಬಂದನು. ಅಲ್ಲಿಗೆ ತಲುಪಿದಾಗ "ಮಂಗ ಆಡಿಸುವವನು ಬಂದನು" ಎಂದು ಆಡಿಕೊಳ್ಳುತ್ತಾ ಊಟಕ್ಕೆ ಕುಳಿತುಕೊಳ್ಳುವಂತೆ ಹೇಳಿದರು. ಮಂಗನಿಗೆ ಬೇರೆ ಇವನಿಗೆ ಬೇರೆ ಎಲೆ ಹಾಕಿದರು. ಸಾವಿರ ಎಲೆಗಳಿಗೆ ತುಪ್ಪ ಬಡಿಸಲು ಬಂದ ಬಂಗಾರದ ಕೂದಲ ಹುಡುಗಿಗೆ ಮಂಗನ ಕಿವಿಯಲ್ಲಿದ್ದ ಆಭರಣ ಕಂಡು "ಇವನು ತನ್ನ ಗಂಡ" ಎನ್ನುತ್ತಾ ಅದರ ಜೊತೆಗೇ ಊಟಕ್ಕೆ ಕುಳಿತಳು. ಇದನ್ನು ಕಂಡ ಅರಸನ ಕಡೆಯವರಿಗೆ ಸಿಟ್ಟು ಬಂದಿತು. "ರಾಜಕುಮಾರನಿಗಾಗಿ ತಂದ ಬಂಗಾರದ ಕೂದಲ ಹೆಣ್ಣು ಮಗನ ಜೊತೆ ಊಟಕ್ಕೆ ಕುಳಿತಿದ್ದಾಳೆ" ಎಂದು ಸಿಟ್ಟಾದರು. ಆಗ ಹುಲಿರಾಜ ತನ್ನ ಬಳಿಯಿದ್ದ ಕೆರೆ ನೀರನ್ನು ಅಲ್ಲಿದ್ದವರ ಮೇಲೆಲಲಾ ಚಿಮುಕಿಸಿದನು. ಆಗ ಅವರೆಲ್ಲಾ ಮಂಗನಾಗಿ ಪರಿವರ್ತನೆಗೊಂಡರು. ಮಂಗಗಳು ಕೂಡಲೇ ಅಲ್ಲಿಂದ ಹೊರಟು ಕಾಡಿಗೆ ಹಾರಿಹೋದವು.

ಬಂಗಾರದ ಕೂದಲ ಹುಡುಗಿಯನ್ನು ಕರೆದುತಂದರು. ಕುಂಬಾರ್ತಿಯನ್ನು ಕರೆತಂದರು. ಅವಳ ಕತ್ತು ಹಿಡಿದು ಹುಲಿರಾಜ ಒಂದೇ ಏಟಿಗೆ ಕತ್ತರಿಸಿ ಹಾಕಿದ. ನಈರು ಚಿಮುಕಿಸಿ ಮಂಗನಾಗಿದ್ದ ತಮ್ಮನನ್ನು ಹುಲಿರಾಜ ಮತ್ತೆ ಮನುಷ್ಯನನ್ನಾಗಿಸಿದನು. ಈಗ ಹುಲಿರಾಜ, ಬಸವರಾಜರು ತಮ್ಮ ತಮ್ಮ ಹೆಂಡತಿಯರೊಂದಿಗೆ ಅರಮನೆಗೆ ಬಂದರು. ಸುಖ ಸಂತೋಷದಲ್ಲಿದ್ದರು.

## ಕೊರಗತನಿಯ

ಕೊರಗತನಿಯನ ತಾಯಿ ಕೊರೊಪ್ಪೊಳು. ತಂದೆ ಕುರವನ ಓಡಿ. ದೇವರ ಅನುಗ್ರಹದಿಂದ ಅವರಿಗೆ ಗಂಡುಮಗುವಾಗುತ್ತದೆ. ಹದಿನಾರನೆ ದಿನ ತಂದೆತಾಯಿಗಳು ಜಾತಿಗೃಹಸ್ಥರನ್ನು ಕರೆಸಿ. ಕೊರಗ ತನಿಯ ಎಂದು ಹೆಸರು ಹಾಕಿದರು. ಮಗು ತಾಯಿಯ ಎದೆ ಹಾಲು ಕುಡಿವ ಕಾಲಕ್ಕೆ ತಾಯಿಯ ಜೀವಕ್ಕೆ ಕೊನೆಯಾಯಿತು. ಅನ್ನ ಉಣ್ಣುವ ಕಾಲಕ್ಕೆ ತಂದೆಗೆ ದಿನ ಬಂದಿತು. ಮಗುವಿಗೆ ಅತ್ತೆ ಮಾವಂದಿರೂ ಇಲ್ಲ. ಬಾಲಕ ಕೊರಗ ತನಿಯ ಅನಾಥನಾದನು.

ತನಿಯ ಮನೆಯಲ್ಲಿ ಒಂಟಿಯಾದನು. ಮನೆಬಿಟ್ಟು ದೇಶಾಂತರ ಹೋಗುವುದಾಗಿ ಹೇಳಿದ. ಅಪ್ಪ ಮಾವ ಹೊಡೆಯುತ್ತಿದ್ದ ಡೋಲನ್ನು ಕೊರಳಿಗೆ ನೇತುಹಾಕಿಕೊಂಡ. ತನ್ನ ಕೊಪ್ಪಕ್ಕೆ ಯಾರೂ ಕಾಲಿರಿಸದಂತೆ ಮುಳ್ಳಿನರಾಶಿ ಇರಿಸಿದ. ತೆಂಕುದಿಕ್ಕು ಬಿಟ್ಟು ಬಡಗುದಿಕ್ಕು ಹಿಡಿದ. ದೇಶಾಂತರ ಹೊರಟ. ಸಾವಿರಾಳು ಹೋಗುವ ಹಾದಿಯಲ್ಲಿ ಕುಳಿತು ಅಕ್ಕಿಯೆಂದು(ಅನ್ನ) ಹೊಳೆಬದಿಯ ಮರುಳು ತಿಂದ. ವೀಳ್ಯೆದೆಲೆಯೆಂದು ಕಾಸರಕನ ಎಲೆ ಆಗಿದ. ಅಡಿಕೆ ಎಂದು ದಡ್ಡಾಲದ ಕಾಯಿಯೊಂದಿಗೆ ಆಟವಾಡಿದ. ನಡುನಡುವೆ ಒಮ್ಮೆ ನಗುತ್ತಾನೆ. ಒಮ್ಮೆ ಅಳುತ್ತಾನೆ. ಕಂಡವರು ಹುಡುಗನಿಗೆ ಹುಚ್ಚು ಇರಬೇಕೆಂದು ಹೇಳುತ್ತಾರೆ.

ಆ ದಾರಿಯಲ್ಲಿ ಕದಿರೆಯಿಂದ ಬಿದಿರೆಗೆ ಕಳ್ಳು ಹೊತ್ತು ಸಾಗಿಸುತ್ತಿದ್ದ ಮೈರಕ್ಕೆ ಬೈದೆತಿ ಬಂದಳು. ದಾರಿಯಲ್ಲಿ ಅಳುತ್ತಾ ನಗುತ್ತಾ ಕುಳಿತಿದ್ದ ತನಿಯನನ್ನು ಕೇಳಿದಳು. "ಮಗೂ ಯಾರಪ್ಪಾ ನೀನು? ನಿನ್ನದು ಯಾವ ಮೂಲ? ಯಾವ ಬಳಿ?" ಎಂದು ಕೇಳಿದಳು.

"ನನ್ನದು ಬಂಗೇರ ಮೂಲ. ಸೋಮಣ್ಣಾಯ ಬಳಿ" ಎಂದು ಹೇಳಿದ ಕೊರಗ ತನಿಯ ತನ್ನ ದುಸ್ಥಿತಿಯನ್ನು ಬಗೆಬಗೆಯಾಗಿ ವಿವರಿಸಿದ.

ತನ್ನದೇ 'ಬಳಿ'ಯ ಹುಡುಗ. ಮೈರಕ್ಕೆ ಬೈದೆತಿಗೆ ಮರುಕಹುಟ್ಟಿತು. "ನನ್ನೊಂದಿಗೆ ಬಾ. ನಮ್ಮ ಮಕ್ಕಳೊಂದಿಗೆ ಆಡಬಹುದು. ಕರುಗಳನ್ನು ಮೇಯಿಸಬಹುದು. ಕೋಳಿ, ಕಾಗೆ ಓಡಿಸಬಹುದು" ಎಂದಳು.

"ಬರುವುದಕ್ಕೆ ಅಡ್ಡಿ ಇಲ್ಲ. ಬರುತ್ತಿದ್ದೆ. ಆದರೆ ನನ್ನ ಸೊಂಟಕ್ಕೆ ಬಟ್ಟೆಯಿಲ್ಲ. ತಲೆಗೆ ಗೋಂಪರು(ಹಾಳೆ ಟೊಪ್ಪಿಗೆ) ಇಲ್ಲ" ಎನ್ನುತ್ತಾನೆ. ತನಿಯ. ಕಳ್ಳಿನ ಪಾತ್ರೆಯ ಅಡಿಗಿಟ್ಟ ಸುತ್ತಿದ ಸಿಂಬೆಯ ಬಟ್ಟೆಯನ್ನು ಬಿಚ್ಚಿ ಹುಡುಗನಿಗ ಕೊಡುತ್ತಾಳೆ. ಮೈರಕ್ಕೆ ಅನ್ನ ಕಟ್ಟಿ ತಂದ ಅಡಿಕೆ ಹಾಳೆಯನ್ನು ಗೋಂಪರಿಗೆಂದು ಕೊಡುತ್ತಾಳೆ. ತನ್ನ ಮನೆಗೆ ಎಣಸೂರ ಬಾಳಿಕೆಗೆ ಕರೆತರುತ್ತಾಳೆ. ನೆಡಿಲು ಗಿಡದ ಕೋಲು ಕಡಿದು ಅವನಿಗೆ ಕೊಟ್ಟಗ(ಗುಡಿಸಲು) ಕಟ್ಟಿಕೊಡುವಂತೆ ಹೇಳಿದಳು. ತೆಂಗಿನಚಿಪ್ಪಿನಲ್ಲಿ ಅನ್ನ ಕೈಯಲ್ಲಿ ಉಪ್ಪು ನೀಡಿ ಮೈರಕ್ಕೆ ಮತ್ತು ಮಕ್ಕಳು ಒಂದು ವರ್ಷ ಆರು

ತಿಂಗಳು ಸಾಕಿದರು. ಕೊರಗರ ಹುಡುಗ ಮನೆಹೊಕ್ಕ ಬಳಿ ಎಣಸೂರ ಬಾಳಿಕೆಯಲ್ಲಿ ಅಕ್ಕಿ ಬತ್ತ ಹೆಚ್ಚಿತು. ಎಣಿಕೆ ಮೀರಿದ ಹಣ ಸೇರಿತು. ಒಂದು ಹಟ್ಟಿ ಹಸು ಇದ್ದದ್ದು ನಾಲ್ಕು ಹಟ್ಟಿ ಆಯಿತು. ಒಂದು ಹಗಲಿಗೆ ಮುಗಿಯುವ ಕಳ್ಳು ಏಳು ರಾತ್ರಿ ಎಂಟು ಹಗಲಿಗೂ ತೀರಲಿಲ್ಲ. ಮೈರಕ್ಕೆ ದೇವರಿಗೆ ಹರಕೆ ಹೇಳಿದಳು. "ನನ್ನ ಮೂಲದ ಕೊರಗ ತನಿಯ ತಂದ ಕಳ್ಳು ತೀರಿದರೆ ಕದಿರೆಯ ದೇವಸ್ಥಾನಕ್ಕೆ ಕಂಚಿನ ಹೊದಿಕೆ ಹೊದಿಸುತ್ತೇನೆ" ಎಂದು ಹರಕೆ ಹೇಳಿಕೊಂಡಳು. ಹೇಳಿದ ಹರಕೆ ಗಂಟಲಲ್ಲಿ ಬಂದುದೇ ತಡ ಮಡಕೆಯ ಕಳ್ಳು ಮಾರಾಟವಾಯಿತು. ಕೊರಗನಿಗೆ ಪ್ರಾಯ ಬಂದಿತು. ಒಂದು ದಿನ ಮೈರಕ್ಕೆ ಬೈದೆತಿಯ ಬಳಿ ಬಂದು "ಅಮ್ಮ ನನಗೊಂದು ಪೀಂಪಿಲಿಕತ್ತಿ ತಂದುಕೊಡಿ. ನನ್ನ ಕುಲ ಕಸುಬು ಮಾಡಬೇಕಾಗಿದೆ ಎಂದನು. ಬಿದಿರ ಮಲೆಗೆ ಹೋದ. ಒಂದು ತುಂಡು ಬಿದಿರು ತಂದ. ಪೊದರು ಪೊದರು ಬಿಳಲು ಕಡಿದುಕೊಂಡು, ಬಿದರಿನ ಒಳಭಾಗ ಕಡಿದು ಹೊರಸಿಗುರು ಎಬ್ಬಿಸಿದ. ದಿನ್ನೆಯಲ್ಲಿ ಕುಳಿತ. ಅತ್ತರಿಗೆ ಅಡಿ ಬಳ್ಳಕ್ಕೆ ಬಾಯಿ, ಮೊರಕ್ಕೆ ಮೂಲೆ, ಬುಟ್ಟಿಗೆ ಕೈ ಇರಿಸಿದ. ಕೈಕುಡುಪು(ಕೈಬುಟ್ಟಿ) ಸಿದ್ಧಗೊಳಿಸಿದ. ಊರಿಗಿಳಿದು ಊರಕೇರಿಯಲ್ಲಿ ಮಾರಲು ತೊಡಗಿದ".

ಒಂದು ದಿನ ಬಾಳಿಕೆಯ ಮೂಲಸ್ಥಾನದಲ್ಲಿ ಮರ್ಲ್ ಜುಮಾದಿ, ಮಾಡದ ಮೈಸಂದಾಯ, ಕಿನ್ನಿ ಕೊಡಂಗೆನಾರ್, ಪದವು ಲೆಕ್ಕೆಸಿರಿಗಳಿಗೆ ಅಂಕ ಆಯನ ಕೋರಿ ಕಂಬಳ ನೇಮ ನೆರಿ ಆಗುವುದು ನಿರ್ಧಾರವಾಯಿತು. ಎಣಸೂರ ಬಾಳಿಕೆಯಿಂದ ಏಳುಹೊರೆ ತೆಂಗಿನ ಎಳೆಯಗರಿ ಮತ್ತು ಬಾಳೆದಿಂಡು ಹೋಗಬೇಕಾಗುತ್ತದೆ. ಅದನ್ನು ಹೊರಲು ಎಂದಿನಂತೆ ರಾಣೆಯ ಮುಗ್ಗೇರರು, ಬೈಲಬಾಕುಡರು, ಹುಣಿಯ ಮುಂಡಾಲರು ಸಿಗಲಿಲ್ಲ. ಹೊರಗಿನ ಆಳು ಬೇಡ, ನಾವು ಸಾಕಿದ ಮಗ ಕೊರಗತನಿಯ ಇದ್ದಾನೆ. ಅವನಲ್ಲಿ ಹೊರಿಸೋಣ ಎಂದರು. "ಒಯ್ಯುವುದೇನೋ ಒಯ್ಯುತ್ತೇನೆ. ಆದರೆ ನಾನು ಹೋದವನು ಹಿಂದೆ ಬರುವೆನೋ ಇಲ್ಲವೋ ಹೇಳಲಾರೆ" ಎನ್ನುತ್ತಾನೆ ಕೊರಗ.

"ಜಾತಿಯಲ್ಲಿ ಹೀನ ಎನಿಸುವುದಾದರೆ ನೀನು ಹೋಗಬೇಡ, ಬೇರೆಯವರಲ್ಲಿ ಕಳುಹಿಸಿಕೊಡುತ್ತೇನೆ" ಎನ್ನುತ್ತಾಳೆ ಬೈರಕ್ಕೆ. "ಇಲ್ಲ ತಾಯಿ ನನಗೆ ಏಳು ಜನರ ಹೊರೆ ಒಬ್ಬನೇ ಹೊರುವೆ, ಆದರೆ ನನಗೆ ಏಳು ಜನರ ಕಳ್ಳು ಕೊಡಿರಿ. ಏಳು ಜನರ ತಿಂಡಿ ಕೊಡಿರಿ. ಏಳು ಕೋಳಿಯ ಪಲ್ಯ, ಏಳು ಜನರ ವೀಳ್ಯ ಕೊಡಿರಿ. ಏಳು ಜನರ ಬತ್ತ ಕೊಡಿರಿ. ನಾನೇ ಹೊರಡುತ್ತೇನೆ" ಎಂದ.

ಹಾಗೇ ಆಗಲೆಂದು ಹೇಳಿದರು. ಒಂದು ಅಡಿಕೆ ಮರ ಏರಿದವನು ಎಪ್ಪತ್ತು ಮರಗಳಿಗಾಗಿ ಇಳಿಯುತ್ತಾನೆ. ಒಂದು ತೆಂಗಿಗೆ ಹತ್ತಿದವನು ಎಪ್ಪತ್ತು ತೆಂಗುಗಳಿಗೆ ಏರಿಯೇ ಇಳಿಯುತ್ತಾನೆ. ಏಳು ಜನರ ಹೊರೆಯನ್ನು ಒಂದು ಹೊರೆಯಾಗಿ ಕಟ್ಟುತ್ತಾನೆ. ನೇಮದ ಚಪ್ಪರದ ಕಡೆಗೆ ಹೊರಡುತ್ತಾನೆ. ಹೊರಡುವಾಗ ಬಿಕ್ಕಿ ಬಿಕ್ಕಿ ಅತ್ತ. "ಹೋಗುವಾಗ ಬೆನ್ನು ನೋಡಿಕೊಳ್ಳಿ. ಬರುವಾಗ ಹೊಟ್ಟೆ ಮೋರೆ ತೋರಿಸಿಕೊಂಡು ಬರುವೆನೆಂದು ನಂಬದಿರಿ" ಎಂದು ಹೇಳಿ ಹಿಂದಿರುಗಿ ನೋಡದೆ ಹೆಜ್ಜೆ

ಹಾಕುತ್ತಾನೆ. ಭೂತದ ಗುಡಿಯ ಹತ್ತಿರ ಹತ್ತಿರ ತಲುಪಿದ. "ಕಾಡ ಕೊರಗರ ಹೈದ ಎಳೆಯ ಗರಿ ಬಾಳೆಯ ದಿಂಡು ತರುವುದಿದ್ದರೆ ಮಾಡಕ್ಕೆ ಮುಟ್ಟಿಸಬಾರದು. ದೂರದಲ್ಲಿ ಇಳಿಸಬೇಕು. ದೂರ ಕುಳ್ಳಿರಬೇಕು" ಎಂದರು ಭೂತದ ಗುಡಿಯ ಮಂದಿ.

"ನಾನು ತಂದ ತೆಂಗಿನ ಗರಿ, ಬಾಳೆ ಆದೀತು. ನಾನು ಮಾತ್ರ ಮಾಡದ ಸಮೀಪಕ್ಕೆ ಬರಬಾರದು ಏಕೆ ಅದು?" ಎಂದು ಮಾಡಕ್ಕೆ ಸಮೀಪದಲ್ಲೇ ಕುಳಿತುಕೊಳ್ಳುತ್ತಾನೆ. ಮಾಡದ ಸಮೀಪ ಕಣ್ಣೆತ್ತಿ ನೋಡಿದರೆ ಕೈಪುರೆ ಮರವೊಂದರಲ್ಲಿ ಕಾಯಿಗಳು ಕಾಣಿಸುತ್ತವೆ. "ಬರುವಾಗ ತಾಯಿ ಬೈರಕ್ಕೆ(ಗುಡಿ)ದ ಮಾಡಿಗೆ ಹತ್ತಿ ಕಲಶದ ಮೇಲೆ ಕಾಲಿಟ್ಟು ಕಾಯಿ ಕೊಯ್ಯುವಾಗ ಮೈಸಂದಾಯ ಮತ್ತು ಕಿನ್ನಿ ಕೊಡೆಂಗೆನಾರ ದೈವಗಳು ಕಡೆಕಣ್ಣಿಂದ ನೋಡಿ ಕೊರಗ ತನಿಯನನ್ನು ಮಾಯಾ ಸ್ವರೂಪ ಮಾಡುತ್ತವೆ.

ಅನುಬಂಧ-೫

ದಾಖಲೆಗಳು

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು
ವಿಶೇಷ ಪತ್ರಿಕೆ

Parliamentary Afairs and Legislation Secretariat
Notification

No. SAMVYASHAE 19 SHASANA 2000, Bangalore, Dated 26th February 2001

Ordered that the translation of the ಕರ್ನಾಟಕ ಕೊರಗರ (ಅಜಲು ಪದ್ಧತಿ ನಿಷೇಧ) ಅಧಿನಿಯಮ, 2000 in the English language, be published as authorised by Governor of Karnataka under clause(3) of Article 348 of the Constitution of India in the Karnataka Gazette for general information.

The following translation of the ಕರ್ನಾಟಕ ಕೊರಗರ (ಅಜಲು ಪದ್ಧತಿ ನಿಷೇಧ) ಅಧಿನಿಯಮ, 2000 in the English language is published in the Official Gazette under the authority of the Governor of Karnataka under clause (3) of Article 348 of the constitution of India.

## KARNATAKA ACT No. 30 OF 2000

(First Published in the Karnataka Gazette Extraordinary on the thirteenth day of Decembetr 2000)

## THE KARNATAKA KORAGAS (PROHIBITIN OF AJALU PRACTICE) (AMENDMENT) ACT, 2000

(Received the assent of the Governor on the tenth day of December 2000)

An Act ot provide for the prevention of using the services of Koragas for Ajalu practice in some parts of the State of Karnataka.

Whereas using services of Koragas for Ajalu practice exists in certain parts of the State of Karnataka specially in Dakshina Kannada and Udupi Districts;

And whereas such practive amounts to exploition of Koragas and treating them as slaves and which offends human dignity.

And whereas it is expendient to put and end to such practice;

Be it enacted by the Karnataka State Legislatue in the fifty first year of the Republic of India, as follows:

**1. Short title; extent and commencement:**

(a) This Act may be called the Karnataka Koragas (Prohibition of Ajalu Practice) Act 2000

(b) It extends to teh whole State of Karnataka.

(c) It shall be deemed to have come into force with effect from the seventeenth day of August 2000.

2. **Definitions:** In this Act, unless the context otherwise requires

(a) "Ajalu practive" means, performance of any act of ceremony

(i) Differentiating between Koragas and persons belonging to other communities by paying on wages or lesser wages to Koragas for using their service.

(ii) Treating Koragas as interior human beings as compared to others;

(iii) Mixing hair, nails or any other inedible or abnoxious substance in the food and asking Koragas to eath theat food;

(iv) Driving Koragas to run like buffaloes before the beginning of Kambala.

(b) "Kambala" means buffalo race in marshy land.

(c) "Koraga" means an Adivasi Tribal person belonging to Koraga Community of any age.

3. **Prohibition of Ajalu Practice:** Notwithstanding anything contained in any law custom, usuage or practice by whatever name called, no person shall use the service of a Koraga for Ajalu parctice with or without his consent.

4. **Penalty:** Any person who after the commencement of this Act,, uses or abets the using of the services of a Koraga for Ajalu practice shall on conviction be punishable with imprisonement for a term which shall not be less than six months but, which may extend up to five years and with a fine not exceeding five thousand rupees.

5. **Protection of action taken in good faith:** No suit, prosecution, or other legal proceedings shall lie aginst the Government or any person any thing which is done or intended to be done in good faith under this Act.

6. **Power to make rules:**

(a) The State Government by notification, after previous publication make rules for carrying out the purpose of this Act.

(b) Every rule made under this section shall be laid, as soon as may be after it is made before each House of the State Legislature, while it is in session for a total period of thirty days which may be comprised in one session or in two or more seccessive session and if, beofre expiry

of the session immediately following the session or successive sessions, both Houses agree in making any modification in any such rule or after have effect only in such modified form or be no effect, as the case may be so, however, that such modification or annulment shall without prejudice tothe validity of anything previously done under that rule.

**7. Repeal and saveings:**

(a) The Karnataka Koragas (Prohibition of Ajalu practice) Ordinance, 2000 (Karnataka Ordinance No.7 of 2000) is hereby repeated.

(b) Notwithstanding such repeal anthing done or any action taken under the said Ordinance shall be deemed to have been done or taken under this Act.

The above traslation of the ಕರ್ನಾಟಕ ಕೊರಗರ (ಅಜಲು ಪದ್ಧತಿ ನಿಷೇಧ) ಅಧಿನಿಯಮ, 2000 (2000ದ ಕರ್ನಾಟಕ ಅಧಿನಿಯಮ ಸಂಖ್ಯೆ 30) be published in the Official Gazette under clause (3) of Article 348 of the Constitution of India.

**V.S. RAMA DEVI**
GOVERNOR OF KARNATAK
By Order and in the name of the
Governor of Karnataka

**M.R. Hegde**
Secretary to Government
Department of Parlimentary Affairs and
Legislation



# ಕರ್ನಾಟಕ ಸರ್ಕಾರ

ಸಂಖ್ಯೆ : ಸಂವಶಾಇ 19 ಶಾಸನ 2000

ಕರ್ನಾಟಕ ಸರ್ಕಾರದ ಸಚಿವಾಲಯ
ವಿಧಾನ ಸೌಧ
ಬೆಂಗಳೂರು, ದಿನಾಂಕ :17.8.2000

## ಅಧಿಸೂಚನೆ

ಕರ್ನಾಟಕ ಕೊರಗರ (ಅಜಲು ಪದ್ಧತಿ ನಿಷೇಧ) ಅಧ್ಯಾದೇಶ, 2000 ಇದು ಭಾರತ ಗಣರಾಜ್ಯದ ಐವತ್ತೊಂದನೇ ವರ್ಷದಲ್ಲಿ ಕರ್ನಾಟಕ ರಾಜ್ಯ ಪಾಲರಿಂದ ಪ್ರಖ್ಯಾಪಿತವಾಗಿ ಸಾರ್ವಜನಿಕ ತಿಳುವಳಿಕೆಗಾಗಿ ಕರ್ನಾಟಕದ ವಿಶೇಷ ರಾಜ್ಯ ಪತ್ರದಲ್ಲಿ 2000ದ ಕರ್ನಾಟಕ ಅಧ್ಯಾದೇಶ ಸಂಖ್ಯೆ 7 ಎಂದು ಪ್ರಕಟವಾಗಲೆಂದು ಆದೇಶಿಸಲಾಗಿದೆ.

XX XX XX

(XX ಲಗತ್ತಿಸ ಲಾದ ವಿಷಯವನ್ನು ಇಲ್ಲಿ ಸೇರಿಸತಕ್ಕದ್ದು)

1. ಕರ್ನಾಟಕ ರಾಜ್ಯ ಪತ್ರದ ಸಂಕಲನಕಾರರು ಬೆಂಗಳೂರು ಇವರಿಗೆ ಕರ್ನಾಟಕ ರಾಜ್ಯ ಪತ್ರದ ವಿಶೇಷ ಸಂಚಿಕೆ [illegible]ನೇ ಭಾಗ ೨ ಬಿ ರ ವಿಭಾಗದಲ್ಲಿ ದಿನಾಂಕ ೧೭ನೇ ಆಗಸ್ಟ್ ೨೦೦೦ದಂದು ಪ್ರಕಟಿಸಬೇಕೆಂದು ಕೋರಿದೆ. ಇದರ ಮುದ್ರಿತ [illegible] ಪ್ರತಿಗಳನ್ನು ವಾರ್ಷಿಕೆಯ ಕ್ರಮದಂತೆ ೧೦೦೦ ಪ್ರತಿಗಳನ್ನು [illegible] ಶಾಖೆ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಗೂ, ಮತ್ತು ತಲಾ [illegible] ಪ್ರತಿಗಳನ್ನು ಈ ಇಲಾಖೆಯ ಪ್ರಕಟಣೆ ಮತ್ತು ಕ್ರೋಢೀಕರಣ ಶಾಖೆಗಳಿಗೂ ಕಳುಹಿಸಿ ಕೊಡತಕ್ಕದ್ದು.
2. ನಿರ್ದೇಶಕರು ಭಾಷಾಂತರ ನಿರ್ದೇಶನಾಲಯ, ಬೆಂಗಳೂರು.

ಪ್ರತಿಗಳು:

1. ಸರ್ಕಾರದ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು
2. ನಿಬಂಧಕರು, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು (ಮೇಲ್ಪತ್ರದೊಂದಿಗೆ)]
3. ಸಚಿವ ಸಂಪುಟ ಶಾಖೆ.
4. ಪ್ರಕಟಣಾ ಶಾಖೆ ಕ್ರೋಢೀಕರಣ ಶಾಖೆ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.
5. ಬಿಡಿಪ್ರತಿಗಳು.

## 2000ದ ಕರ್ನಾಟಕ ಅಧ್ಯಾದೇಶ ಸಂಖ್ಯೆ 7

ಕರ್ನಾಟಕ ಕೊರಗರ (ಅಜಲು ಪದ್ಧತಿ ನಿಷೇಧ) ಅಧ್ಯಾದೇಶ, 2000

(ಭಾರತ ಗಣರಾಜ್ಯದ ಐವತ್ತೊಂದನೇ ವರ್ಷದಲ್ಲಿ ಕರ್ನಾಟಕ ರಾಜ್ಯಪಾಲರಿಂದ ಪ್ರಖ್ಯಾಪಿತವಾಗಿದ್ದು, 2000ದ ಆಗಸ್ಟ್ ಪದಿನೇಳನೇ ದಿನಾಂಕದಂತು ಕರ್ನಾಟಕ ರಾಜ್ಯ ಪತ್ರದಲ್ಲಿ ಮೊದಲು ಪ್ರಕಟವಾಗಿದೆ)

ಕರ್ನಾಟಕ ರಾಜ್ಯದ ಕೆಲವು ಭಾಗಗಳಲ್ಲಿ ಅಜಲು ಪದ್ಧತಿಗಾಗಿ ಕೊರಗರ ಸೇವೆಗಳನ್ನು ಬಳಸುವುದನ್ನು ಪ್ರತಿಬಂಧಿಸಲು ಉಪಬಂಧ ಕಲ್ಪಿಸುವ ಒಂದು ಅಧ್ಯಾದೇಶ.

ಕರ್ನಾಟಕ ರಾಜ್ಯದ ಕೆಲವು ಭಾಗಗಳಲ್ಲಿ, ವಿಶೇಷವಾಗಿ ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿ ಅಜಲು ಪದ್ಧತಿಗಾಗಿ ಕೊರಗರ ಸೇವೆಗಳನ್ನು ಬಳಸುವುದು ಚಾರಿಯಲ್ಲಿರುವುದರಿಂದ;

ಮತ್ತು ಅಂಥ ಪದ್ಧತಿಯು ಕೊರಗರ ಶೋಷಣೆ ಮಾಡಿದಂತೆ ಮತ್ತು ಅವರನ್ನು ಗುಲಾಮರನ್ನಾಗಿ ನಡೆಸಿಕೊಂಡಂತ ಆಗುವುದರಿಂದ ಹಾಗೂ ಅದು ಮಾನವ ಘನತೆಗೆ ಭಂಗ ತರುವುದರಿಂದ;

ಮತ್ತು ಅಂಥ ಪದ್ಧತಿಯನ್ನು ಕೊನೆಗೊಳಿಸುವುದು ಯುಕ್ತವಾಗಿರುವುದರಿಂದ;

ಮತ್ತು ಕರ್ನಾಟಕ ವಿಧಾನ ಪರಿಷತ್ತು ಅಧಿವೇಶನದಲ್ಲಿಲ್ಲದಿರುವುದರಿಂದ ಹಾಗೂ ಇಲ್ಲಿ ಇನ್ನು ಮುಂದೆ ಕಂಡು ಬರುವ ಉದ್ದೇಶಗಳಿಗಾಗಿ ಒಂದು ಕಾನೂನನ್ನು ರಚಿಸಲು ಕೂಡಲೇ ಕ್ರಮ ಕೈಗೊಳ್ಳುವುದನ್ನು ಅವಶ್ಯಗೊಳಿಸುವಂಥ ಸನ್ನಿವೇಶಗಳು ಉಂಟಾಗಿವೆ ಎಂದು ಕರ್ನಾಟಕ ರಾಜ್ಯಪಾಲರಿಗೆ ಮನದಟ್ಟಾಗಿರುವುದರಿಂದ;

ಈಗ, ಕರ್ನಾಟಕ ರಾಜ್ಯಪಾಲರು ಭಾರತ ಸಂವಿಧಾನದ 213ನೇ ಅನುಚ್ಛೇದದ (1) ನೇ ಖಂಡದಿಂದ ಪ್ರದತ್ತವಾದ ಅಧಿಕಾಗಳನ್ನು ಚಲಾಯಿಸಿ, ಈ ಮುಂದಿನ ಅಧ್ಯಾದೇಶವನ್ನು ಪ್ರಖ್ಯಾಪಿಸಿದ್ದಾರೆ, ಎಂದರೆ -

**1. ಸಂಕ್ಷಿಪ್ತ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ:**

(1) ಈ ಅಧಾದೇಶವನ್ನು ಕರ್ನಾಟಕ ಕೊರಗರ (ಅಜಲು ಪದ್ಧತಿ ನಿಷೇಧ) ಅಧ್ಯಾದೇಶ, 2000 ಎಂದು ಕರೆಯತಕ್ಕದ್ದು.

(2) ಇದು ಸಮಗ್ರ ಕರ್ನಾಟಕ ರಾಜ್ಯಕ್ಕೆ ಅನ್ವಯವಾಗತಕ್ಕದ್ದು.

(3) ಇದು ಕೂಡಲೇ ಜಾರಿಗೆ ಬರತಕ್ಕದ್ದು.

2. ಪರಿಭಾಷೆಗಳು: ಈ ಅಧ್ಯಾದೇಶದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು

(ಎ) "ಅಜಲು ಪದ್ಧತಿ ಎಂದರೆ,-

(i) ಕೊರಗರಿಂದ ಪಡೆದ ಸೇವೆಗಾಗಿ ಅವರಿಗೆ ಮಜೂರಿ ನೀಡದೆ ಅಥವಾ ಕಡಿಮೆ ಮಜೂರಿ ನೀಡುವ ಮೂಲಕ ಕೊರಗರ ಹಾಗೂ ಇತರ ಸಮುದಾಯಗಳಿಗೆ ಸೇರಿದ ವ್ಯಕ್ತಿಗಳ ನಡುವೆ ತಾರತಮ. ಮಾಡುವ;

(ii) ಇತರರಿಗೆ ಹೋಲಿಸಲಾಗಿ ಕೊರಗರನ್ನು ಕೀಳು ಮನುಷ್ಯರೆಂದು ಪರಿಗಣಿಸುವ;

(iii) ಅಹಾರದಲ್ಲಿ ಕೂದಲು, ಉಗುರುಗಳು ಅಥವಾ ಇತರ ಯಾವುದೇ ತಿನ್ನಲಾಗದ ಅಥವಾ ಹಾನಿಕರ ಪದಾರ್ಥಗಳನ್ನು ಬೆರೆಸುವ ಮತ್ತು ಆ ಆಹಾರವನ್ನು ತಿನ್ನುವಂತೆ ಕೊರಗರನ್ನು ಕೇಳುವ;

(iv) ಕಂಬಳಕ್ಕೆ ಮೊದಲು ಕೊರಗರನ್ನು ಓಡಿಸುವ - ಯಾವುದೇ ಕಾರ್ಯ ಅಥವಾ ಸಮಾರಂಭದ ಆಚರಣೆ.

(ಬಿ) 'ಕಂಬಳ' ಎಂದರೆ, ಕೆಸರಿನಲ್ಲಿ ಕೋಣಗಳನ್ನು ಓಡಿಸುವುದು;

(ಸಿ) 'ಕೊರಗ' ಎಂದರೆ, ಕೊರಗ ಸಮುದಾಯಕ್ಕೆ ಸೇರಿದ ಯಾವುದೇ ವಯಸ್ಸಿನ ಆದಿವಾಸಿ ಬುಡಕಟ್ಟಿನ ಒಬ್ಬ ವ್ಯಕ್ತಿ.

**3. ಅಜಲು ಪದ್ಧತಿಯ ನಿಷೇಧ:** ಯಾವುದೇ ಕಾನೂನು ಅಥವಾ ಯಾವುದೇ ಹೆಸರಿನಿಂದ ಕರೆಯಲಾಗುವ ರೂಢಿ, ಆಚರಣೆ ಅಥವಾ ಪದ್ಧತಿಯಲ್ಲಿ ಏನೇ ಒಳಗೊಂಡಿದ್ದಾಗ್ಯೂ ಯಾವೊಬ್ಬ ವ್ಯಕ್ತಿಯು, ಕೊರಗರ ಒಪ್ಪಿಗೆ ಪಡೆದು ಅಥವಾ ಒಪ್ಪಿಗೆ ಇಲ್ಲದೆ ಅಜಲು ಪದ್ಧತಿಗಾಗಿ ಅವರ ಸೇವೆಗಳನ್ನು ಬಳಸಿಕೊಳ್ಳತಕ್ಕದ್ದಲ್ಲ.

**4. ದಂಡನೆ:** ಈ ಅಧ್ಯಾದೇಶದ ಪ್ರಾರಂಭದ ತರುವಾಯ ಯಾವೊಬ್ಬ ವ್ಯಕ್ತಿಯು, ಅಜಲು ಪದ್ಧತಿಗಾಗಿ ಕೊರಗರ ಸೇವೆಗಳನ್ನು ಬಳಸಿಕೊಂಡರೆ ಅಥವಾ ಬಳಸಿಕೊಳ್ಳಲು ಪ್ರೇರೇಪಿಸಿದರೆ, ಅವನು ದೋಷಸಿದ್ಧಿಯಾದ ತರುವಾಯ, ಆರು ತಿಂಗಳಿಗಿಂತ ಕಡಿಮೆಯಿಲ್ಲದ ಆದರೆ ಐದು ವರ್ಷಗಳವರೆಗೆ ವಿಸ್ತರಿಸಬಹುದಾದ ಒಂದು ಅವಧಿಯ ಕಾರಾವಾಸದಿಂದ ಮತ್ತು ಐದು ಸಾವಿರ ರೂಪಾಯಿಗಳಿಗೆ ಮೀರದ ಜುಲ್ಮಾನೆಯಿಂದ ದಂಡನೀಯನಾಗತಕ್ಕದ್ದು.

**5. ಸದ್ಭಾವನೆಯಿಂದ ಕೈಗೊಂಡ ಕ್ರಮದ ಬಗ್ಗೆ ರಕ್ಷಣೆ:** ಈ ಅಧ್ಯಾದೇಶದ ಅಡಿಯಲ್ಲಿ ಸದ್ಭಾವನೆಯಿಂದ ಮಾಡಿದ ಅಥವಾ ಮಾಡಲು ಉದ್ದೇಶಿಸಿದ ಯಾವುದೇ ಕಾರ್ಯಕ್ಕಾಗಿ ಸರ್ಕಾರದ ಅಥವಾ ಮಾಡಲು ಉದ್ದೇಶಿಸಿದ ಯಾವುದೇ ಕಾರ್ಯಕ್ಕಾಗಿ ಸರ್ಕಾರದ ಅಥವಾ ಯಾವೊಬ್ಬ ವ್ಯಕ್ತಿಯ ವಿರುದ್ಧ ಯಾವುದೇ ದಾವೆ, ಪ್ರಾಸಿಕ್ಯೂಷನ್ ಅಥವಾ ಇತರ ಕಾನೂನು ವ್ಯವಹರಣೆಗಳನ್ನು ಹೂಡತಕ್ಕದ್ದಲ್ಲ.

**6. ನಿಯಮಗಳ ರಚನಾಧಿಕಾರ:**

(a) ರಾಜ್ಯ ಸರ್ಕಾರವು, ಪೂರ್ವ ಪ್ರಕಟಣೆಯ ನಂತರ, ಅಧಿಸೂಚನೆಯ ಮೂಲಕ ಈ ಅಧ್ಯಾದೇಶದ ಉದ್ದೇಶಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ನಿಯಮಗಳನ್ನು ರಚಿಸಬಹುದು.

(b) ಈ ಅಧ್ಯಾದೇಶದ ಅಡಿಯಲ್ಲಿ ರಚಿಸಿದ ಪ್ರತಿಯೊಂದು ನಿಯಮವನ್ನು ಅದನ್ನು ರಚಿಸಿದ ತರುವಾಯ ಆದಷ್ಟು ಬೇಗನೆ, ರಾಜ್ಯ ವಿಧಾನ ಮಂಡಲದ ಪ್ರತಿಯೊಂದು ಸದನದ ಮುಂದೆ ಒಂದು ಅಧಿವೇಶನದಲ್ಲಿ ಅಥವಾ ಎರಡು ಅಥವಾ ಹೆಚ್ಚು ನಿರಂತರ ಅಧಿವೇಶನಗಳಲ್ಲಿ ಅಡಕವಾಗುವ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಅದು ಅಧಿವೇಶನದಲ್ಲಿರುವಾಗ ಮಂಡಿಸತಕ್ಕದ್ದು ಮತ್ತು ಮೇಲೆ ಹೇಳಿದ ಅಧಿವೇಶನದ ನಿಕಟೋತ್ತರ ಅಧಿವೇಶನ ಅಥವಾ ನಿರಂತರ ಅಧಿವೇಶನಗಳು ಮುಕ್ತಾಯವಾಗುವ ಮೊದಲು ಅಂಥ ಯಾವುದೇ ನಿಯಮದಲ್ಲಿ ಯಾವುದೇ ಮಾರ್ಪಾಟನ್ನು ಮಾಡಬೇಕೆಂದು ಉಭಯ ಸದನಗಳು ಒಪ್ಪಿದರೆ, ಆ ನಿಯಮಗಳು ತದನಂತರ ಹಾಗೆ ಮಾರ್ಪಾಟಾದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಸಂದರ್ಭಾನುಸಾರ ಪರಿಣಾಮಕಾರಿಯಾಗತಕ್ಕದ್ದಲ್ಲ. ಆದಾಗ್ಯೂ ಅಂಥ ಯಾವುದೇ ಮಾರ್ಪಾಟು ಅಥವಾ ರದ್ದಿಯಾತಿಯು ಆ ನಿಮಯಮದ ಅಡಿಯಲ್ಲಿ ಹಿಂದೆ ಮಾಡಲಾದ ಯಾವುದೇ ಕಾರ್ಯದ ಮಾನ್ಯತೆಗೆ ಬಾಧಕವಾಗತಕ್ಕದ್ದಲ್ಲ.

ವಿ.ಎಸ್. ರಮಾದೇವಿ

ಕರ್ನಾಟಕದ ರಾಜ್ಯಪಾಲರು
ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

**(ಮ. ರಾ. ಹೆಗಡೆ)**
ಸರ್ಕಾರದ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು
ಶಾಸನ ರಚನೆ ಇಲಾಖೆ



ಕರ್ನಾಟಕ ಸರ್ಕಾರದ ಸಚಿವಾಲಯ;
ಬಹುಮಹಡಿ ಕಟ್ಟಡ

# ಸುತ್ತೋಲೆ

## ವಿಷಯ : ದಕ್ಷಿಣ ಕನ್ನಡ, ಉಡುಪಿ ಜಿಲ್ಲೆಗಳಲ್ಲಿ ಕಂಡುಬರುವ ಅಜಲು ನಿರ್ಮೂಲನೆ ಕುರಿತು

ಕರ್ನಾಟಕ ರಾಜ್ಯದಲ್ಲಿನ ದಕ್ಷಿಣ ಕನ್ನಡ : ಉಡುಪಿ ಜಿಲ್ಲೆಯ ಕೆಲವು ಕಡೆ ಅಜಲು ಪದ್ಧತಿಯು ಇನ್ನೂ ಕಾರ್ಯಾಚರಣೆಯಲ್ಲಿರುವ ವಿಷಯವು ಸರ್ಕಾರದ ಗಮನಕ್ಕೆ ಬಂದಿದೆ. ಇಂತಹ ಅಜಲು ಪದ್ಧತಿಯು ಮಾನವ ಜನಾಂಗಕ್ಕೆ ಅಸಹ್ಯ ತರುವಂತ ವಿಚಾರವಾಗಿದ್ದು ಅತ್ಯಂತ ಗಂಭೀರವಾದ ಕ್ರಮ ಜರಗಿಸುವುದು ಸರ್ಕಾರದ ಆದ್ಯ ಕರ್ತವ್ಯವಾಗಿದೆ. ಕೊರಗರ ಅಭಿವೃದ್ಧಿ ಕಾರ್ಯಕ್ರಮದಲ್ಲಿ ಯಾವದೇ ತೊಂದರೆ, ಹಿಂಸೆ, ಬಲಪ್ರಯೋಗ, ಮುಂತಾದವುಗಳು ಕಂಡುಬಂದಲ್ಲಿ ಶಾಸನಾತ್ಮಕ ಬಲವನ್ನು ಪ್ರಯೋಗಿಸುವುದು ಅನಿವಾರ್ಯವಾಗಿದೆ. ಈ ಪಿಡುಗನ್ನು ನಿವಾರಿಸಲು ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕೊರಗರ ತಂಡಗಳನ್ನು ರಚಿಸಲು ಹಾಗೂ ತಂಡಗಳಲ್ಲಿ ಸಂಬಂಧಿಸಿದ ಶಾಸಕರನ್ನು ಸೇರಿಸಲು ಕ್ರಮವಾಗಬೇಕಾಗಿದೆ.

ಸದರಿ ವಿಷಯ ಬಗ್ಗೆ ಅಜಲು ಪದ್ಧತಿ ನಿಷೇಧ ಮಾಡಲು ಕೊರಗರ ಜನಾಂಗದವರಿಗೆ ಕ್ಷೇಮಾಭಿವೃದ್ಧಿ ಯೋಜನೆಗಳನ್ನು ಕಲ್ಪಿಸಲು ಕೆಳಕಂಡ ಅಗತ್ಯ ಕ್ರಮಗಳನ್ನು ಕೈಗೊಳ್ಳಲು ಸಂಬಂಧಿಸಿದ ಅಧಿಕಾರಿಗಳಿಗೆ ಸೂಚನೆ ನೀಡಲಾಗಿದೆ.

1. ಕೊರಗರಿಗೆ ಕ್ರೀಡೆ ಮತ್ತು ಸಂಗೀತದಲ್ಲಿ ವಿಶೇಷ ತರಬೇತಿಯನ್ನು ನೀಡಲು ಒಂದು ಕಾರ್ಯಕ್ರಮ ರೂಪಿಸುವುದು.

2. ಅಜಲು ಪದ್ಧತಿ ನಿವಾರಣೆಗಾಗಿ ಅಮಾವಾಸ್ಯೆ ದಿನಗಳಲ್ಲಿ ವಿಶೇಷ ಆಂದೋಲನ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳತಕ್ಕದ್ದು ಮತ್ತು ಈ ಪದ್ಧತಿಯನ್ನು ಆಚರಿಸುವವರ ವಿರುದ್ಧ ಕಾಯಿದೆ ಪ್ರಕಾರ ಮೊಕದ್ದಮೆ ಹೂಡತಕ್ಕದ್ದು.

ದಕ್ಷಿಣ ಕನ್ನಡ ಜಿಲ್ಲೆ- ಉಡುಪಿ ಜಿಲ್ಲೆಗಳ ವ್ಯಾಪ್ತಿಯಲ್ಲಿ ಅಜಲು ಪದ್ಧತಿಯನ್ನು ನಿವಾರಿಸುವ ಸಲುವಾಗಿ ಮತ್ತು ಕೊರಗರ ಅಭಿವೃದ್ಧಿ ಪರಿಶೀಲನೆ ಮಾಡುವ ಕುರಿತು ಸದರಿ ಜಿಲ್ಲೆಗಳಲ್ಲಿನ ಪ್ರತಿ ವಿಧಾನ ಸಭಾ ಕ್ಷೇತ್ರದಲ್ಲಿ ಈ ಕೆಳಕಂಡ ತಂಡವನ್ನು ರಚಿಸಿ ಪರಿಶೀಲಿಸಲು ಸೂಚಿಸಿದೆ.

a) ಸಂಬಂಧಿಸಿದ ತಹಶೀಲ್ದಾರ್

b) ಕಾರ್ಯನಿರ್ವಹಣಾಧಿಕಾರಿ, ತಾಲೂಕುಪಂಚಾಯತ್

c) ಪೋಲೀಸ್ ಇಲಾಖೆಯ ವೃತ್ತ ನಿರೀಕ್ಷಕ

d) ಸಂಬಂಧಿಸಿದ ತಾಲೂಕು, ಸಮಾಜ ಕಲ್ಯಾಣಾಧಿಕಾರಿ

e) ಸಂಬಂಧಿಸಿದ ತಾಲೂಕು ಅಧಿಕಾರಿ; ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮ.

ಮೇಲ್ಕಂಡ ಸಮಿತಿಯು ಮಾಸಿಕ ಸಭೆ ನಡೆಸಿ, ಈ ಅಜಲು ಪದ್ಧತಿಯ ನಿರ್ಮೂಲನೆಗೆ ತಾಲೂಕಿನಲ್ಲಿ ಪ್ರವಾಸ ಮಾಡಿ ಕ್ರಮ ಜರಗಿಸತಕ್ಕದ್ದು.

ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅಜಲು ಪದ್ಧತಿ ಆಚರಣೆಯಲ್ಲಿರುವ ಮಾಹಿತಿ ಯಾವುದೇ ಸ್ಥಳದಲ್ಲಿ ಕಂಡುಬಂದಲ್ಲಿ ಅದನ್ನು ಸಂಪೂರ್ಣವಾಗಿ ನಿಷೇಧಿಸಲು ಜಿಲ್ಲಾಧಿಕಾರಿಗಳು, ಜಿಲ್ಲಾ ಸೂಪರಿಂಡೆಂಟ್ ಆಫ್ ಪೋಲೀಸ್, ಸಂಬಂಧಿಸಿದ ತಹಶೀಲ್ದಾರ್, ಸಂಬಂಧಿಸಿದ ಪೋಲೀಸ್ ಇನ್ಸ್‌ಪೆಕ್ಟರ್‌ರವರು ಅಗತ್ಯ ಕ್ರಮ ಜರುಗಿಸತಕ್ಕದ್ದು. ಇದರಲ್ಲಿ ನಿರ್ಲಕ್ಷ್ಯ ತೋರುವಂತಹ ಅಧಿಕಾರಿಗಳು ಸರ್ಕಾರದ ಗಮನಕ್ಕೆ ಬಂದಲ್ಲಿ, ಇಂತಹ ಅಧಿಕಾರಿಗಳನ್ನು ಜವಾಬ್ದಾರರನ್ನಾಗಿ ಮಾಡಿ ಕಾನೂನು ಪ್ರಕಾರ ಶಿಸ್ತಿನ ಕ್ರಮ ಜರುಗಿಸುವ ಬಗ್ಗೆ ಕ್ರಮ ಕೈಗೊಳ್ಳಲಾಗುವುದೆಂಬ ಅಂಶವನ್ನು ತಿಳಿಯಬಯಸಿದೆ.

ಅಜಲು ಪದ್ಧತಿ ಆಚರಣೆ ಮಾಡದ ಪ್ರಕರಣಗಳು ಕಂಡುಬಂದಲ್ಲಿ ಅಂತಹ ಪ್ರಕರಣಗಳನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಮೇಲೆ ದೌರ್ಜನ್ಯ ನಿಷೇಧ ಅಧಿನಿಯಮ 1989ರ ಅಡಿಯಲ್ಲಿ ನೋಂದಾಯಿಸಲು ಅಧಿನಿಯ ಅಡಿಯಲ್ಲಿ ಉಪಲಬ್ಧಗಳು ಮೇರೆಗೆ ಕ್ರಮ ಜರುಗಿಸತಕ್ಕದ್ದು. ಇಂತಹ ಪ್ರಕರಣಗಳ

ಪಟ್ಟಿಯನ್ನು ಜಿಲ್ಲಾಮಟ್ಟದ... ದೌರ್ಜನ್ಯ ನಿಷೇಧ... ಸಮಿತಿಯ ಮುಂದೆ ಪರಾಮರ್ಶೆಗಾಗಿ ಪ್ರತಿ ತಿಂಗಳು ಮಂಡಿಸುವುದು.

ಸಹಿ

(ಎಂ.ಎಸ್. ಮರುಳ ಸಿದ್ಧಯ್ಯ)

ಸರ್ಕಾರದ ಅಧೀನ ಕಾರ್ಯದರ್ಶಿ

ಸಮಾಜ ಕಲ್ಯಾಣ ಇಲಾಖೆ

ಸಂಕಲನಕಾರರು, ಕರ್ನಾಟಕ ರಾಜ್ಯ ಪತ್ರ ಬೆಂಗಳೂರು, ಇವರಿಗೆ ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಲು ಹಾಗೂ ಪ್ರಕಟಿಸಿದ ಪ್ರತಿಗಳನ್ನು ಸರ್ಕಾರಕ್ಕೆ ಕಳುಹಿಸುವಂತೆ ಕೋರಿದೆ.

ಪ್ರತಿ

1. ಆಯುಕ್ತರು ಸಮ್ಮಾಜ ಕಲ್ಯಾಣ ಇಲಾಖೆ, ಬೆಂಗಳೂರು
2. ಜಿಲ್ಲಾಧಿಕಾರಿಗಳು, ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆ
3. ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಎಲ್ಲಾ ತಹಶೀಲ್ದಾರರುಗಳಿಗೆ
4. ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಪೋಲೀಸ್ ಸೂಪರಿಂಡೆಂಟ್‌ರವರಿಗೆ
5. ನಿರ್ದೇಶಕರು, ಪರಿಶಿಷ್ಟ ಪಂಗಡಗಳ ಕಲ್ಯಾಣ ಇಲಾಖೆ ಬೆಂಗಳೂರು, ಸದರಿ ಸುತ್ತೋಲೆಯನ್ನು ಸಂಬಂಧಿಸಿದ ಜಿಲ್ಲಾ ಅಧಿಕಾರಿ: ಶಾಸಕರುಗಳ ಗಮನಕ್ಕೆ ತರಲು ಸೂಚಿಸಿದೆ.
6. ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಎಲ್ಲಾ ತಾಲೂಕು ಕಾರ್ಯನಿರ್ವಹಣಾಧಿಕಾರಿಗಳು, ತಾಲೂಕ್ ಪಂಚಾಯತ್ ಪಿ.ಸಿ.ಓ, ಐ.ಡಿ.ಡಿ.ಪಿ. , ವಿಧಾನಸಭಾ ಕ್ಷೇತ್ರದ ಎಲ್ಲಾ ಶಾಸಕರು, ಎಲ್ಲಾ ಠಾಣೆಗಳ ಪೋಲೀಸ್ ಇನ್ಸ್‌ಪೆಕ್ಟರ್‌ರವರಿಗೆ.
7. ಇತರ : a) ಮಾನ್ಯ ಸಮಾಜ ಕಲ್ಯಾಣ ಸಚಿವರ ಆಪ್ತ ಕಾರ್ಯದರ್ಶಿ.
   b) ಮಾನ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.





ಕೊರಗರ ಕೊಪ್ಪ ಕಟಪಾಡಿ, ಉಡುಪಿ ತಾಲೂಕು





ವಿವಿಧ ಪರಿಕರಗಳನ್ನು ಹೆಣೆಯುತ್ತಿರುವಲ್ಲಿ ನಿರತರಾಗಿರುವ ಕೊರಗ
ಹಿರಿಯ ಪುರುಷ ಮತ್ತು ಮಹಿಳೆ



ಬಿಳಲುಗಳು



ಕಲಾತ್ಮಕ ಬುಟ್ಟಿಗಳು



ಬೆತ್ತದ ಬುಟ್ಟಿ



ಬಿಳಲಿನ ಸಿಬ್ಲ



ಬುಟ್ಟಿ



ಬಿಳಲಿನ ಕುಂಟಾಯಿ(ಕಬೆಗೂಡು)



ಕೊರಗರ ದೃಷ್ಟಿಬೊಟ್ಟು





ಹಳೆಯ ಬಾವಿಗಳು







ಕುಲಕಸುಬಿನಲ್ಲಿ ನಿರತರಾದ ಕೊರಗರು



ಬಿಳಲಿನಿಂದ ಸಿಬ್ಲ ತಯಾರಿಸುತ್ತಿರುವ
ಕೊರಗ ಮಹಿಳೆ



ಗೇರುಬೀಜ ಸಂಸ್ಕರಣೆ ಉದ್ಯೋಗದಲ್ಲಿ ತೊಡಗಿರುವ ಕೊರಗ ಮಹಿಳೆ





ಕೊಪ್ಪದಲ್ಲಿ ಕೊರಗ ಹುಡುಗ, ಮಹಿಳೆ ಮತ್ತು ಮಗು



ಕೊರಗರ ಮಕ್ಕಳ ಆಟಿಕೆ, ಹಿನ್ನೆಲೆಯಲ್ಲಿ ತಟ್ಟಿ

## ಕೊರಗರ ಕಾಲನಿ - ಕಾಪು











ಬಯಲಿನಲ್ಲಿ ಸ್ನಾನದ ತಟ್ಟೆ





ಆಧುನಿಕರಣಗೊಂಡಿರುವ ಸ್ನಾನದ ಕೋಣೆ



ಕೊರಗರ ಕೊಪ್ಪದಲ್ಲಿ ಆಧುನಿಕ ಸಲಕರಣೆ



ಮನೆಗಳಿಗೆ ಸೋಲಾರ್ ದೀಪದ ವ್ಯವಸ್ಥೆ



ಕೊರಗರ ಮಲ್ಲಿಗೆ ಕೃಷಿ, ಹಿನ್ನೆಲೆಯಲ್ಲಿ ಕೊಪ್ಪಗಳು



ಕೊರಗರ ಸೇವಂತಿಗೆ ಕೃಷಿ



ಸ್ಥಿತ್ಯಂತರಗೊಂಡ ಕೊರಗರ ದೇವತಾರಾಧನೆ



ಆಧುನಿಕರಣಗೊಂಡಿರುವ ಕೊರಗರ ಮನೆ



ಆಧುನಿಕರಣಗೊಂಡಿರುವ ಕೊರಗರ ಅಡುಗೆ ಮನೆ ಪರಿಕರಗಳು



ಬದಲಾದ ಕಾಲಘಟ್ಟದಲ್ಲಿ ಕೊರಗರ ಮನೆ



ಮನೆಯ ಪರಿಸರ



ಸರ್ಕಾರದಿಂದ ಪಡೆದ ನೀರಾವಳಿ ಸೌಲಭ್ಯ



ಕೊರಗರ ಹಂಚಿನ ಮನೆ



ಸರ್ಕಾರದ ಸೌಲಭ್ಯ ಆಧುನಿಕ ಬಾವಿ



ಕುಡುಗೋಲನ್ನು ಹರಿತಗೊಳಿಸಲು ಬಳಸುವ ವಿಧಾನ



ಕುಡುಗೋಲು ಹರಿತ ಗೊಳಿಸಲು
ಕಲ್ಲಿನ ಪುಡಿ



ಪ್ರಾಣಿಗಳನ್ನು ಬೆದರಿಸಲು
ಬಳಸುವ ಚಾಟಿ



ಕುಡುಗೋಲು ಹರಿತ ಗೊಳಿಸಲು
ಕಲ್ಲಿನ ಪುಡಿ



ಚಾಟಿ (ಹಕ್ಕಿ ಬೇಟೆಗಾಗಿ)



ಆಧುನಿಕ ಪರಿಕರಗಳು



ಕೊರಗರು ಬಳಸುತ್ತಿರುವ ಆಧುನಿಕ ಪರಿಕರಗಳು



ಹಿರಿಯ ಕೊರಗ



ನವಜಾತ ಶಿಶುವಿನೊಂದಿಗೆ ಕೊರಗ ಮಹಿಳೆ



ಮೀನು ಹಿಡಿಯುವ ಪರಿಕರಗಳು



ಶಾಲೆಯಲ್ಲಿ ಶಿಕ್ಷಣ ಪಡೆಯುತ್ತಿರುವ ಕೊರಗ ಮಕ್ಕಳು





ಬದಲಾದ ಕಾಲಘಟ್ಟದಲ್ಲಿ ಆಧುನಿಕ ಉಡುಪು ಧರಿಸಿದ ಕೊರಗ ಮಕ್ಕಳು




ಕೊರಗರ ಧಾರ್ಮಿಕ ಪೂಜಾ ನೆಲೆ



ಕೊರಗರ ಧಾರ್ಮಿಕ ಪೂಜಾಸ್ಥಳ

